# ವೈಷ್ಣವ ಕ್ಷೇತ್ರ ದರ್ಶನ

ಲೇಖಕರು

ಶ್ರೀ ರಘೋತ್ತಮ ತೀರ್ಥರು



ತಿರುಮಲ ತಿರುಪತಿ ದೇವಸ್ಥಾನದ
ಧನ ಸಹಾಯ ಪಡೆದು
ಈ ಗ್ರಂಥವನ್ನು ಮುದ್ರಿಸಲಾಗಿದೆ.

ಹರಿ ಓಂ

ಅಳಗರ್ ಸುಂದರರಾಜ ಪ್ರಸನ್ನ

ಮೆಟ್ಟಿ ಪುಣ್ಯಕ್ಷೇತ್ರಗಳನು

ಸುಟ್ಟುಹೋಗುವುದಯ್ಯ ಪಾಪ

ಶ್ರೀ ಪುರಂದರ ದಾಸರು

# ವೈಷ್ಣವ ಕ್ಷೇತ್ರ ದರ್ಶನ

ದಕ್ಷಿಣ ಭಾರತದ 450ಕ್ಕೂ ಹೆಚ್ಚಾದ ತೀರ್ಥಯಾತ್ರೆ ಸ್ಥಳಗಳ ಸಮಗ್ರದರ್ಶನದ ಕೈಪಿಡಿ
ಕರ್ನಾಟಕ, ತಮಿಳುನಾಡು, ಕೇರಳ, ಆಂದ್ರಪ್ರದೇಶ, ಮಹಾರಾಷ್ಟ್ರ ಮತ್ತು ಭಾಗಶಃ ಒರಿಸ್ಸಾ ರಾಜ್ಯಗಳ
ವೈಷ್ಣವ ಕ್ಷೇತ್ರಗಳ ಪರಿಚಯ (ತೀರ್ಥಯಾತ್ರಾ ವಿಧಿ ಸಹಿತ)

ಗ್ರಂಥಕರ್ತರು ಮತ್ತು ಪ್ರಕಾಶಕರು

ಮೈ. ಹ. ರಘೋತ್ತಮ ತೀರ್ಥರು

715, ಬೋಗಾದಿ ಎರಡನೆ ಹಂತ (ದಕ್ಷಿಣ)

ಮೈಸೂರು - 6

ಫೋನ್ : 544542

ದಿ॥ ಭಾರತೀಬಾಯಿ ಸ್ಮಾರಕ ಗ್ರಂಥಮಾಲೆ

ಮೈಸೂರು

Published by the Author. 715. Bhogadi layout (South), II Sta
Mysore - 570 006

ಪ್ರಥಮ ಮುದ್ರಣ : 1999

ಮುದ್ರಿತ ಪ್ರತಿಗಳು : 1000

ಪುಟಗಳು : xvi + 187



ಬೆಲೆ : ರೂ. 60-00

ಅಕ್ಷರ ವಿನ್ಯಾಸ : ಹರ್ಷ ಪ್ರಿಂಟರ್ಸ್, ಬಸವೇಶ್ವರ ರಸ್ತೆ, 15ನೆಯ ತಿರುವು, ಮೈಸೂರು.
ದೂರವಾಣಿ : 4491

ಮುದ್ರಕರು : ಶ್ರೀ ಸದ್ಗುರು ಪ್ರಿಂಟರ್ಸ್, ರಾಮಾನುಜ ರಸ್ತೆ, ಮೈಸೂರು.
ದೂರವಾಣಿ : 4426

ತೀರ್ಥಯಾತ್ರೆಯೇ ತಮ್ಮ ಜೀವನದ ಮಹದುದ್ದೇಶ ಎಂದರಿತು
ಅದರಂತೆ ಭಾರತಾದ್ಯಂತ ತೀರ್ಥಯಾತ್ರೆ ಮಾಡಿ ಪುನೀತರಾದ
ನನ್ನ ಜನ್ಮದಾತ ಮಾತಾಪಿತೃಗಳಾದ

**ಎಂ. ಎಸ್. ಹನುಮಂತನ್**

ಮತ್ತು

**ಶ್ರೀಮತಿ ಭಾರತೀಬಾಯಿಯವರ**

ಅಡಿದಾವರೆಗಳಲ್ಲಿ ಸಮರ್ಪಣೆ

# ಈ ಗ್ರಂಥದ ಬಗೆಗಿನ ಅಭಿಪ್ರಾಯಗಳು

ಇಗೋ ನಿಮ್ಮ ಕೈಯಲ್ಲಿ ತೀರ್ಥಯಾತ್ರೆ, ಕ್ಷೇತ್ರಾಟನೆ ಮಾಡಬಯಸುವವರಿಗೆ ದಾರಿದೀಪದಂತಿರುವ ಗ್ರಂಥವಿದೆ. ಇದನ್ನು ರಚಿಸಿ ನಿಮ್ಮ ಮಡಿಲಲ್ಲಿ ಹಾಕಿರುವವರು ನನ್ನ ಮಿತ್ರರಾದ ಶ್ರೀ ರಘೋತ್ತಮ ತೀರ್ಥರು. ಇವರು ಅಧ್ಯಾಪಕ ವೃತ್ತಿಯಲ್ಲಿ ಹಲವು ದಶಕಗಳ ಕಾಲ ಹೆಚ್ಚಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯಾಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿ ಪದವಿಪೂರ್ವ ಕಾಲೇಜುಗಳಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ನಿವೃತ್ತಿ ಹೊಂದಿದ್ದರೂ, ಹೆಸರಿಗೆ ತಕ್ಕಂತೆ ತೀರ್ಥಯಾತ್ರೆಗಳನ್ನು ಕೈಗೊಂಡು ತಮ್ಮ ಅನುಭವವೇದ್ಯವಾದ ಈ ಗ್ರಂಥವನ್ನು ರಚಿಸಿದ್ದಾರೆ. ಇದು ಅವರ ಲೇಖನ ವ್ಯವಸಾಯದ ಪ್ರತೀಕ. ಪ್ರಸ್ತುತ ಗ್ರಂಥಕರ್ತರು ಮೈಸೂರು ಜಿಲ್ಲೆಯಿಂದ ಪ್ರಾರಂಭಿಸಿ ಕರ್ನಾಟಕದ ವಿವಿಧ ಕ್ಷೇತ್ರಗಳ ಸಂದರ್ಶನ ಮಾಡಿಸಿ, ನೆರೆಯ ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರ, ಕೇರಳ, ಒರಿಸ್ಸಾದ ಹಲವು ಭಾಗಗಳ ಕ್ಷೇತ್ರಯಾತ್ರೆ ಮಾಡಿಸಿದ್ದಾರೆ. ಲೇಖಕರ ಅನುಭವದ ನಿರೂಪಣಾ ಶೈಲಿ ಪುಸ್ತಕವನ್ನು ಓದತೊಡಗಿದರೆ ಕೊನೆಯವರೆಗೂ ಓದಿಸಿಕೊಂಡು ಹೋಗುವಂತಿದೆ. ಈ ಪುಸ್ತಕವು ಪ್ರತಿಮನೆಯಲ್ಲೂ ಇರಬೇಕಾದ ಗ್ರಂಥ......

ಶ್ರೀ ವಿ. ಎಸ್. ಸಂಪತ್ಕುಮಾರಾಚಾರ್ಯ
ಕರ್ನಾಟಕ ಕಲಾ ತಿಲಕ
ವಿಶ್ರಾಂತ ಪ್ರಾಧ್ಯಾಪಕರು, ಸಂಗೀತ ಶಾಸ್ತ್ರಜ್ಞರು
ಲೇಖಕರು, ವಿಮರ್ಶಕರು

ಮೈಸೂರು
14-8-99

'ವೈಷ್ಣವ ಕ್ಷೇತ್ರದರ್ಶನ' ಒಂದು ದೈಹಿಕ ತಪಶ್ಚರ್ಯೆ. ಜ್ಞಾನವಿಕಾಸಕ್ಕೆ ಪೂರಕ. ಮುಕ್ತಿಯ ಸುವರ್ಣಸೋಪಾನ. "ನಮಾಧವ ಸಮೋದೇವಃ ನಚಮಧ್ವ ಸಮೋಗುರು" ಎಂಬ ಏಕನಿಷ್ಠೆಯ ವ್ರತ ತೊಟ್ಟವನಿಗೆ ಪ್ರತಿಯೊಂದು ಮಾಧ್ವ-ವೈಷ್ಣವ ಕ್ಷೇತ್ರಗಳೂ ಭವತಾರಕ, ಸುವರ್ಣಸೇತುವೆಗಳು, ಹರಿಗುರುಗಳ ಚರಣಧೂಳು ಬಿದ್ದೆಡೆಯೇ ಬೃಂದಾವನ, ಮಂತ್ರಾಲಯ ; ಇಂಥಹ ಕ್ಷೇತ್ರ ಮಾಹಿತಿಗಳನ್ನೂ ಬಹುಶ್ರಮಪಟ್ಟು ಶ್ರೀಯುತರು ಸಂಗ್ರಹಿಸಿ ಅದು ಸಜ್ಜನ ಭಕ್ತವೃಂದಕ್ಕೆ ಉಪಯೋಗವಾಗಲಿ ಎಂದು ಮೇಳೈಸಿ ಇತ್ತಿದ್ದಾರೆ. ಈ ಶ್ರಮವು ಅವರ ಒಂದು ಪೂಜಾಕೈಂಕರ್ಯವೇ ಎಂದು ನಮ್ಮ ಅನಿಸಿಕೆ. ಅದು ಇಲ್ಲಿ ಸಾರ್ಥಕ ಪೂಜೆಯಾಗಿದೆ ಎಂದು ಇದನ್ನೋದಿದಾಗ ಅನ್ನಿಸುತ್ತದೆ.

ಮೈಸೂರು
17-8-99

ಡಾ॥ ರಮಾದೇವಿ ಮೂರ್ತಿ

# ಲೇಖಕನ ನಾಲ್ಕು ಮಾತುಗಳು

ಮಹಾಪುಣ್ಯ ಸಂಚಯಾತ್
ಕ್ಷೇತ್ರ ದರ್ಶನಂ ಲಭ್ಯತೆ

ಇದೊಂದು ಕತೆ ಕಾದಂಬರಿಯಲ್ಲದಿದ್ದರೂ ಸಮಸ್ತ ದ.ಭಾರತದ ನೂರಾರು ತೀರ್ಥಕ್ಷೇತ್ರಗಳ ಚಿತ್ರಣ. ವಿಂಧ್ಯ ಪರ್ವತಗಳ ದಕ್ಷಿಣಕ್ಕಿರುವ ಈ ಪ್ರದೇಶವು ರಾಮೇಶ್ವರದ ವರೆಗೂ ಹರಡಿದ್ದು ಇದೊಂದು ಪುಣ್ಯಭೂಮಿ, ಪವಿತ್ರ ನಾಡು. ಇಲ್ಲಿರುವ ಪ್ರದೇಶದಲ್ಲಿ ಅನಾದಿಕಾಲದಿಂದ ಋಷಿಮುನಿಗಳು, ವೈಷ್ಣವ ಯತಿಗಳು ಜನಿಸಿದ್ದು ಅವರ ತಪೋಬಲದಿಂದ ಈ ವಿಸ್ತಾರದ ಭೂಮಿಯನ್ನು ಪುಣ್ಯಪ್ರದವಾಗಿ ಮಾಡಿರುವರು. ಅವರು ಜನಿಸಿದ, ಯಾತ್ರೆ ಮಾಡಿದ, ತಪಃಗೈದ ಪ್ರದೇಶಗಳು ಪಾವನವೆನಿಸಿ ಪುಣ್ಯಕ್ಷೇತ್ರಗಳೆನಿಸಿವೆ. ಅಂಥವರಲ್ಲಿ ಶ್ರೀ ಮಧ್ವಾಚಾರ್ಯರು ಒಬ್ಬರು. ತ್ರೈಲೋಕ್ಯ ಗುರುಗಳೆನಿಸಿದ ಆಚಾರ್ಯರು ಉಡುಪಿ ಕ್ಷೇತ್ರದಲ್ಲಿ ಅವತರಿಸಿ (1238-1319) ಬದರಿಯಿಂದ ದಕ್ಷಿಣ ಸಮುದ್ರಗಳವರೆಗೆ ಎರಡು ಬಾರಿ ಸಂಚಾರ ಮಾಡಿ ವೈಷ್ಣವ ದೀಕ್ಷೆಯನ್ನು ಜನಸಮುದಾಯದ ಹೆಚ್ಚು ಭಾಗಕ್ಕೆ ಕೊಟ್ಟರು. ಅವರು ಮತ್ತು ಅವರಿಗೆ ನೆರವಾದ ವೈಷ್ಣವ ಮತಗುರುಗಳ ಪಾದಧೂಳಿ ಬಿದ್ದೆಡೆಯೆಲ್ಲಾ ಕ್ಷೇತ್ರ ಗಳೆನಿಸಿದುವು. ಅವುಗಳೇ ನಮಗೆ ಚಿರಪರಿಚಿತವಾಗಿರುವ ಮಹಾಕ್ಷೇತ್ರಗಳಾದ ಉಡುಪಿ, ಪಾಜಕ, ಸುಬ್ರಮಣ್ಯ, ಮಳಖೇಡ. ಆದರೆ ಅವುಗಳು ಹೆಚ್ಚು ಪೂಜ್ಯವಾಗಿರುವುದರ ಜೊತೆಗೆ ಅವುಗಳ ಗುಂಪಿಗೆ ಸೇರುವ ದಂಡತೀರ್ಥ, ಬನ್ನಂಜೆ, ಉಂಡಾರು, ಇರ್ಕಿಮಠ, ಕಾಂತಾವರ, ಅಂಬುತೀರ್ಥ, ನಡ್ಯಂತಾಡಿ, ಸೇತುಶಿಲಾ, ಕಣ್ವತೀರ್ಥ, ವಿಷ್ಣುಮಂಗಲ ಇವುಗಳು ಎಷ್ಟು ಜನರಿಗೆ ಪರಿಚಿತ ? ಅವುಗಳ ಸೂಕ್ಷ್ಮ ಪರಿಚಯ ಇಲ್ಲಿದೆ. ವಾದಿರಾಜರ ಪುಣ್ಯಭೂಮಿ ಸೋದೆ ಪರಿಚಿತವಾಗಿದ್ದರೂ ಅವರು ಮತ್ತು ಅವರ ಶಿಷ್ಯರು ಸಂದರ್ಶಿಸಿದ ಹೂವಿನಕೆರೆ, ಪುಂಡಿಬೈಲು, ಮಂಜುಗುಣಿ, ಯಾಣ ಇವುಗಳ ಮಹಾತ್ಮೆ ಯಾರಿಗೆ ಪರಿಚಿತ ? ಅವುಗಳ ಪೌರಾಣಿಕ, ಚಾರಿತ್ರಿಕ ಅಂಶಗಳ ಪರಿಚಯ ಇಲ್ಲಿದೆ. ಮಧ್ವಾಚಾರ್ಯರ ಮೂಲ ಶಿಷ್ಯರಾದ ಪದ್ಮನಾಭತೀರ್ಥರ, ನರಹರಿ ತೀರ್ಥರ, ಮಾಧವತೀರ್ಥರ, ಅಕ್ಷೋಭ್ಯತೀರ್ಥರು ಮಹಾಕಾರ್ಯಗಳನ್ನು ಮಾಡಿದ ಕೆಲಸಗಳಾಗಲೀ, ಅವರು ತೋರಿಸಿದ ಅದ್ಭುತ ಪವಾಡಗಳ ಸ್ಥಳಗಳಾಗಲೀ ಅನೇಕರಿಗೆ ಪರಿಚಯ ವಿರಲಾರದು. ಅವರು ತೋರಿದ ಪವಾಡ ಭೂಮಿಗಳ ವಿವರಣೆ ಇಲ್ಲಿದೆ. ಅಲ್ಲದೆ ಶ್ರೀಮಧ್ವಾಚಾರ್ಯರಿಂದ ಮತಪ್ರಸಾರಣೆಗೆ ನೇಮಿಸಲ್ಪಟ್ಟ ಮಾಧ್ವ ಯತಿಗಳ ಮತ್ತು ಅವರ ಪರಂಪರೆಯ ಯತಿವರ್ಯರ ಬೃಂದಾವನ ಸ್ಥಳಗಳು ಈ ಪ್ರದೇಶದ

ವಿಸ್ತಾರವಾದ ಭೂಮಿಯ ವಿವಿದೆಡೆಗಳಲ್ಲಿ ಹಂಚಿಹೋಗಿದ್ದು, ಅವುಗಳು ಎಲ್ಲೆಲ್ಲೆ ಎಂಬ ಮಾಹಿತಿ ಇದರೊಳಗಿದೆ. ಮಂತ್ರಾಲಯ, ಸೋದೆ, ಮಳಖೇಡ, ಪಂಡರಾಪುರಗಳು ಓದುಗರಿಗೆ ಪರಿಚಯವಿದ್ದಂತೆ, ನಮ್ಮ ವೈಷ್ಣವ ಯಾತ್ರಿಕರಿಗೆ ಮಣೂರು, ಯರಗೊಳ, ಅಬ್ಬೂರು, ಸಾಂಗ್ಲಿ, ಪುಣೆ, ಸತ್ಯವಿಜಯನಗರ, ರಾಜವಳ್ಳಿ, ಮಹಿಷಿಗಳ ಪರಿಚಯ ಸಾಲದು. ಇವುಗಳ ಸೂಕ್ಷ್ಮ ಪರಿಚಯ ಇಲ್ಲಿ ಚಿತ್ರಿತವಾಗಿದೆ. ಈ ಭೂಭಾಗದ ರಾಮಕ್ಷೇತ್ರಗಳಾವುವು, ನರಸಿಂಹ ಕ್ಷೇತ್ರಗಳಾವುವು ಎಂಬುದರ ಪೂರ್ಣ ಮಾಹಿತಿ ಇಲ್ಲದ ಜನರಿಗೆ ಇದು ದಾರಿದೀಪ. ಈ ನಾಡು ದಾಸವರೇಣ್ಯರ ನಾಡು, ಬೀಡು. ಶ್ರೀ ಶ್ರೀಪಾದರಾಜರಿಂದ ಹಿಡಿದು ಶ್ರೀ ಗುರು ಗೋವಿಂದ ದಾಸರವರೆಗೆ ಎಷ್ಟೋ ನೂರಾರು ಮಂದಿ ಆಗಿಹೋಗಿ ಅವರು ಜನಿಸಿದ, ಯಾತ್ರೆ ಮಾಡಿದ, ಕೃತಿ ರಚಿಸಿದ, ಎಲ್ಲೆಲ್ಲಿ ಹರಿಪದರಾದ ಸ್ಥಳಗಳ ಮಾಹಿತಿ ಇಲ್ಲಿದೆ. ಉಡುಪಿ, ಸೋದೆಗಳಷ್ಟೆ ಪವಿತ್ರವಾದ ಚೀಕಲ ಪರವಿ, ಮಾನ್ವಿ, ಮಾದನೂರು ಚಿಪ್ಪಗಿರಿ, ದರೂರು, ಉತ್ತನೂರು, ಸಂಕಾಪುರ, ಮೊದಲಕಲ್ಲು ಇವುಗಳ ಪರಿಚಯ, ದರ್ಶನಗಳು ಇಹಪರಗಳಿಗೆ ಮುಕ್ತಿ. ಇಲ್ಲಿ ಇವುಗಳ ಸೂಕ್ಷ್ಮ ಪರಿಚಯವೂ ವಿವರಿಸಲ್ಪಟ್ಟಿದೆ.

ನಮ್ಮ ದೇಶದ, ಈ ಭಾಗದ ಅನೇಕ ಸ್ಥಳಗಳು ಧಾರ್ಮಿಕ ಕ್ಷೇತ್ರಗಳಾಗಿರುವುದರ ಜೊತೆಗೆ ಸಾಂಸ್ಕೃತಿಕ ಸ್ಥಳಗಳೂ ಅಹುದು. ಇತಿಹಾಸದ ಸ್ವಾರಸ್ಯವಿರುವ, ಲಲಿತಕಲೆಗಳ ಗೂಡಾದ ಸ್ಥಳಗಳು ನೂರಾರಿವೆ. ಇಂಥವುಗಳಲ್ಲ ಕೆಲವನ್ನು ಆಯ್ದುಕೊಂಡು ಅವುಗಳ ಪರಿಚಯುವನ್ನು ಆಸಕ್ತ ಜನರು ಸಂದರ್ಶಿಸಲು ಆಹ್ವಾನಿಸಿದ್ದೇನೆ. ಜಲಪಾತ, ಬೆಟ್ಟ, ನದಿ, ಚಾರಿತ್ರಿಕ ಸ್ಥಳಗಳು ಇವುಗಳೂ ಪ್ರಕೃತಿಯ ಭಾಗಗಳಾಗಿದ್ದು ಅವುಗಳಲ್ಲಿ ಪರಮಾತ್ಮನ ಸಾನಿಧ್ಯವಿರುವುದು ಎಲ್ಲರಿಗೂ ತಿಳಿದ ವಿಷಯ. ಅವುಗಳಲ್ಲಿ ಅಲ್ಲಲ್ಲಿ ತಿಳಿಸಿ, ಮಾರ್ಗಸೂಚನೆ ಮಾಡಿ ಅವುಗಳ ಸಂದರ್ಶನವೂ ಪುಣ್ಯಕ್ಷೇತ್ರಗಳ ಸಂದರ್ಶನದಂತೆ ಪುಣ್ಯಪದವೆಂಬ ಅಂಶವನ್ನು ಈ ಮೂಲಕ ಮಾಡಿಕೊಡಲೆತ್ನಿಸಿದ್ದೇನೆ. ಆದರೂ ಒಂದು ವಿಷಯ ಮಾತ್ರ ಅತಿ ಮುಖ್ಯ. ದೊಡ್ಡವರು ಹೇಳುವಂತೆ, ತೀರ್ಥಯಾತ್ರೆಯ ವಿವರಗಳನ್ನು ಓದದೇ ತೀರ್ಥಯಾತ್ರೆಗೆ ಸಂಬಂಧಪಟ್ಟ ಪೌರಾಣಿಕ ಹಿನ್ನೆಲೆ, ಕ್ಷೇತ್ರ ಮಹಿಮೆ, ಸ್ನಾನಾದಿಗಳಿಗೆ ಬೇಕಾದ ವಿಹಿತ ಮಂತ್ರ, ಸ್ತೋತ್ರ ಅನುಷ್ಠಾನ ಕ್ರಮಗಳನ್ನು ತಿಳಿಯದೆ ಸಮಗ್ರ ತೀರ್ಥಯಾತ್ರೆ ಮಾಡುವುದಕ್ಕಿಂತ, ಇಂತಹ ತೀರ್ಥಯಾತ್ರಾ ವಿವರಗಳನ್ನು ಒಳಗೊಂಡ ಗ್ರಂಥದ ಓದುಗನಿಗೆ ಬರುವ ಪುಣ್ಯ ಹೆಚ್ಚೆಂಬುದು ನಿಸ್ಸಂಶಯ. ಈ ನಿಟ್ಟಿನಲ್ಲಿ ಯಾತ್ರಿಕನಿಗೆ ಈ ರೀತಿಯ ತಿಳುವಳಿಕೆಯ ಮೂಲಕ ಸಹಾಯವಾದರೆ ನನ್ನ ಬರವಣಿಗೆ ಸಾರ್ಥಕ.

ಇಂತು

ಮೈಸೂರು

ರಘೋತ್ತಮ ತೀರ್ಥರು

# ಪರಿವಿಡಿ

## ಬೆಂಗಳೂರು ನಗರ



## ಬೆಂಗಳೂರು ಜಿಲ್ಲೆ



## ಕೊಡಗು ಜಿಲ್ಲೆ



## ಕೋಲಾರ ಜಿಲ್ಲೆ



## ತುಮಕೂರು ಜಿಲ್ಲೆ

## ಉಡುಪಿ ದಕ್ಷಿಣ ಕನ್ನಡ ಜಿಲ್ಲೆಗಳು



## ಚಿಕ್ಕಮಗಳೂರು ಜಿಲ್ಲೆ



## ಚಿತ್ರದುರ್ಗ ಜಿಲ್ಲೆ

### ಹಾವೇರಿ ಜಿಲ್ಲೆ



### ಗದಗ್ ಜಿಲ್ಲೆ



### ಕೊಪ್ಪಳ ಜಿಲ್ಲೆ—ರಾಯಚೂರು ಜಿಲ್ಲೆಗಳು



### ಧಾರವಾಡ ಜಿಲ್ಲೆ



### ಬೆಳಗಾಂ ಜಿಲ್ಲೆ



### ಬಾಗಲಕೋಟೆ ಜಿಲ್ಲೆ



### ಬಿಜಾಪುರ ಜಿಲ್ಲೆ

## ಕೇರಳ ರಾಜ್ಯ



## ಆಂಧ್ರ ಪ್ರದೇಶ

## ಮಹಾರಾಷ್ಟ್ರ ರಾಜ್ಯ



## ಒರಿಸ್ಸಾ ರಾಜ್ಯ

# ತೀರ್ಥಯಾತ್ರೆ ಮತ್ತು ತೀರ್ಥಯಾತ್ರಾವಿಧಿ

ತೀರ್ಥ ಎಂಬ ಪದವು ಯಜುರ್ವೇದದ ರುದ್ರಾಧ್ಯಾಯದಲ್ಲಿ ಬಂದಿದೆ. ತೀರ್ಥ ಎಂಬ ಪದಕ್ಕೆ ಪವಿತ್ರತಮ ಪೂಜ್ಯತಮ ಎಂಬ ಅರ್ಥವಿದೆ. ಮನಸ್ಸಿನಲ್ಲಿರುವ ಗುಣಗಳು ತೀರ್ಥ. ದಾನಕೊಡುವ ಬುದ್ಧಿ ತೀರ್ಥ, ದೇಹವೇ ತೀರ್ಥ. ಹಸ್ತವೇ ತೀರ್ಥ. ತಂದೆತಾಯಂದಿರುಗಳ ಪಾದವೇ ತೀರ್ಥ. ಯಾವುದು ನಮ್ಮನ್ನು ಸಂಸಾರ ಸಮುದ್ರದಿಂದ ದಾಟಿಸುವುದೋ ಅದನ್ನು ತಿಳಿದು ಇನ್ನೊಬ್ಬರಿಗೆ ತಿಳಿಸುವುದೇ ತೀರ್ಥ.

ಶ್ರೀ ವಿಷ್ಣುತೀರ್ಥರ ಭಾಗವತ ಸಾರೋದ್ಧಾರದಲ್ಲಿ ತೀರ್ಥಯಾತ್ರೆ ಎಂದರೆ ಸತ್‌ಶಾಸ್ತ್ರಗಳನ್ನು ಗುರುಮುಖೇನ ಅಧ್ಯಯನ ಮಾಡುವುದು. ಎಂದರೆ ಶ್ರೀಮಧ್ವಾಚಾರ್ಯರ ಶಾಸ್ತ್ರವನ್ನು ಓದಲು ಪ್ರಯತ್ನ ಮಾಡುವುದು. ಮತ್ತು ಓದುವುದು. ತೀರ್ಥಕ್ಷೇತ್ರಯಾತ್ರೆ ಎಂಬುದು ಸಾಮಾನ್ಯ ಅರ್ಥದಲ್ಲಿ ತೀರ್ಥಕ್ಷೇತ್ರಗಳಿಗೆ ಮಾಡುವ ಪ್ರವಾಸ, ಸಂದರ್ಶನ. ಆದರೆ ವಿದ್ಯುಕ್ತವಾಗಿ ಮಾಡಲ್ಪಡುವ ವೈಷ್ಣವರ ತೀರ್ಥಕ್ಷೇತ್ರಗಳ ಶಾಸ್ತ್ರೋಕ್ತ ಚಿಂತನ, ಸ್ನಾನ, ಪಾನಾದಿ ರೂಪಸೇವಾ ಎಂಬುದೇ ಮುಖ್ಯ ಅರ್ಥ. ಸುತ್ತಾಡಿಕೊಂಡು ಬರುವುದು ತೀರ್ಥಯಾತ್ರೆಯಲ್ಲ. ಸಿಶಿದ್ಧವಾದ ಸ್ಥಳವೂ ಎಷ್ಟೇ ಸುಂದರವಾಗಿದ್ದರೂ, ಅದು ತೀರ್ಥಯಾತ್ರೆ ಎನಿಸಿಕೊಳ್ಳುವುದಿಲ್ಲ. ವಿದ್ಯುಕ್ತವಲ್ಲದ ತೀರ್ಥಕ್ಷೇತ್ರ ಸಂದರ್ಶನ ತೀರ್ಥಯಾತ್ರೆಯಲ್ಲ.

ಭಾರತವು ತಪೋಭೂಮಿ. ಈ ಭೂಮಿಯಲ್ಲಿ ಭರತ, ಭಗೀರಥ, ಇಕ್ಷ್ವಾಕು, ಸಗರ, ಹರಿಶ್ಚಂದ್ರಾದಿ ರಾಜರ್ಷಿಗಳು ಜನ್ಮವೆತ್ತಿದ್ದಾರೆ. ವಶಿಷ್ಠ, ವಿಶ್ವಾಮಿತ್ರ, ಅಗಸ್ತ್ಯ, ಕ್ರತು, ಪುಲಹರೇ ಮೊದಲಾದ ಋಷಿಗಳು ಹುಟ್ಟಿ ತಮ್ಮ ತಪೋ-ಬಲದಿಂದ ಈ ಭೂಮಿಯನ್ನು ಪಾವನಗೊಳಿಸಿದ್ದಾರೆ. ನೈಮಿಶಾರಣ್ಯ ಬೃಗುವನ, ಖಾಂಡವವನ, ದಂಡಕಾವನ, ಕಾಮ್ಯವನ, ಇವುಗಳೇ ಮೊದಲಾದ ಅರಣ್ಯಗಳು ಈ ಮಹರ್ಷಿಗಳ ತಪಸ್ಸಿನಿಂದ ಧ್ಯಾನಭೂಮಿಗಳಾಗಿವೆ. ಪರ್ವತಗಳು ದೈವಸಾನ್ನಿಧ್ಯದ ಕೇಂದ್ರಗಳು ಎಂದು ಪುಷ್ಟೀಕರಿಸಲು ಹಿಮಾಲಯ, ಮಾತಂಗ, ಮಾಲ್ಯವಂತ, ಹೇಮಕೂಟ, ಋಷ್ಯಮೂಖ, ಮುಂತಾದವುಗಳಿವೆ. ಕೇದಾರ, ಬದರೀ, ಪುಷ್ಕರ ಕ್ಷೇತ್ರಗಳು ದೈವಸಾನ್ನಿಧ್ಯವನ್ನು ಹೊಂದಿ ಅನಾದಿಕಾಲದಿಂದ ಭಕ್ತರನ್ನು ನಿರಂತರವಾಗಿ ತಮ್ಮೆಡೆಗೆ ಸೆಳೆಮುಕೊಳ್ಳುತ್ತಿದೆ. ಗಂಗಾ, ಯಮುನಾ, ನರ್ಮದಾ, ಕಾವೇರಿ ಈ ಪವಿತ್ರ ನದಿಗಳು ಹರಿದು ಈ ನೆಲವನ್ನು ಪವಿತ್ರಗೊಳಿಸಿವೆ. ಇವು ಬರಿಯ ಧರ್ಮಕ್ಷೇತ್ರವಾಗಿರದೆ ಸಾಂಸ್ಕೃತಿಕ ಸ್ಥಳಗಳಾಗಿವೆ. ಇತಿಹಾಸದ ಸ್ವಾರಸ್ಯ, ಲಲಿತಕಲೆಯ ಸೊಬಗು ಇದರಲ್ಲಿ ಉಂಟು.

ಕಲಿಯುಗದಲ್ಲಿ ಯಜ್ಞಯಾಗಾದಿಗಳನ್ನು ಎಸಗಲು ಕಷ್ಟಸಾಧ್ಯ. ಅದರ ಬದಲು ತೀರ್ಥಯಾತ್ರೆ ಗೈದು ಆ ಫಲವನ್ನೇ ಪಡೆಯಲು ಸಾಧ್ಯ. ಭರತ ಖಂಡದಲ್ಲಿ ಅಸಂಖ್ಯಾತ ತೀರ್ಥಕ್ಷೇತ್ರಗಳಿವೆ. ಉತ್ತರ ಭಾರತದ ಕಾಶಿ, ಗಯೇ, ಮಥುರಾ, ಮುಂತಾದವುಗಳಾದರೆ ದಕ್ಷಿಣ ಭಾರತದಲ್ಲಿ ರಾಮಸೇತುವಿನಿಂದ ಹಿಡಿದು, ಮಧುರೈ, ಶ್ರೀರಂಗ, ಉಡುಪಿ, ಸೋದೇ, ಪಂಡರಾಪುರ, ತಿರುಪತಿ, ಭದ್ರಾಚಲ, ಸಿಂಹಾಚಲ, ಮಂತ್ರಾಲಯಗಳಿವೆ.

ಈ ಕ್ಷೇತ್ರಗಳನ್ನು ಸಂದರ್ಶಿಸುವುದರಿಂದ ಈ ಕೆಳಗಿನ ಪ್ರಯೋಜನಗಳನ್ನು ಪಡೆಯ ಬಹುದು—

1) ತೀರ್ಥಕ್ಷೇತ್ರಗಳು ಅನುಭವದ ಪಾಠಶಾಲೆಗಳು, ಇದರಿಂದ ನಮ್ಮ ಕೂಪಮಂಡೂ ದೃಷ್ಟಿ ಮರೆಯಾಗಿ ವಿಶಾಲ ದೃಷ್ಟಿ ಲಭಿಸುತ್ತದೆ.

2) ಲೌಕಿಕ ದೃಷ್ಟಿ ಸಂಕುಚಿತವಾಗಿ ಮನಸ್ಸು ಜಾಗೃತವಾಗಿ ಮುಕ್ತಿ ಸಾಧನವಾಗುತ್ತದ

3) ವಿವಿಧ ಹವಾಮಾನಗಳಿಗೆ ಒಗ್ಗಿಕೊಳ್ಳುವುದರಿಂದ ದೇಹದ ಆರೋಗ್ಯ ಹೆಚ್ಚುತ್ತದ

4) ಸತತ ಸಂಚಾರ, ನಮಸ್ಕಾರಗಳಿಂದ ಮೈಗೆ ವಿಶಿಷ್ಟ ರೀತಿಯ ವ್ಯಾಯಾಮ ಲಭಿಸುತ್ತದೆ.

5) ವಿಭಿನ್ನ ಜಲಗಳಲ್ಲಿನ ಸ್ನಾನದಿಂದ ಒಂದು ರೀತಿಯ ಜಲಚಿಕಿತ್ಸೆ ಲಭಿಸಿ ನಾನ ತೆರನಾದ ರೋಗಗಳು ಗುಣ ಹೊಂದುತ್ತವೆ.

6) ವಿವಿಧ ಆಕೃತಿ ವರ್ಣಗಳ ದರ್ಶನದಿಂದ ಒಂದು ರೀತಿ ವರ್ಣ ಚಿಕಿತ್ಸೆಯು ಆಗುತ್ತದೆ.

7) ಬೆಟ್ಟಗಳನ್ನು ಹತ್ತುವುದು, ಒರಟಾದ ದಾರಿಯಲ್ಲಿ ನಡೆಯುವುದು ಮೊದಲಾದ ಗಳಿಂದ ಆಕ್ಯೂಪ್ರಶರ್ ಚಿಕಿತ್ಸೆ ಸ್ವಾಭಾವಿಕವಾಗಿಯೇ ಲಭಿಸುತ್ತದೆ.

8) ವಿವಿಧ ದೇಶ, ಭಾಷೆ, ಜನಗಳ ಸಂಪರ್ಕದಿಂದ ಮೈಮನಸ್ಸುಗಳು ವಿಕಾಸಗೊಳ ತ್ತದೆ.

9) ತಾತ್ವಿಕ ಚಿಂತನೆಗೆ ನೆರವಾಗಿ ಜೀವನದ ಸಾರ್ಥಕ್ಯದಲ್ಲಿ ಪರ್ಯವಸಾನವಾಗುತ್ತದೆ

**ಪೂರ್ವಸಿದ್ಧತೆಗಳು :** ತೀರ್ಥಯಾತ್ರಾರಂಭದಲ್ಲಿ ಸಕಲತೀರ್ಥಗಳನ್ನೂ ತಮ್ಮ ಸ್ನಾನಾ ಗಳಿಂದ ಪವಿತ್ರರನ್ನಾಗಿಸಿದ ಶ್ರೀಮದಾನಂದ ತೀರ್ಥರ ಸ್ಮರಣೆ, ಅತ್ಯವಶ್ಯ, ಶ್ರೀಹರಿಯ ಅನುಗ್ರಹ ಸಂಪಾದನೆಗೆ ಆನಂದತೀರ್ಥರಂತಹ ಮತ್ತೊಂದು ತೀರ್ಥವೇ ಇಲ್ಲವಾದುದರಿಂ ಅವರ ಮಹಾತ್ಮ್ಯ, ಗ್ರಂಥಗಳನ್ನು ತಪ್ಪದೇ ಚಿಂತಿಸುವುದು. ಯಾವುದೇ ತೀರ್ಥಕ್ಷೇತ್ರವನ್ ಸಂದರ್ಶಿಸುವಾಗ ಅದಕ್ಕೆ ಸಂಬಂಧಿಸಿದ ಅಭಿಮಾನಿದೇವತೆಗಳನ್ನು, ಅಲ್ಲಿಯ ಭಗವದ್ರೂ ವನ್ನು ತಪ್ಪದೇ ಚಿಂತಿಸಬೇಕು. ಆ ತೀರ್ಥಕ್ಷೇತ್ರಗಳ ಮಹಿಮೆ, ಮಹತ್ವ, ಪೌರಾಣಿಕ ಹಿನ್ನೆಲೆ ಸ್ನಾನಾದಿಗಳಿಗೆ ವಿಹಿತ ಮಂತ್ರ, ಸ್ತೋತ್ರ, ಅನುಷ್ಠಾನಕ್ರಮ ಮೊದಲಾದವುಗಳನ್ನು ತಿಳಿದ ಕೊಳ್ಳಬೇಕು. ಏಕೆಂದರೆ ತೀರ್ಥಯಾತ್ರೆಯ ವಿವರಗಳನ್ನು ಓದದೇ ಸಮಗ್ರ ತೀರ್ಥಯಾತ್ರೆ ಮಾಡುವುದಕ್ಕಿಂತ ಓದುವವನಿಗೆ ಬರುವ ಪುಣ್ಯ ಹೆಚ್ಚೆಂಬುದು ನಿಸ್ಸಂಶಯ. ವೈಷ್ಣವ ಪರಂಪರೆಯಲ್ಲಿ ಅತ್ಯಂತ ವ್ಯಾಪಕವಾಗಿ ಸಂಚರಿಸಿದ ಮಹನೀಯರುಗಳಲ್ಲಿ ದ್ವೈತಮತ ಪ್ರವರ್ತಕರಾದ ಶ್ರೀ ಮಧ್ವಾಚಾರ್ಯರೇ ಅಗ್ರಮಾನ್ಯರು. ಅವರು ಹಿಮಾಲಯದಿಂದ ರಾಮೇಶ್ವರದವರೆಗೆ ಎರಡು ಬಾರಿ ಸಂಚರಿಸಿ ; ಎರಡು ಬಾರಿ ಉತ್ತರ ಬದರಿಯನ್ ಸಂದರ್ಶಿಸಿದರಷ್ಟೇ. ಅವರ ಪಾದ ಧೂಳಿ ಎಲ್ಲೆಲ್ಲಿ ಬಿದ್ದಿದೆಯೋ ಅದೇ ಕ್ಷೇತ್ರ ಎಂಬ ಮಾನಸಿಕ ಸಿದ್ಧತೆಯೊಂದಿದೆ. ಆ ಪ್ರದೇಶಗಳ ಯಾತ್ರೆ ಕೈಗೊಳ್ಳಬೇಕು, ಇದಲ್ಲದೆ ಅನಂತರದ ಕಾಲದಲ್ಲಿ ಭಾರತಾದ್ಯಂತ ಸಂಚರಿಸಿದ ಶ್ರೀ ಜಯತೀರ್ಥರ, ವ್ಯಾಸರಾಜರ, ರಾಘವೇಂದ್ರ ತೀರ್ಥರ, ವಿದ್ಯಾಧೀಶರ ಮಾರ್ಗದರ್ಶನ ನಮಗೆ ಮಾರ್ಗದರ್ಶಿ. ಶ್ರೀವಾದಿರಾಜರ ಸಮಗ್ರ

ವೈಷ್ಣವ ಕ್ಷೇತ್ರಗಳ ದರ್ಶನ ನಮಗೆ ಉಪಯುಕ್ತ ಹೆದ್ದಾರಿ ಎಂದರಿಯಬೇಕು. ಶ್ರೀಪುರಂದರ ದಾಸರ, ಶ್ರೀ ವಿಜಯದಾಸರ, ಶ್ರೀ ಗೋಪಾಲದಾಸರ, ಶ್ರೀಜಗನ್ನಾಥದಾಸರ ವ್ಯಾಪಕ ತೀರ್ಥ ಯಾತ್ರಾಸ್ಥಳಗಳು ನಮಗೆ ದಾರಿದೀಪವೆಂದು ಭಾವಿಸಿ ಆ ಕ್ಷೇತ್ರಗಳ ದರ್ಶನ ಕೈಗೊಳ್ಳಬೇಕೆಂಬ ಹಂಬಲ ಬೆಳೆಸಿಕೊಳ್ಳಬೇಕು.

ಈ ಮೇಲೆ ಕಂಡ ಭಾವನಾತ್ಮಕ ಚಿಂತನೆಯೊಂದಿಗೆ ಕೆಲವು ವಿಧಿಗಳನ್ನು ನೆರವೇರಿಸಲೇ ಬೇಕು.

ತೀರ್ಥಯಾತ್ರೆಗೆ ಸಂಕಲ್ಪಿಸಿದ ಗೃಹಸ್ಥನು ಸಂಕಲ್ಪ ಪುರಸ್ಸರವಾಗಿ ನಾಂದಿ ಶ್ರಾದ್ಧವನ್ನು ಎಸಗಿ ಪಿತೃದೇವತೆಗಳನ್ನು ಸಂತೋಷ ಪಡಿಸಬೇಕು. ಶ್ರಾದ್ಧಾಶೇಷವನ್ನು ಭುಜಿಸಿ ಕಾರ್ಪಾಟಿಕವೇಶವನ್ನು ಧರಿಸಿ ಪತ್ನಿಸಮೇತನಾಗಿ ಯಾತ್ರೆ ಹೊರಡಬೇಕು. ಯಾತ್ರೆಯ ಕಾಲದಲ್ಲಿ ಬರಿಗಾಲಿನಲ್ಲಿರಬೇಕು. ವೈಭವೋಪಿತವಾದ ವಸ್ತುಗಳನ್ನು ಧರಿಸಬಾರದು. ವಾಹನಾದಿಗಳನ್ನು ಬಳಸಬಾರದು.

**ಯಾತ್ರಾಕಾಲದ ನಡವಳಿಕೆಗಳು :** ಯಾತ್ರೆಗೆ ಸತ್ಪಾತ್ರರ ಸಂಗಡ ಹೊರಡಬೇಕು. ತೀರ್ಥ ಯಾತ್ರಾಸ್ಥಳವನ್ನು ತಲುಪಿದಮೇಲೆ ಅಲ್ಲಿನ ಅಧಿದೇವತೆಯ ಸ್ತುತಿಯೇ ವಿನಃ ಮತ್ಯಾವ ದೇವತೆಯ ಸ್ಮರಣೆಯನ್ನು ಮಾಡಬಾರದು. ತೀರ್ಥಕ್ಷೇತ್ರಕ್ಕೆ ಸಂಬಂಧಿಸಿದ ಆಚರಣೆಗಳನ್ನು ವಿದ್ಯುಕ್ತವಾಗಿ ಆಚರಿಸಬೇಕು.

**ಮುಂಡನ ವಿಧಿ :** ಮುಂಡನ ವಿಧಿ ಕಡ್ಡಾಯವೇ ಎಂಬ ವಿಚಾರದಲ್ಲಿ ಏಕರೂಪದ ಅಭಿಪ್ರಾಯವಿಲ್ಲ. ಮಾನವನು ಗೈದ ಪಾಪಗಳು ತಲೆ ಕೂದಲ ಬುಡದಲ್ಲಿರುವುದೆಂಬ ಕಾರಣದಿಂದ ಅವುಗಳ ಪರಮಾರ್ಜನೆಗೆ ಮುಂಡನ ಮಾಡಿಸಿಕೊಳ್ಳುವುದು ವಿಹಿತವೆಂಬ ವಾದವಿದೆ. ಸ್ಕಾಂದ ಪುರಾಣ, ಪದ್ಮಪುರಾಣಗಳು ಈ ವಿಧಿಗೆ ಇಂಬುಗೊಡುತ್ತವೆ.

**ತೀರ್ಥಸ್ನಾನ :** ತಾವು ಯಾತ್ರೆ ಮಾಡಲಿರುವ ತೀರ್ಥಕ್ಷೇತ್ರದಲ್ಲಿ ಯಾವುದೇ ನದಿ ಪುಷ್ಕರಣಿ, ಸರೋವರ, ತಟಾಕಗಳಿದ್ದಲ್ಲಿ ಸಂಕಲ್ಪ ಪುರಸ್ಸರವಾಗಿ ಸ್ನಾನಮಾಡಬೇಕು. ಸ್ನಾನದ ಸಮಯದಲ್ಲಿ ಆ ಕ್ಷೇತ್ರದ ಮಹಿಮೆಯನ್ನು ವರ್ಣಿಸುವ ಪೌರಾಣಿಕ ಶ್ಲೋಕಗಳನ್ನಾಗಲೀ, ವೇದೋಕ್ತವಾದ ಅಘಮರ್ಷಣಾ ಸೂಕ್ತವನ್ನಾಗಲಿ ಪಠಿಸಬೇಕು. ಯಾವ ಕಾರಣದಿಂದಲೂ ತೀರ್ಥಜಲವನ್ನು ಅಶುಚಿಗೊಳಿಸಬಾರದು.

"ಗಂಗೇ ಚ ಯಮುನೇ ಚೈವ, ಗೋಧಾವರಿ ಸರಸ್ವತಿ, ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು" ಎಂಬ ಈ ಶ್ಲೋಕವನ್ನು ಪಠಿಸುತ್ತಾ ಸ್ನಾನ ವಿಧಿಯನ್ನು ಎಸಗಬೇಕು, ತೀರ್ಥ ಸ್ನಾನದನಂತರ ಪಿತೃತರ್ಪಣ ಕೊಡಬೇಕು, ಈ ತರ್ಪಣ ವಿಧಿಯು ಪಿತೃಗಳನ್ನು ನರಕದಿಂದ ಪಾರುಮಾಡುತ್ತದೆ.

ಏಕಾದಶಿ ಉಪವಾಸ, ಕೃಷ್ಣಾಷ್ಟಮಿ, ಚಾತುರ್ಮಾಸ ವ್ರತ, ತ್ರಿಕಾಲ ಸಂಧ್ಯಾವಂದನೆಯನ್ನು ತ್ಯಾಗ ಮಾಡದೆ ವಿಶೇಷ ರೀತಿಯಲ್ಲಿ ಅವುಗಳನ್ನು ಆಚರಿಸಬೇಕು. ಬೆಳಿಗ್ಗೆ ಒಮ್ಮೆ ದೇವರ ತೀರ್ಥ ಪ್ರಸಾದ ಸ್ವೀಕರಿಸಿ ರಾತ್ರಿ ಕ್ಷೇತ್ರೋಪವಾಸ ಮಾಡಬೇಕು. ಸ್ವಾಮಿಯ ದರ್ಶನ ಮಾಡಿದಾಗ ನಮ್ಮ ಪಾಪ ಹೋಯಿತು ಎಂದು ಭಾವಿಸಿ ತಿಳಿಯಬೇಕು. ವಿಹಿತ ಸ್ಥಳಗಳನ್ನು ಸಂದರ್ಶಿಸದೆ ಇರಬಾರದು, ನಿಷಿದ್ಧಾ ಸ್ಥಳಗಳು ಎಷ್ಟೇ ಆಕರ್ಶಕವಾಗಿದ್ದರೂ ಅವುಗಳನ್ನು

ಸಂದರ್ಶಿಸಬಾರದು, ಯಾತ್ರಾ ಕಾಲದಲ್ಲೂ ಶಾಸ್ತ್ರಾಧ್ಯಯನ, ಶಾಸ್ತ್ರ ಶ್ರವಣಾದಿಗಳನ್ನು ತಪ್ಪದೇ ನಡೆಸಬೇಕು.

**ದಾನ :** ವಿಧಿಕರ್ಮ ಫಲದಿಂದ ದರಿದ್ರರಾದ ಅನೇಕರಿಗೆ ದಾನ ಮಾಡಬೇಕು. ಶಾಸ್ತ್ರ ವೇತ್ತರಿಗೆ, ಪಂಡಿತರಿಗೆ, ಪ್ರವಚನಕಾರರಿಗೆ, ಪುರಾಣಕಾರರಿಗೆ ಕೈಲಾದಷ್ಟು ದ್ರವ್ಯ, ದಾನ ಪದಾರ್ಥಗಳನ್ನು ಕೊಡಬೇಕು.

**ಇತರೆ :** ದೇವರ ಸಾನ್ನಿಧ್ಯದಲ್ಲಿರುವಾಗ ಅತಿ ಹೆಚ್ಚಿನ ಆಭರಣಗಳನ್ನು ಧರಿಸಬಾರದು. ಸುಗಂಧ ಲೇಪನ, ಪುಷ್ಪಮಾಲೆ, ಇವುಗಳನ್ನು ಧರಿಸದಿರುವುದು ಒಳ್ಳೆಯದು. ತಾಂಬೂಲ ಚರ್ವಣ ನಿಶಿದ್ಧ. ಬ್ರಹ್ಮಚರ್ಯ ವ್ರತ ಪಾಲನೆಮಾಡಬೇಕು.

**ಯಾತ್ರಾನಂತರದ ವಿಧಿ :** ಯಾತ್ರೆಯಿಂದ ಹಿಂದಿರುಗಿದ ಮೇಲೆ ಪ್ರಸಾದ ತಂದು ಬ್ರಾಹ್ಮಣರಿಗೆ ಪ್ರಸಾದ ಹಂಚಬೇಕು, ಸಮಾರಾಧನೆಯಿಂದ ಪ್ರಾರಂಭಿಸಿದಂತೆ ಹಿಂತಿರುಗಿ ಬ್ರಾಹ್ಮಣ ಸಮಾರಾಧನೆ ಮಾಡಿ ಬ್ರಾಹ್ಮಣರನ್ನು ತೃಪ್ತಿಗೊಳಿಸುವುದರ ಜೊತೆಗೆ ಕ್ಷೇತ್ರದಿಂದ ಹಿಂದಿರುಗಿ ನಮ್ಮೊಡನೆ ಬಂದ ಪಿತೃದೇವತೆಗಳನ್ನು ತೃಪ್ತಿಗೊಳಿಸಿದಂತಾಗುತ್ತದೆ.

# ಮೈಸೂರು ಜಿಲ್ಲೆ

## 1. ಮೈಸೂರು

ಹಳೇ ಮೈಸೂರಿನ ರಾಜಧಾನಿಯಾಗಿ ಮೆರೆದ ಸ್ಥಳ. ಇದು ಪೌರಾಣಿಕ ಪ್ರಸಿದ್ಧವೂ ಪ್ರವಾಸಿಗರ ಸುಂದರ ತಾಣವೂ ಆಗಿದೆ. ಮಹಿಷಾಸುರನನ್ನು ಸಂಹರಿಸಿದ ಸ್ಥಳವಾದ್ದರಿಂದ ಇದು ಮಹಿಷಿಯೂರು, ಮಹಿಷಪುರವಾಗಿ ಮೈಸೂರು ಆಗಿದೆ.

ಚಾಮುಂಡಿಬೆಟ್ಟವು ಈ ರಾಜಧಾನಿಯ ಸನಿಹದಲ್ಲೇ ಇದ್ದು 3489 ಅಡಿ ಎತ್ತರವಿದೆ. ಅಲ್ಲಿಗೆ ಹೋಗಲು ಸುಸಜ್ಜಿತವಾದ ರಸ್ತೆಯೂ ಮೇಲೇರಿ ಹೋಗಲು ಸಾವಿರಮೆಟ್ಟಿಲುಗಳೂ ಇವೆ. ಬೆಟ್ಟದ ಮೇಲಿರುವುದೇ ಚಾಮುಂಡೇಶ್ವರಿ ದೇವಾಲಯ. ಇದು ಮಹಿಷಾಸುರನನ್ನು ವಧಿಸಲು ಅವತಾರ ಮಾಡಿದ ದುರ್ಗಿ ದೇವಾಲಯ. ಪಕ್ಕದಲ್ಲೆ ದೇವಿಕೆರೆ ಎಂಬ ಹೆಸರಿನ ತೆಪ್ಪದಕೊಳವಿದೆ. ಬೆಟ್ಟದಿಂದ ಕೆಳಬರುತ್ತಾ ಬೃಹತ್ ಪ್ರಮಾಣದ ಕರಿಶಿಲೆಯ ನಂದಿ ಇದೆ. ಬೆಟ್ಟದ ಮೇಲಿಂದ ಇಡೀ ಮೈಸೂರಿನ ಸುಂದರ ದೃಶ್ಯವನ್ನು ಸವಿಯಬಹುದು.

ಧಾರ್ಮಿಕವಾಗಿ ವೈಷ್ಣವರು ನೋಡಬೇಕಾದ ಸ್ಥಳಗಳೆಂದರೆ ಉತ್ತರಾದಿ ಮಠ, ರಾಘವೇಂದ್ರ ಮಠ ಹಾಗೂ ಸಾಗರ ಕಟ್ಟೆ ಮಠಗಳು. ಉತ್ತರಾದಿ ಮಠವು ಅರಮನೆಯ ಸಮೀಪವಾಗಿದ್ದು ಇಲ್ಲಿ ಮುಖ್ಯಪ್ರಾಣದೇವರ ಗುಡಿ ಮತ್ತು ಸತ್ಯಸಂಕಲ್ಪರ, ಶಾಸ್ತ್ರಗೂಳಿ ಎಂದು ಹೆಸರು ಪಡೆದ ಸತ್ಯಸಂತುಷ್ಟರ ಮೂಲಬೃಂದಾವನಗಳಿವೆ. ಇವರ ಆರಾಧನೆಗಳು ಕ್ರಮವಾಗಿ ಆಶಾಡಪೌರ್ಣಿಮೆ ಮತ್ತು ಪಾಲ್ಗುಣ ಅಮಾವಾಸ್ಯೆಯಂದು ನಡೆಯುತ್ತದೆ. ಇದಲ್ಲದೆ ಸಾಗರಕಟ್ಟೆ ಮಠದ ಶಾಖೆಯೊಂದು ನಗರದ ಹಳೇ ಬಡಾವಣೆಗಳಲ್ಲಿ ಒಂದಾದ ಕೃಷ್ಣಮೂರ್ತಿ ಪುರಂನಲ್ಲಿ ಇದೆ. ಇಲ್ಲಿ ಆ ಮಠದ ಯತಿಗಳಾಗಿದ್ದ ಶ್ರೀ ಪ್ರದ್ಯುಮ್ನ ತೀರ್ಥರ ಬೃಂದಾವನ ವಿದೆ. ರಾಘವೇಂದ್ರ ಸ್ವಾಮಿಗಳ ಮೃತ್ತಿಕಾ ಬೃಂದಾವನಗಳು ಕೃಷ್ಣಮೂರ್ತಿಪುರಂ, ಜಯಲಕ್ಷ್ಮಿಪುರಂ, ತೊಣಚಿಕೊಪ್ಪಲ್, ಒಂಟಿಕೊಪ್ಪಲ್, ಸುಬ್ಬರಾಯನ ಕೆರೆ ಈ ಬಡಾವಣೆಗಳಲ್ಲಿವೆ. ಇದಲ್ಲದೇ ಮಾರ್ಕೆಟ್ ಸಮೀಪದಲ್ಲಿ ಉಡುಪಿ ಶ್ರೀಕೃಷ್ಣಮಂದಿರ, ಗಂಗೋತ್ರಿ ಬಡಾವಣೆಯಲ್ಲಿ ಶ್ರೀ ಕೃಷ್ಣಧಾಮ ಇವುಗಳನ್ನು ಕಾಣಬಹುದು. ಕೃಷ್ಣಮೂರ್ತಿಪುರಂನಲ್ಲಿ ವಿಠಲಮಂದಿರವೆಂಬ ಗುಡಿ ಬಹಳ ಹಿಂದೆಯೇ ಸ್ಥಾಪಿಸಲ್ಪಟ್ಟು ಅಲ್ಲಿಯೇ ಗುರು ಗೋವಿಂದ ದಾಸರೆಂಬುವರು ಜೀವಿಸಿದ್ದು ದಾಸಪಂಥದ ಬೆಳವಣಿಗೆಗೆ ಕಾರಣರಾಗಿದ್ದರು. ಅವರು ರಚಿಸಿದ ಕೀರ್ತನೆಗಳು ಇಂದಿಗೂ ಜನಪ್ರಿಯವಾಗಿವೆ. ಅವರ ನೂರಾರು ಜನ ಶಿಷ್ಯರು ಇವರಿಗೆ ಇದ್ದಾರೆ. ಮಾದನೂರು ವಿಷ್ಣುತೀರ್ಥರಲ್ಲಿ ಅಪ್ರತಿಮವಾದ ಭಕ್ತಿಭಾವ ಹೊಂದಿರುವ ಕಾರಣ

ಅವರು ವಿಷ್ಣುತೀರ್ಥರ ಚರಿತ್ರೆಯನ್ನು ರಚಿಸಿದ್ದಾರೆ. ಅವರ ಆರಾಧನೆಯನ್ನು ಇಂದಿಗೂ ನಡೆಸುತ್ತಿದ್ದಾರೆ. ಅವರ ಮನೆಯೇ ಈಗ ಟ್ರಸ್ಟ್ ಆಗಿ ಮಾರ್ಪಟ್ಟು ಪ್ರವಚನಗಳು ವರ್ಷಪೂರ್ತಿ ನಡೆಯುವ ಏರ್ಪಾಟಾಗಿದೆ. ಅವರ ನಿವಾಸ ದಾಸಸಾಹಿತ್ಯದ ಚಟುವಟಿಕೆಯ ಕೇಂದ್ರವಾಗಿದೆ. ಗುರುಕೃಪಾ ಗ್ರಂಥಮಾಲೆಯು ಸ್ಥಾಪಿತವಾಗಿ ಗ್ರಂಥ ಪ್ರಕಟಣೆಯ ಕಾರ್ಯ ಮಾಡಲಾಗಿದೆ. ತಮ್ಮ ನಿವಾಸದಲ್ಲಿ ಶ್ರೀ ಪಾಂಡುರಂಗವಿಠಲ, ಶ್ರೀಮುಖ್ಯಪ್ರಾಣದೇವರ ವಿಗ್ರಹ ಪ್ರತಿಷ್ಠಾಪನೆಯಾಗಿದೆ.

## 2. ಅರಮನೆಯ ಕೋಟೆ ದೇವಾಲಯಗಳು

**ಭುವನೇಶ್ವರಿ ದೇವಾಲಯ :** ಅರಮನೆಯ ಕೋಟೆಯ ಉತ್ತರದ್ವಾರದ ಪ್ರದೇಶದಲ್ಲಿ ಶ್ರೀ ಜಯಚಾಮರಾಜೇಂದ್ರ ಒಡೆಯರವರಿಂದ ಕಟ್ಟಿಸಲ್ಪಟ್ಟಿದೆ. ಇದರ ನಿರ್ಮಾಪಕರು ಶಿಲ್ಪಿ ಸಿದ್ಧಲಿಂಗಸ್ವಾಮಿಗಳು. ಈ ದೇವಾಲಯದಲ್ಲಿ ಸೂರ್ಯಮಂಡಲದ ಕೆತ್ತನೆಯೊಂದಿದೆ. ತಾಮ್ರದಿಂದ ಮಾಡಲಾಗಿರುವ 24 ಆವರಣಗಳಿರುವ ಈ ಮಂಡಲವನ್ನೂ ರಾಜರು ಸೂರ್ಯ ನಮಸ್ಕಾರದ ವೇಳೆಯಲ್ಲಿ ಉಪಯೋಗಿಸುತ್ತಿದ್ದರು. ಈ ಮಂಡಲದ ಪ್ರತಿಯೊಂದು ಆವರಣದಲ್ಲಿ ಸೂರ್ಯನಮಸ್ಕಾರದ ವಿವರಣಾತ್ಮಕವಾದ ಶ್ಲೋಕಗಳಿವೆ.

**ತ್ರಿಣೇಶ್ವರ ದೇವಾಲಯ :** ಇದು ಪ್ರಾಚೀನವಾದ ದೇವಾಲಯ, ಈದೇವಾಲಯದಲ್ಲಿ ಶಿವಲಿಂಗವು ಪಶ್ಚಿಮಾಭಿಮುಖವಾಗಿದೆ. ಇದೇ ಇದರ ವೈಶಿಷ್ಟ್ಯ. ಸ್ಥಳಪುರಾಣದಂತೆ ಇಲ್ಲಿ ತೃಣಬಿಂದು ಋಷಿಗಳು ಪಾರ್ವತಿ ರಮಣನನ್ನು ಕುರಿತು ತಪಸ್ಸುಮಾಡಿದಾಗ ದೇವರು ಪ್ರತ್ಯಕ್ಷನಾದನಂತೆ. ಆಗ ಆ ಲಿಂಗ ಪ್ರತಿಷ್ಠಾಪನೆಯಾಯಿತೆಂದು ಹೇಳಿಕೆ ಇದೆ. ಇದನ್ನು ತ್ರಿನಯನೇಶ್ವರ ಗುಡಿ ಎನ್ನುವರು. ಹೊರ ಪ್ರಾಕಾರದಲ್ಲಿ ಒಂದು ಬೃಹತ್ತಾದ ಅಶ್ವತ್ಥ ವೃಕ್ಷವಿದೆ.

**ಗಾಯತ್ರಿ ದೇವಿ ಗುಡಿ :** ಈ ದೇವಾಲಯ ಇತ್ತೀಚಿನದು. ಇದನ್ನು ಶ್ರೀ ಜಯಚಾಮರಾಜೇಂದ್ರ ಒಡೆಯರೇ ಕಟ್ಟಿಸಿದರು (1949)ಇಲ್ಲಿ ಮೂರು ಪ್ರತ್ಯೇಕ ಗುಡಿಗಳಿವೆ. ಸಾವಿತ್ರಿ, ಗಾಯತ್ರಿ ಮತ್ತು ಸರಸ್ವತಿ ದೇವಿಯರದು. ಗಾಯತ್ರಿಯ ಪೀಠದಲ್ಲಿ ಬೀಜಾಕ್ಷರ ಮಂತ್ರವಿದೆ, ಮತ್ತು ಯಂತ್ರವಿದೆ.

**ಶ್ವೇತವರಾಹಗುಡಿ :** ಇದು ಕೋಟೆಯ ದಕ್ಷಿಣ ದ್ವಾರದ ಬಳಿ ಇರುವ ದೇವಾಲಯ. ಈ ದೇವಾಲಯ 1809ರಲ್ಲಿ ಶ್ರೀಕೃಷ್ಣರಾಜ ಒಡೆಯರಿಂದ ಕಟ್ಟಿಸಲ್ಪಟ್ಟಿತು. ಮೂಲಮೂರ್ತಿಯನ್ನು ತಮಿಳುನಾಡಿನ ಶ್ರೀಮುಷ್ಣಂನಿಂದ ತರಲಾಯಿತೆಂದು ತಿಳಿದುಬಂದಿದೆ. ಈ ಮೂರ್ತಿ 2 ಅಡಿ ಇದ್ದು ಅದನ್ನು ಅಮೃತಶಿಲೆಯಿಂದ ನಿರ್ಮಿಸಲಾಗಿದೆ. ಮೂರ್ತಿಗೆ ಪಾದಗಳಿಲ್ಲ. ಕವಚಗಳಿಂದ ಸದಾ ಅಲಂಕರಿಸಲ್ಪಟ್ಟಿರುತ್ತದೆ.

**ಪ್ರಸನ್ನ ಕೃಷ್ಣದೇವಾಲಯ :** ಈ ದೇವಾಲಯವು ಮುಮ್ಮಡಿ ಕೃಷ್ಣರಾಜ ಒಡೆಯರಿಂದ 1829ರಲ್ಲಿ ನಿರ್ಮಾಣವಾಯಿತು. ಮೂಲಮೂರ್ತಿ ಕೃಷ್ಣನು ಕೃಷ್ಣಶಿಲೆಯಲ್ಲಿ ಮಾಡಲ್ಪಟ್ಟಿದ್ದೂ ಬಲು ಮುದ್ದಾಗಿದೆ. ಅಂಬೆಗಾಲನ್ನಿಡುತ್ತಾ ಕೈಯಲ್ಲಿ ಬೆಣ್ಣೆ ಮುದ್ದೆ ಹಿಡಿದು, ಮಂದಸ್ಮಿತನಾಗಿ ತುಂಟಾಟವಾಡುತ್ತಾ ಧಾವಿಸಿಬರುವಂತಿದೆ, ಈ ಮೂರ್ತಿ. ಹೊರಪ್ರಾಕಾ

ದಲ್ಲಿ ಅತ್ರಿಮುನಿಗಳ ವಿಗ್ರಹವಿದೆ. ಕೃಷ್ಣಜನ್ಮಾಷ್ಟಮಿಯ ದಿನ ವೈಭವವಾಗಿ ಗೋಪೋತ್ಸವ ನಡೆಯುತ್ತಿತ್ತು. ಇತ್ತೀಚೆಗೆ ಆ ವೈಭವ ಆಡಂಬರರಹಿತವಾಗಿದೆ.

**ಲಕ್ಷ್ಮೀರಮಣ ಗುಡಿ :** ಅರಮನೆಯ ಪಶ್ಚಿಮದ್ವಾರದಲ್ಲಿ ಈ ದೇವಾಲಯವಿದೆ. ಕೋಟೆಯ ಇತರ ದೇವಾಲಯಗಳಿಗಿಂತಲೂ ಇದು ಪ್ರಾಚೀನ. ಮೂಲಮೂರ್ತಿ 4 ಅಡಿ ಇದ್ದು ಮೂರ್ತಿ ನಂಬಿ ನಾರಾಯಣನ ರೂಪದಲ್ಲಿದೆ. ಶಂಖ, ಚಕ್ರ ಗಧಾಧಾರಿಯಾಗಿರುವ ನಾರಾಯಣನ ಮೂರ್ತಿ ಬಲು ಆಕರ್ಶಕವಾಗಿದೆ.

**ಆತ್ಮವಿಲಾಸ ವಿನಾಯಕ :** ಅರಮನೆಯ ಒಳಗಡೆ ಅದ್ಭುತವಾದ ಹಾಗೂ ಅಪರೂಪ ವಾದ ವಿನಾಯಕನ ವಿಗ್ರಹವಿದೆ. ಈ ವಿಗ್ರಹ ಕೇವಲ ಸಾಲಿಗ್ರಾಮಗಳಿಂದಲೇ ಆವೃತವಾಗಿದೆ ಯೆಂದು ಪ್ರತೀತಿ. ಈ ಸಾಲಿಗ್ರಾಮಗಳನ್ನು 300 ಕ್ಷೇತ್ರಗಳಿಂದ ತರಲಾಗಿದೆಯಂತೆ. ಈ ವಿಗ್ರಹದ ರಚನೆಗೆ ಈ ಸಾಲಿಗ್ರಾಮಗಳನ್ನು ಉಪಯೋಗಿಸಲಾಗಿದೆಯೆಂದು ಹೇಳುತ್ತಾರೆ, ಈ ವಿನಾಯಕನ ಹೊಟ್ಟೆಯಲ್ಲಿಯೇ 144 ಸಾಲಿಗ್ರಾಮಗಳನ್ನು ಹುದುಗಿಸಲಾಗಿದೆಯಂತೆ. ಈ ಸಾಲಿಗ್ರಾಮಗಳು ಎಲ್ಲ ಬಗೆಯದಿದ್ದು ಅದನ್ನು ಈ ವಿಗ್ರಹದ ರಚನೆಯಲ್ಲಿ ಉಪಯೋಗಿಸಲಾಗಿದೆ.

**ಸಿಂಹಾಸನ :** ಅರಮನೆಯಲ್ಲಿ ಭದ್ರತೆಯಲ್ಲಿ ಇಟ್ಟಿರುವ ರಾಜರ ಸಿಂಹಾಸನ ರತ್ನ ಖಚಿತ ವಾದದ್ದು. ಮತ್ತು ಪಾಂಡವರಿಗೆ ಸೇರಿದ್ದೆಂದು ಐತಿಹ್ಯ. ಇದನ್ನು ನವರಾತ್ರಿಯ ದಿನಗಳಲ್ಲಿ ಪ್ರದರ್ಶನಕ್ಕಿಡುವರು. ಇದರ ನೋಟ ಕಣ್ಣಿಗೆ ದೊಡ್ಡ ಹಬ್ಬ.

**ಅರಮನೆ :** ಇದು ಮೊದಲು ಮರದಲ್ಲಿ ರಚಿಸಲ್ಪಟ್ಟಿತಂತೆ. ಅದು ಸುಟ್ಟುಹೋದಾಗ 1630ರಲ್ಲಿ ಪುನಃ ರಣಧೀರ ಕಂಠೀರವ ನರಸರಾಜ ಒಡೆಯರಿಂದ ಕಟ್ಟಿಸಲ್ಪಟ್ಟಿತ್ತು. ಇದು 250 x 156 ಅಡಿ ವಿಸ್ತಾರವಿದ್ದು ಇದನ್ನು ಕಟ್ಟಿಸಲು 415 ಲಕ್ಷ ರೂಪಾಯಿ ಖರ್ಚಾಗಿತ್ತು.

## 3. ಸುಬ್ಬರಾಯ ದಾಸರ ಗುಡಿ

ಮೈಸೂರು ನಗರದ ಮಧ್ಯಭಾಗದಲ್ಲಿ ಮಾರ್ಕೆಟ್‌ಗೆ ಸಮೀಪದ ಕೃಷ್ಣವಿಲಾಸ ರಸ್ತೆಯಲ್ಲಿ ಸುಬ್ಬರಾಯದಾಸರ ಗುಡಿ ಇದೆ. ಇವರು ಶ್ರೀವೇಣುಗೋಪಾಲದಾಸರ ಪೀಳಿಗೆಯಲ್ಲಿ ಬಂದ ಶ್ರೀಮುದ್ದುಮೋಹನ ಕರಸಂಜಾತರಾದ ಶ್ರಿ ಮುದ್ದುಮೋಹನ ವಿಠಲ ಅಂಕಿತರಾದ ಶ್ರೀ ಸುಬ್ಬರಾಯದಾಸರು ಇವರು ತುಮಕೂರು ಜಿಲ್ಲೆಯ ದೇವರಾಯನ ದುರ್ಗದ ಸಮೀಪದ ನರಸೀಪುರ ಗ್ರಾಮದಲ್ಲಿ ಜನ್ಮತಾಳಿದರು. ಇವರ ತಂದೆ ತಾಯಿಗಳು ಶೇಷಪ್ಪ ಮತ್ತು ಲಕ್ಷ್ಮೀದೇವಮ್ಮ. ಕೆಲಕಾಲ ಗೃಹಸ್ಥರಾಗಿದ್ದು ನಂತರ ಬೆಂಗಳೂರಿನಲ್ಲಿ ಚಿಂಚೋಳಿ ವೆಂಕಣ್ಣಾ ಚಾರ್ಯರ ಬಳಿ ಶಾಸ್ತ್ರಾಭ್ಯಾಸಂಗ ಮಾಡಿದರು. ದಿನ ದಿನಕ್ಕೆ ಆಧ್ಯಾತ್ಮಿಕ ಮನೋವೃತ್ತಿ ವೃದ್ಧಿ ಯಾಗಿ ಎಲ್ಲೆಲ್ಲೊ ತಿರುಗಾಡಿ ನಂತರ ಮೈಸೂರಿಗೆ ಬಂದರು. ಚಾಮುಂಡಿಬೆಟ್ಟದ ಗುಹೆಯಲ್ಲಿ 7 ದಿನ ತಪಸ್ಸುಮಾಡಿದ ಮಹಾಪುರುಷರು. ಇವರು ಕೆಲಕಾಲ ದಿವಾನ್ ಪೂರ್ಣಯ್ಯನವರ ಹಾಗೂ ಮುಮ್ಮಡಿ ಕೃಷ್ಣರಾಜ ಒಡೆಯರ ಸಖ್ಯವನ್ನು ಸಂಪಾದಿಸಿದ್ದರು. ಶೃಂಗೇರಿ ಸ್ವಾಮಿಗಳಿಂದ ಹಸ್ತಲಾಘವ, ಸನ್ಮಾನ ಪಡೆದವರಾಗಿದ್ದರು. ನರ್ಮದಾ ತೀರದಲ್ಲಿ ರುದ್ರ ದೇವರನ್ನು ಸಾಕ್ಷಾತ್ಕರಿಸಿಕೊಂಡು ಅವರನ್ನು ನರ್ಮದೇಶ್ವರ ಎಂಬುದಾಗಿ ಕರೆದರು.

ತಿರುಪತಿಯಲ್ಲಿದ್ದಾಗ ತಿರುಮಲೆ ದೇವಾಲಯಕ್ಕೆ ಇವರನ್ನು ಬರಮಾಡಿಕೊಂಡು ಶ್ರೀನಿವಾಸ ದೇವರ ಉತ್ಸವ ಮೂರ್ತಿಯನ್ನು ಅವರಿಂದಲೇ ಪಡೆದರು. ಮೈಸೂರಿನ ಬೆಟ್ಟದ ದೇವಿಕೆರೆ ಯಲ್ಲಿ ಶ್ರೀನಿವಾಸ ದೇವರ ಮೂಲ ಪ್ರತಿಮೆ ದೊರಕಿದ್ದಲ್ಲದೆ ದೊಡ್ಡಕೆರೆಯಲ್ಲಿ ಬಟ್ಟೆ ಒಗೆಯುವ ಕಲ್ಲಿನ ಮತ್ತೊಂದು ಭಾಗದಲ್ಲಿ ಎದುರು ಮುಖದ ಪ್ರಾಣದೇವರು ದೊರೆಯಿತು. ಇವುಗಳನ್ನು ತಮ್ಮ ಮೈಸೂರಿನ ಗುಡಿಯಲ್ಲಿ ಪ್ರತಿಷ್ಠಾಪನೆ ಮಾಡಿರುತ್ತಾರೆ. ಉಡುಪಿಯ ಅಷ್ಟಮಠದ ಯತಿಗಳಿಂದ ಸನ್ಮಾನಿತರಾಗಿದ್ದಾರೆ. ಅಲ್ಲದೆ ಪುತ್ತಿಗೆ ಮಠದ ಶ್ರೀಗಳಿಂದ 'ಪರಮಪ್ರಿಯ' ಎಂಬ ಬಿರುದನ್ನು ಪಡೆದಿದ್ದಾರೆ. ಬಿಡಿ ಸನ್ಯಾಸಿಗಳಾಗಿ, ಹರಿದಾಸರಾಗಿ ತಮ್ಮ 75 ವರ್ಷಗಳ ಸಾರ್ಥಕ ಜೀವನ ನಡೆಸಿ ಬಿಳಿಕೆರೆ ಎಂಬಲ್ಲಿ ಬೃಂದಾವನಸ್ಥರಾದರು. ಇವರ ದೇಹವನ್ನು ಈಗ ಮೈಸೂರಿಗೆ ಸ್ಥಳಾಂತರಿಸಲಾಗಿದೆ. ಇಲ್ಲಿರುವ ಪ್ರಾಣದೇವರ ವಿಗ್ರಹ ಗಳೇ 12. ಗರ್ಭಗುಡಿಯಲ್ಲಿ ಶ್ರೀ ಶ್ರೀನಿವಾಸದೇವರು ಭೂವರಾಹ ದೇವರು, ರಾಮ ದೇವರು, ಕೊಳಲ ಗೋಪಾಲಕೃಷ್ಣ ಮತ್ತು ಶ್ರೀ ರಾಘವೇಂದ್ರರ ಬೃಂದಾವನ, ಉತ್ಸವ ಮೂರ್ತಿ ಶ್ರೀ ಶ್ರೀನಿವಾಸ ದೇವರು, ಹೊರಭಾಗದಲ್ಲಿ "ಎದುರು ಮುಖ"ದ ಪ್ರಾಣದೇವರು ಮತ್ತು ಧ್ವಜಸ್ಥಂಭದಲ್ಲಿ ಅವರ ಪ್ರತಿನಾಮ ಗೋಪಾಲ ಒಡೆಯರ ಪ್ರತಿಮೆ. ಪ್ರದಕ್ಷಿಣ ಪಥದಲ್ಲಿ ಒಂದು ಕಡೆ ಮಹಾರುದ್ರ ದೇವರು (ನರ್ಮದೇಶ್ವರ) ಪಾರ್ವತಿ, ಅನ್ನಪೂರ್ಣೇಶ್ವರಿ. ಇಲ್ಲಿ ಭೂತರಾಜರ ಸನ್ನಿಧಿಯೂ ಇದೆ. ದೇವಾಲಯದ ಮೇಲುಚಾವಣಿ ಯಲ್ಲಿ ಇವರು ಮಾಡಿದ ತೀರ್ಥಯಾತ್ರೆಗಳ ಬಣ್ಣದ ಚಿತ್ರಗಳಿವೆ. ಮಹಾರಾಜರ ಚಿತ್ರವೂ ಇಲ್ಲಿ ಚಿತ್ರಿಸಲ್ಪಟ್ಟಿದೆ. ಇದೇ ಮೈಸೂರಿನ 2 ಚಿತ್ರಶಾಲೆ ಯೆಂದು ಹೆಸರಾಗಿದೆ.

ಇವರ ಇತರ ಮಹತ್ವದ ಸಾಧನೆಗಳೆಂದರೆ, ಇಂಡಿಯಾದ ನಾನಾಭಾಗಗಳಲ್ಲಿ ಪ್ರತಿಸ್ಥಾಪಿಸ ಲ್ಪಟ್ಟಿರುವ 128 ಪ್ರಾಣದೇವರ ಗುಡಿಗಳು, ದೇವರಾಯನ ದುರ್ಗದಲ್ಲಿ ಭಕ್ತರಿಂದ ದಾನ ಪಡೆದು ನಿರ್ಮಿಸಿರುವ ದಾಸಕೂಟ ಸಭಾ ಕಟ್ಟಡ, ಕೆಲ ಕಾಲ ಪ್ರಚಾರದಲ್ಲಿದ್ದ ಪರಮಾರ್ಥ ಚಂದ್ರೋದಯವೆಂಬ ಧಾರ್ಮಿಕ ಪತ್ರಿಕೆ.

## 4. ಒಂಟಿಕೊಪ್ಪಲು ಶ್ರೀನಿವಾಸದೇವರ ಗುಡಿ

ಮೈಸೂರಿನಿಂದ ಬೃಂದಾವನ ತೋಟಕ್ಕೆ ಹೋಗುವ ದಾರಿಯಲ್ಲಿ ಈ ಭವ್ಯ ದೇವಾಲಯ ವಿದೆ. ತಿರುಪತಿಯ ದೇವಸ್ಥಾನದ ಮಾದರಿಯಂತೆ ಇಲ್ಲೂ ಪೂಜೆ, ಅಲಂಕಾರ, ಉತ್ಸವಗಳು ಬಲು ವಿಜೃಂಭಣೆಯಿಂದ ನಡೆಯುತ್ತವೆ ಇದರ ರಚನೆಗೆ ಮೂಲ ಕಾರಣರು ಚಿಕ್ಕಣ್ಣ ದಾಸರು ಎಂಬವರು.

## 5. ಯೋಗಾನರಸಿಂಹ ದೇವಾಲಯ

ಮೈಸೂರು-ಹುಣಸೂರು ರಸ್ತೆಯ ಬದಿಯಲ್ಲಿದೆ. ಮೈಸೂರಿನ ಹೊಸ ಬಡಾವಣೆ ವಿಜಯ ನಗರ ಒಂದನೇ ಹಂತದಲ್ಲಿರುವ ಈ ಸುಂದರ ದೇವಾಲಯವನ್ನು ಶ್ರೀ ಭಾಷ್ಯಂ ಸ್ವಾಮಿ ಯವರು ನಿರ್ಮಿಸಿದ್ದಾರೆ. ಈ ಆಧುನಿಕವಾಗಿ ನಿರ್ಮಿಸಿರುವ ದೇವಾಲಯವನ್ನು ನೋಡಲೇ ಬೇಕು.

## 6. ಸಾಗರಕಟ್ಟೆ

ಇದು ಮೈಸೂರಿಗೆ 23 ಕಿ. ಮಿ. ದೂರದಲ್ಲಿದ್ದು ಇದನ್ನು ಮೈಸೂರು ಅರಸೀಕೆರೆ ರೈಲು ಮಾರ್ಗದ ಸಾಗರಕಟ್ಟೆ ರೈಲುನಿಲ್ದಾಣದಿಂದಲೇ ತಲುಪಬಹುದು. ಬಸ್ಸಿನಿಂದ ಇದನ್ನು ತಲುಪ ಲಾಗುವುದಿಲ್ಲ. ಇದು ಕಾವೇರಿ, ಹೇಮಾವತಿ ನದಿಗಳ ಹಿನ್ನೀರಿನ ಬಳಿ ಇದ್ದು ಪವಿತ್ರ ಸ್ಥಳ ವೆನಿಸಿದೆ. ಇಲ್ಲಿರುವ ಮಠದ ಸ್ಥಾಪನೆ ಕುಂದಾಪುರ ಶ್ರೀ ಲಕ್ಷ್ಮೀಪ್ರಿಯ ತೀರ್ಥರಿಂದ ಆಗಿದೆ. ಈ ಮಠದ ಸ್ವಾಮಿಗಳಾಗಿದ್ದ ಶ್ರೀ ಪ್ರದ್ಯುಮ್ನ ತೀರ್ಥರು ಮೈಸೂರಿನ ಹಳೆ ಬಡಾವಣೆಯಾದ ಕೃಷ್ಣಮೂರ್ತಿ ಪುರಂನ ಮಠದಲ್ಲಿ ಬೃಂದಾವನಸ್ಥರಾಗಿರುವರು.

## 7. ನಂಜನಗೂಡು

ಮೈಸೂರಿಗೆ 23 ಕಿ. ಮಿ. ಮತ್ತು ಬೆಂಗಳೂರಿಗೆ 162 ಕಿ. ಮಿ. ದೂರವಿದೆ. ಇಲ್ಲಿ ಶ್ರೀಕಂಠೇಶ್ವರ ದೇವಾಲಯವಿದೆ. ಇದು ಕಪಿಲಾನದಿ ದಂಡೆಯಲ್ಲಿದೆ. ಇದನ್ನು ನಂಜುಂಡೇಶ್ವರ ದೇವಾಲಯವೆಂದು ಕರೆಯುವರು. ಇದು ಕರ್ನಾಟಕದಲ್ಲಿಯೇ ಅತ್ಯಂತ ದೊಡ್ಡ ದೇವಾಲಯವೆಂದು ಹೆಸರಾಗಿದೆ. 385 ಅಡಿ ಉದ್ದ ಹಾಗೂ 160 ಅಡಿ ವಿಸ್ತಾರದಲ್ಲಿ ಇದನ್ನು ನಿರ್ಮಿಸಲಾಗಿದೆ. ಇದಕ್ಕೆ ದೊಡ್ಡ 120 ಅಡಿಯ ಗೋಪುರನಿರ್ಮಿಸಲ್ಪಟ್ಟಿದೆ. ಗೋಪುರದ ಮೇಲೆ 3 ಮೀಟರ್ ಎತ್ತರದ ಚಿನ್ನದ ಮುಲಾಮಿನ ಕಲಶಗಳಿವೆ. ಹಾಗೂ ಎರಡು ಕೊಂಬುಗಳಿರುವುವು. ಕಂಬಗಳಿಂದ ವಿಂಗಡಿಸಿದಂತೆ 147 ಅಂಕಣ ವಿಸ್ತಾರವಿದೆ. ಈ ದೇವಾಲಯದಲ್ಲಿ ಇರುವಷ್ಟು ವಿಗ್ರಹಗಳು ಮತ್ತೆಲ್ಲಿಯೂ ಇಲ್ಲ. ಇವುಗಳಲ್ಲಿ ಅರ್ಧ ದಷ್ಟು ಶಿವಲಿಂಗಗಳೇ. ಈ ದೇವಾಲಯದ ದ್ವಾರದಲ್ಲಿ ಚಾಮುಂಡೇಶ್ವರಿ ಪ್ರತಿಮೆ ಇದೆ. ಗರ್ಭಗುಡಿಯ ಸುತ್ತ ಪ್ರದಕ್ಷಿಣಾ ಪಥ, ನಂತರ 9 ಕಂಬಗಳ ಸಭಾಮಂಟಪ. ಈ ದೇವಾಲಯದ ಸ್ಥಾಪನೆ ಗಂಗರಸರಿಂದ ಆಗಿದ್ದಿರಬೇಕು. ನಂತರ ಚೋಳರಾಜರುಗಳಿಂದ ವಿಸ್ತಾರಗೊಂಡಿರಬೇಕು. ಮುಂದೆ ವಿಜಯನಗರದ ಅರಸರು, ದಿವಾನ್ ಪೂರ್ಣಯ್ಯನವರು, ದಳವಾಯಿಗಳು, ದೇವಾಲಯ ವನ್ನು ಕ್ರಮವಾಗಿ ವಿಸ್ತರಿಸಿದರೆಂದು ತಿಳಿದುಬರುತ್ತದೆ. ನಂಜುಂಡೇಶ್ವರ (ನಂಜಯ್ಯ) ಸಾವಿರಾರು ಜನರ ಖಾಯಿಲೆಗಳನ್ನು ಪರಿಹಾರ ಮಾಡಿದ್ದಾನೆ. ಮಾಡುತ್ತಲೂ ಇರುತ್ತಾನೆ ಎಂಬುದು ಜನರಲ್ಲಿಯ ಬಲವಾದ ನಂಬುಗೆ. ಇದಕ್ಕೆ ನಂಜುಂಡೇಶ್ವರ ಅನುಗ್ರಹದಿಂದ ಟೀಪ್ಪುವಿನ ಪಟ್ಟದಾನೆಗೆ ಹೋಗಿದ್ದ ಕಣ್ಣು ಮರಳಿ ಬಂದಿತೆಂಬ ಐತಿಹ್ಯವೇ ಸಾಕ್ಷಿ. 'ಹಕಿಂ ನಂಜುಂಡ' ಎಂಬ ಹೆಸರಿಗೆ ಇದೇ ಕಾರಣ. ಟೀಪ್ಪು ಈ ಕಾರಣಕ್ಕೆ ಪಚ್ಚೆಲಿಂಗವನ್ನು ದೇವ ಸ್ಥಾನಕ್ಕೆ ಕಾಣಿಕೆ ಕೊಟ್ಟಿದ್ದನೆಂಬುದು ಇತಿಹಾಸ. ವೈದ್ಯಕ್ಕೆ ಮಣಿಯದ ಖಾಯಿಲೆಗಳಿಂದ ನರಳುವ ಲಕ್ಷಾಂತರ ಮಂದಿಗೂ ಈ ದೇವರ ಯಾತ್ರೆ ಅಂತಿಮ ಪರಿಹಾರ. ಇಲ್ಲಿನ ಮುಖ್ಯ ಉತ್ಸವಗಳೆಂದರೆ ಎರಡು ಗಿರಿಜಾಕಲ್ಯಾಣ ಮತ್ತು ತೆಪ್ಪ. ಡಿಸೆಂಬರ್‌ನಲ್ಲಿ ನಡೆಯುವ ಅಂಧಕಾಸುರನ ಸಂಹಾರ, ಮಾರ್ಚ್-ಏಪ್ರಿಲ್‌ನಲ್ಲಿ ಪಂಚರಥ, ದೊಡ್ಡ ಜಾತ್ರೆ. ಇದನ್ನು ದಕ್ಷಿಣ ಕಾಶಿ ಎನ್ನುತ್ತಾರೆ.

ವೈಷ್ಣವರ ದೃಷ್ಟಿಯಿಂದ ನಂಜನಗೂಡು ಮಂತ್ರಾಲಯದಂತೆ ರಾಯರ ಮಠದ ಮತ್ತೊಂದು ಮುಖ್ಯ ಕೇಂದ್ರ. ಅತ್ಯಂತ ಪ್ರಾಚೀನ. 15ನೆಯ ಶತಮಾನದ್ದು. ಈ ಮಠದ

ಪರಂಪರೆಯಲ್ಲಿ ಹದಿನೇಳನೆಯ ಗುರುಗಳಾಗಿದ್ದ ಸುಜನೇಂದ್ರ ತೀರ್ಥರನ್ನು ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು 1835ರಲ್ಲಿ ಮಂಚಾಲೆಯಿಂದ ಕರೆಸಿ ನಂಜನಗೂಡಿನಲ್ಲಿ ಮಠವನ್ನು ಕಟ್ಟಿಸಿಕೊಟ್ಟು, ಹಗಲು ದೀವಟಿಗೆ ಬಿರುದನ್ನು ನೂತನವಾಗಿ ಕೊಟ್ಟು ಅನೇಕ ಗ್ರಾಮ, ಭೂಮಿಗಳನ್ನು ಚಿನ್ನ ಬೆಳ್ಳಿ ಪಾತ್ರೆಗಳನ್ನು ವಸ್ತ್ರಾಭರಣ ಮುಂತಾದ ಪೂಜೋಪಕರಣ ಗಳನ್ನೂ ಒಪ್ಪಿಸಿದರು. ಈ ಮಠದ ಸ್ವಾಮಿಗಳು ಈವರೆಗೆ ಸದಾ ಸಂಚರಿಸುತ್ತಿದ್ದ ತಮಿಳು ನಾಡನ್ನು ಬಿಟ್ಟು ಆಂಧ್ರಪ್ರದೇಶ, ಮಹಾರಾಷ್ಟ್ರ ಮತ್ತು ಮೈಸೂರು ಕಡೆ ನೆಲಸಲಾರಂಭಿಸಿದರು.

ಸುಭೋದೇಂದ್ರರೂ (1799-1807) ಹಾಗೂ ಸುಜನೇಂದ್ರರೂ (1807-1836), ಮುಮ್ಮಡಿ ಕೃಷ್ಣರಾಜರಿಂದ ಸನ್ಮಾನಿಸಲ್ಪಟ್ಟು ನಂಜನಗೂಡಿನಲ್ಲಿಯೇ ಇರಲಾರಂಭಿಸಿಲಾಗಿ ಮಠವು 'ನಂಜನಗೂಡು ರಾಘವೇಂದ್ರಮಠ'ವೆಂದೇ ವ್ಯವಹಾರವಾಗಿದೆ. ಹಿಂದಿನ ಸ್ವಾಮಿಗಳಲ್ಲಿ ನಾಲ್ಕೈದು ಮಂದಿ ಬೃಂದಾವನವಾಗಿರುವುದು ಇಲ್ಲಿಯೇ.

ಶ್ರೀಕಂಠೇಶ್ವರ ದೇವಾಲಯದ ರಥ ಬೀದಿ ರಸ್ತೆಯೊಂದರ ಬಳಿ ಈ ಶ್ರೀರಾಘವೇಂದ್ರಮಠ ವಿದೆ. ಇಲ್ಲಿ ರಾಯರ ಮೃತ್ತಿಕಾಬೃಂದಾವನವಿರುವುದರ ಜೊತೆಗೆ ರಾಯರ ಮಠದ ಸ್ವಾಮಿಗಳ ಮೂಲ ಬೃಂದಾವನಗಳನ್ನೂ ಕಾಣಬಹುದು. ಇವರೇ ಶ್ರೀ ಸುಭೋದೇಂದ್ರರು. ಶ್ರೀ ಸುಜನೇಂದ್ರರು ಶ್ರೀ ಸುಜ್ಞಾನೇಂದ್ರರು (ಚಂದ್ರಿಕಾಮಂಡನ ರಚನೆಕಾರರು) ಶ್ರೀ ಸುಪ್ರಜ್ಞೇಂದ್ರರು ಹಾಗೂ ಶ್ರೀ ಸುಕೃತೀಂದ್ರರು.

## 8. ತಿರುಮಕೂಡಲು ನರಸೀಪುರ (ತ್ರಿಮಕೂಟ)

ಇದು ಮೈಸೂರಿನ ಆಗ್ನೇಯಕ್ಕೆ 30 ಕಿ. ಮೀ. ದೂರದಲ್ಲಿ ಕಾವೇರಿ ಕಪಿಲಾ ಸಂಗಮ ಸ್ಥಳದಲ್ಲಿದೆ. ಇದರ ತಳದಲ್ಲಿ ಗುಪ್ತವಾದ ಸ್ಫಟಿಕ ಸರೋವರವಿರುವುದೆಂದು ನಂಬಲಾಗಿದ್ದು ಈ ಸ್ಥಳವನ್ನು ತ್ರಿವೇಣಿಸಂಗಮದ ಸ್ಥಳವೆಂದು ಹೇಳುತ್ತಾರೆ. ಇಲ್ಲಿಯ ಪ್ರಸಿದ್ಧ ದೇವಾಲಯ ಅಗಸ್ತ್ಯೇಶ್ವರ ದೇವಾಲಯ. ಇದು ದ್ರಾವಿಡ ಶೈಲಿಯಲ್ಲಿ ನಿರ್ಮಿಸಲ್ಪಟ್ಟಿದೆ. ಇಲ್ಲಿರುವ ಅಗಸ್ತ್ಯೇಶ್ವರ ಲಿಂಗವನ್ನು ಅಗಸ್ತ್ಯರು ಸ್ಥಾಪಿಸಿದ್ದು. ಒಮ್ಮೆ ಅಗಸ್ತ್ಯರು ಯೋಗ್ಯವಾದ ಒಂದು ಲಿಂಗವನ್ನು ಬಯಸಿ ಅದನ್ನು ತರಲು ಹನುಮಂತನಿಗೆ ಆಜ್ಞಾಪಿಸಿದರು. ಲಿಂಗಸ್ಥಾಪನೆಗೆ ತಡವಾದಾಗ ಅಗಸ್ತ್ಯರು ಬೇರೊಂದು ಮರಳುಲಿಂಗವನ್ನು ಪ್ರತಿಷ್ಠಾಪನೆ ಮಾಡಿದರೆಂದೂ ಹನುಮಂತನು ಲಿಂಗವನ್ನು ತಂದಾಗ ಬೇರೊಂದು ಲಿಂಗ ಪ್ರತಿಷ್ಠೆ ಆಗಿದ್ದುದು ಕಂಡು ಸ್ಥಾಪಿಸಿದ್ದ ಲಿಂಗವನ್ನು ಮುಷ್ಠಿಯಿಂದ ಹೊಡೆದನೆಂದು ಅದಕ್ಕಾಗಿ ಆ ಲಿಂಗವು ಮೂರು ಪೊಳ್ಳಾಯಿತೆಂದು ಪೌರಾಣಿಕರು ಹೇಳುತ್ತಾರೆ. ಅದರಲ್ಲಿ ಈಗಲೂ ಪೊಳ್ಳಿದ್ದು ಅದರಿಂದ ತೀರ್ಥ ಉದ್ಭವವಾಗುತ್ತಲಿದೆ. ಹನುಮಂತ ತಂದ ಲಿಂಗವೂ ಆ ದೇವಾಲಯದ ಬಳಿಯ ಮತ್ತೊಂದು ದೇವಸ್ಥಾನದಲ್ಲಿ ಪ್ರತಿಷ್ಠೆಯಾಗಿದೆ. ಇದನ್ನು ಹನುಮಂತೇಶ್ವರ ದೇವಾಲಯ ವೆನ್ನುವರು. ಅಗಸ್ತ್ಯೇಶ್ವರನ ದರ್ಶನದ ಮೊದಲು ಹನುಮಂತೇಶ್ವರನ ದರ್ಶನ ಮಾಡಬೇಕೆಂಬ ವಿಧಿ ಇದೆ.

ಅಗಸ್ತ್ಯೇಶ್ವರ ದೇವಸ್ಥಾನದ ಹಿಂದೆ ಒಂದು ಬೃಹತ್ ಅರಳಿ ಮರವಿದೆ. ಅದನ್ನು ಬ್ರಹ್ಮಾಶ್ವತ್ಥವೆನ್ನುವರು. ಇದು ನಾಗರಪ್ರತಿಷ್ಠೆ ಮಾಡುವವರಿಗೆ ಉತ್ತಮಸ್ಥಳ. ಇದು ಬಹುವರ ಪ್ರಸಾದಿ ಎಂಬ ನಂಬಿಕೆ ಇದೆ.

**ವ್ಯಾಸರಾಯ ಮಠ :** ಸಂಗಮ ಭಾಗದಲ್ಲಿ ಪ್ರಸಿದ್ಧವಾದ ವ್ಯಾಸರಾಯಮಠವಿದೆ. ಇದು ಪೂರ್ವದಲ್ಲಿ ಹಳೆ ಸೋಸಲೆಯಲ್ಲಿದ್ದು ಇಲ್ಲಿಗೆ ಈಗ ವರ್ಗಾಯಿಸಲ್ಪಟ್ಟಿದೆ. ಇಲ್ಲಿ ವ್ಯಾಸ ರಾಯರಮಠದ ಯತಿಗಳಾದ ರಘುನಾಥ ತೀರ್ಥರ ಬೃಂದಾವನವಿದೆ. ಇವರು ವ್ಯಾಸರಾಯರು ಬರೆದು ನಿಲ್ಲಿಸಿದ್ದ ಚಂದ್ರಿಕಾ ಗ್ರಂಥದ ಉಳಿದ ಭಾಗವನ್ನು ಅದೇ ಜಾಡಿನಲ್ಲಿ ಇವರು ಬರೆದು ಮುಗಿಸಿದ್ದರಿಂದ ಅವರಿಗೆ ಚಂದ್ರಿಕಾಚಾರ್ಯರೆಂಬ ಹೆಸರು ಬಂತು. ಇವರು ರಾಘವೇಂದ್ರ ಗುರುಗಳ ಮೂರನೆ ಅವತಾರ. ಅವರ ಆರಾಧನೆ ಆಶಾಡ ಶುದ್ಧ ಚತುರ್ಥಿ. ಇದಲ್ಲದೆ ಇಲ್ಲಿ ನವ ಬೃಂದಾವನಗಳೂ ಇವೆ. ಮುಖ್ಯಪ್ರಾಣದೇವರು ಹಾಗೂ ಕಂಬದ ಹಳ್ಳಿಯ ನರಸಿಂಹ ದೇವರುಗಳು ಪೂಜಿಸಲ್ಪಡುತ್ತಿದ್ದಾರೆ. ಈ ಮಠದ ಆರಾಧ್ಯ ದೇವತೆ ರುಕ್ಮಿಣಿ ಸತ್ಯಭಾಮಾ ಸಹಿತ ಗೋಪಾಲ ಕೃಷ್ಣಮೂರ್ತಿ. ಇದು ಜಾಂಬವತಿ ಪೂಜಿತ, ವ್ಯಾಸರಾಯ ಪೂಜಿತ ದೇವರು.

## 9. ಹಳೆ ಸೋಸಲೆ

ಇದು ತಿರುಮಕೂಡಲಿಗೆ 5 ಕಿ. ಮಿ. ಬನ್ನೂರಿಗೆ ಹೋಗುವ ದಾರಿಯಲ್ಲಿದೆ. ವ್ಯಾಸರಾಯ ಮಠವು ಬಹಳ ಕಾಲ ಇಲ್ಲಿದ್ದು, ಅದನ್ನು ತಿರುಮಕೂಡಲಿಗೆಶ್ರೀ ವಿದ್ಯಾಪಯೋ ನಿಧಿ ತೀರ್ಥರು ಬದಲಾಯಿಸಿದ್ದಾರೆ. ಆದರೆ ಈ ಮೊದಲ ಬೃಂದಾವನಗಳು ಇಲ್ಲಿವೆ. ಶ್ರೀ ವಿದ್ಯಾವಲ್ಲಭ ತೀರ್ಥರಿಂದ (1809)ರಿಂದ ಹಿಡಿದು ವಿದ್ಯಾಪ್ರಸನ್ನ ತೀರ್ಥರವರೆಗೆ ಇದ್ದ 8 ಸ್ವಾಮಿಗಳ ಬೃಂದಾವನಗಳಿವೆ. ಅಲ್ಲದೆ ವ್ಯಾಸರಾಯರಿಂದ ಪ್ರತಿಷ್ಠಾಪಿಸಿದ ರುದ್ರದೇವರ ಗುಡಿಯಿದೆ. ಆದರೆ ಇಲ್ಲಿಗೆ ಬೇಟಿಕೊಡಲು ಯಾವ ಅನುಕೂಲವೂ ಇಲ್ಲ.

## 10. ನರಸೀಪುರ

ಇದು ತಿರುಮಕೂಡಲಿಗೆ ಹತ್ತಿರದಲ್ಲೇ ಇದ್ದು ಸೇತುವೆ ದಾಟಿದನಂತರ ಸಿಗುತ್ತದೆ. ಇದು ಕಾವೇರಿ ಕಪಿಲಾನದಿ ತೀರದ ಕ್ಷೇತ್ರ. ಇದನ್ನು ಭಾಸ್ಕರಕ್ಷೇತ್ರವೆನ್ನುವರು. ಇಲ್ಲಿ ನದಿ ದಂಡೆಯಲ್ಲಿ ಪ್ರಸಿದ್ಧವಾದ ಗುಂಜಾನರಸಿಂಹ ದೇವಾಲಯವಿದೆ. ಇದು ವಿಜಯನಗರಕಾಲದ ದೇವಸ್ಥಾನ. ಮೂಲದೇವರಾದ ನರಸಿಂಹದೇವರು ಬಹು ಪುರಾತನವಾದುದು. ಗರ್ಭಗೃಹ ದಲ್ಲಿರುವ ನರಸಿಂಹದೇವರ ಬಲಗೈ ಹೆಬ್ಬೆರಳು ಹಾಗೂ ತೋರುಬೆರಳುಗಳ ನಡುವೆ ಗುಂಜಾ ಸಸ್ಯದ ಕಾಂಡವೊಂದನ್ನು ಬಿಡಿಸಲಾಗಿದೆ.

ಈ ಕ್ಷೇತ್ರವು ಪಾವಿತ್ರ್ಯದಲ್ಲಿ ಕಾಶಿಗಿಂತ ಒಂದು ಗುಲಗಂಜಿ ತೂಕ ಹೆಚ್ಚು ಎಂದು ಇದು ತಿಳಿಸುತ್ತದೆ.

ಇತರ ದೇವಾಲಯಗಳೆಂದರೆ, ಕಪಿಲನದಿಯ ದಡದಲ್ಲಿರುವ ಮೂಲಸ್ಥಾನೇಶ್ವರ (1300) ಮತ್ತು ಜನಾರ್ಧನ. ಅಲ್ಲಿ ಪಾರ್ವತಿ ಅಮ್ಮನವರ ಕುತ್ತಿಗೆಯಲ್ಲಿ ಚಿನ್ನದ ತಾಳಿ ಉದ್ಭವವಾಗಿದೆ. ಇದನ್ನು ಯಾತ್ರಾರ್ಥಿಗಳು ಸಂದರ್ಶಿಸಬಹುದು.

## 11. ಗರ್ಗೇಶ್ವರಿ

ಮೈಸೂರಿನಿಂದ ಟಿ ನರಸೀಪುರಕ್ಕೆ ಹೋಗುವ ದಾರಿಯಲ್ಲಿದೆ. ಟಿ, ನರಸೀಪುರಕ್ಕೆ 2 ಕಿ.ಮಿ. ಅಲ್ಲಿ ಗಾರ್ಗ ಋಷಿಗಳಿಂದ ಸ್ಥಾಪಿತವಾದ ಗರ್ಗೇಶ್ವರ ದೇವಾಲಯವಿದೆ. ವರ್ಷಕ್ಕೊಮ್ಮೆ ಈ ದೇವರು ಬೆಳೆಯುತ್ತಿದ್ದಾನೆ ಎಂದು ಪ್ರತೀತಿ. ದೇವರ ಲಿಂಗದಲ್ಲಿ ಜಡೆ ಬೆಳೆದಿದೆ.

## 12. ಬಲಮುರಿ

ಮೈಸೂರಿನಿಂದ 11 ಕಿ. ಮಿ. ಸಾಗಿ ಕೃಷ್ಣರಾಜಸಾಗರಕ್ಕೆ (ಬೃಂದಾವನ) ಹೋಗುವ ದಾರಿಯ ಬಲಭಾಗಕ್ಕೆ ತಿರುಗುವ ಕಚ್ಚಾರಸ್ತೆಯಲ್ಲಿ 2 ಕಿ. ಮಿ. ಪ್ರಯಾಣಮಾಡಿದರೆ, ಬಲಮುರಿ ಸಿಗುತ್ತದೆ. ವಿರಜಾ ಅಣೆಕಟ್ಟಿನ ಪ್ರದೇಶವೇ ಇದು. ಇಲ್ಲಿ ಬಹು ವಿಸ್ತಾರವಾದ ದೇವಾಲಯಗಳ ಸಮೂಹವಿದೆ. ಗಣೇಷ, ನಾರಾಯಣ, ಕೈಲಾಸೇಶ್ವರ, ಪಾರ್ವತಿ, ಅಗಸ್ತ್ಯೇಶ್ವರ, ಹಾಗೂ ಪ್ರಾಣ ದೇವರ ಗುಡಿಗಳಿವೆ. ಇದರಲ್ಲಿ ಅಗಸ್ತ್ಯೇಶ್ವರ ದೇವಾಲಯವೇ ಅತ್ಯಂತ ಹಳೆಯದು. (1403 ಕಿ. ಶ) ಈ ದೇವಾಲಯವನ್ನು ಕಣ್ವಋಷಿ ತಪಸ್ಸು ಮಾಡುತ್ತಿದ್ದ ಜಾಗದಲ್ಲಿ ನಿರ್ಮಿಸಲಾಗಿದೆ. ನದಿಗೆ ಉತ್ತಮ ಸೋಪಾನಗಳಿವೆ. ಆದರೆ ಸುಳಿಗಳು ನದಿಯಲ್ಲಿ ಇರುವುದರಿಂದ ಅಪಾಯವಿದೆ. ಸ್ಥಳದ ಮೇಲುಗಡೆ ಒಂದೆರಡು ಕಿ. ಮಿ. ದೂರದಲ್ಲಿ ಎಡಮುರಿ ಎಂಬ ಸ್ಥಳವೂ ಇದೆ. ಇಲ್ಲೂ ಕಟ್ಟೆಯ ಮೇಲಿನ ಜಲಪಾತದ ದೃಶ್ಯವನ್ನು ವೀಕ್ಷಿಸಬಹುದು. ಒಟ್ಟಿನಲ್ಲಿ ಈ ಸ್ಥಳವು ಕಾಲುವೆ. ದೇವಾಲಯ, ಮರಗಳ ಸಮೂಹ ಜಲಪಾತ ಇವುಗಳಿಂದ ತುಂಬಿದ್ದು ಸುಂದರ ಸ್ಥಳವಾಗಿದೆ. ಇಲ್ಲಿ ರಾತ್ರಿ ತಂಗಲು ಅನುಕೂಲವೂ ಇದೆ. ವೈಷ್ಣವ ಸಂಪ್ರದಾಯದವರು ವನಭೋಜನವನ್ನು ಏರ್ಪಡಿಸುತ್ತಾರೆ. ಈ ಕ್ಷೇತ್ರವು ಕಾಶಿಗಿಂತಲೂ ಪವಿತ್ರ ಎನ್ನು ವರು.

## 13. ಸಾಲಿಗ್ರಾಮ

ರಾಮಾನುಜರು ಕನ್ನಡನಾಡಿಗೆ ಕಾಲಿಟ್ಟೊಡನೆ ಇಲ್ಲಿಗೆ ಬಂದಿದ್ದರೆಂದು ಪ್ರತೀತಿ ಇದೆ. ಇವರ ಕುರುಹಾಗಿ ಶ್ರೀಪಾದ ಸನ್ನಿಧಿಯನ್ನೂ ಶ್ರೀಪಾದ ತೀರ್ಥವನ್ನೂ ತೋರಿಸುತ್ತಾರೆ. ರಾಮಾನುಜರು ಬಳಸುತ್ತಿದ್ದ ಪುಷ್ಕರಿಣಿಯಲ್ಲಿ ಇಂದಿಗೂ ಯಾರು ಮೀಯುವಂತಿಲ್ಲ, ಮುಟ್ಟುವಂತಿಲ್ಲ. ಇದನ್ನು ರಾಮಾನುಜ ಪುಷ್ಕರಿಣಿ ಎನ್ನುವರು. ಇಲ್ಲಿ ಯೋಗಾನರಸಿಂಹ ಸ್ವಾಮಿಯ ಗುಡಿಯೂ ಇದೆ.

## 14. ಬನ್ನೂರು

ಮೈಸೂರಿನಿಂದ 14 ಕಿ. ಮಿ. ದೂರದಲ್ಲೂ, ಟಿ. ನರಸೀಪುರದಿಂದ 29 ಕಿ. ಮಿ. ದೂರದಲ್ಲೂ ಇದೆ. ಇದನ್ನು ವಹ್ನಿಪುರ, ವರ್ಣೀಯೂರು ಎಂಬ ಹೆಸರಿನಿಂದ ಕರೆಯು ತ್ತಿದ್ದರು. ಇದು ವ್ಯಾಸರಾಜರು ಜನ್ಮತಾಳಿದ್ದ ಸ್ಥಳ. ಅವರು ಹುಟ್ಟಿದ ಸ್ಥಳದಲ್ಲಿ ಜನ್ಮಾಂಜನೇಯ ದೇವಾಲಯವಿದೆ. ಇದು ಸರೋವರದ ಬಳಿ ಇರುವುದರಿಂದ ಇದಕ್ಕೆ ಸರೋವರಾಂಜನೇಯ ಎಂಬ ಹೆಸರೂ ಉಂಟು. ಅಲ್ಲದೇ ಕೋಸಲೇಶ್ವರ, ವ್ಯಾಸರಾಯ

ಪ್ರತಿಷ್ಠೆಯ ಹನುಮಂತೇಶ್ವರ ಇವೂ ಇವೆ. ಇಲ್ಲಿನ ಶ್ರೀ ರಾಮದೇವರ ದೇವಸ್ಥಾನ ಅತಿ ದೊಡ್ಡದು.

## 15. ಚುಂಚನಕಟ್ಟೆ

30 ಕಿ. ಮಿ. ದೂರವಿರುವ, ಕೃಷ್ಣರಾಜಸಾಗರಕ್ಕೆ ಸಮೀಪವಾಗಿ ಈ ಕಾವೇರಿ ನದಿಯ ಜಲಪಾತವಿದೆ. 60-80 ಅಡಿಗಳಿಂದ ನದಿಯ ನೀರು ಭೋರ್ಗರೆದು ಧುಮುಕುತ್ತವೆ. ಪುರಾಣ ದಂತೆ ಈಸ್ಥಳವು ತೃಣಬಿಂದು ಮಹರ್ಷಿಗಳ ಆಶ್ರಮದಿಂದ ಕೂಡಿತ್ತೆಂದೂ ಹೇಳಲಾಗಿದೆ. ಇಲ್ಲಿ ಚುಂಚ-ಚುಂಚಿ ಎಂಬ ಮಹಾಕ್ರೂರಿಗಳಾದ ಬೇಡ ದಂಪತಿಗಳಿದ್ದರೆಂದೂ, ಶ್ರೀರಾಮನ ಆಗಮನದ ಸಂದರ್ಭದಲ್ಲಿ ಮನ ಪರಿವರ್ತನೆಯಾಗಿ ಅವರು ಸಾತ್ವಿಕರಾದರೆಂದೂ ಕಥೆ ಇದೆ. ಇಲ್ಲಿ ಲಕ್ಷ್ಮಣನ ಬಾಣದಿಂದ ಉಂಟಾಯಿತು ಎನ್ನುವ ಜಲಪಾತಕ್ಕೆ ದನುಷ್ಕೋಟಿ ಎಂಬ ಹೆಸರಿದೆ. ಇದು 80 ಅಡಿ ಎತ್ತರದಿಂದ ಹಂತ ಹಂತವಾಗಿ ದುಮುಕುವುದು. ಈ ಜಲಪಾತದ ಪಕ್ಕದಲ್ಲೇ ಬಣ್ಣ ಬಣ್ಣದ ನೀರು ಬೀಳುವ (ಎಣ್ಣೆ ನೀರು, ಸೀಗೆಯ ನೀರು, ಅರಿಶಿನದ ನೀರು) ನೀರಿನ ಧಾರೆ ಇದೆ. ಇದನ್ನು ಸೀತಾ ಬಚ್ಚಲು, ಸೀತೆ ಮೊರೆವು ಎನ್ನುವರು. ಈ ಜಲಪಾತದ ಬಲಗಡೆ ಶ್ರೀಮುಮ್ಮಡಿ ಕೃಷ್ಣರಾಜರಿಂದ ರಚಿಸಲ್ಪಟ್ಟ ಕೋದಂಡರಾಮ ದೇವಾಲಯವಿದೆ. ಇದಕ್ಕೆ 30 ಮೆಟ್ಟಿಲುಗಳಿವೆ. ಒಳಗಡೆ ಪ್ರವೇಶಿಸಿದರೆ ಸೀತೆ, ರಾಮ ಲಕ್ಷ್ಮಣರ ವಿಗ್ರಹವಿದೆ. ಇಲ್ಲಿನ ವಿಶೇಷವೆಂದರೆ ಸೀತೆ ರಾಮನ ಬಲಭಾಗಕ್ಕೆ ಇರುವುದು. ದೇವಾಲಯದ ಒಳಗೆ ಪ್ರವೇಶಿಸಿದರೆ ಜಲಪಾತದ ಶಬ್ದ ಸ್ವಲ್ಪವೂ ಕೇಳಿಸುವುದಿಲ್ಲ. ದಂತಕಥೆಯಂತೆ ಶ್ರೀರಾಮನು ಜಲಪಾತದ ಶಬ್ದವನ್ನು ಕೇಳಲಾರದೆ ಅದು ಇಂಗಿಹೋಗಲಿ ಎಂಬ ಶಾಪದ ಫಲ. ಒಳಗೆ ನಿಶ್ಯಬ್ದ, ಗುಡಿ ಹೊರಗೆ ಭೋರ್ಗರೆಯುವ ಶಬ್ದ ಇಲ್ಲಿನ ವಿಶೇಷ. ಇದು ಸುಂದರವಾದ ಪ್ರವಾಸಿ ತಾಣವೂ ಅಹುದು.

## 16. ತಾಯೂರು

ಟಿ. ನರಸೀಪುರಕ್ಕೆ ತೀರ ಸಮೀಪವಾಗಿರುವ ಈ ಸ್ಥಳದಲ್ಲಿ ಹನುಮಂತ ದೇವರ ಗುಡಿಯೂ ಮುಳುಬಾಗಿಲು ಮಠದ ಶ್ರೀಗುಣನಿಧಿತೀರ್ಥರ ಬೃಂದಾವನವೂ ಇದೆ.

## 17. ಇತರ

ಮೂಗೂರು ಟಿ. ನರಸೀಪುರಕ್ಕೆ 4 ಕಿ. ಮಿ. ತಿಬ್ಬಾದೇವಿ, ತ್ರಿಪುರಾಂಭ, ಬ್ರಮರಾಂಭ ಗುಡಿಗಳು.

## 18. ಸೋಮನಾಥ ಪುರ

ಮೈಸೂರಿನಿಂದ 40 ಕಿ. ಮಿ. ಕೇಶವ ದೇವಾಲಯ

## 19. ಅಗರ

ಯಳಂದೂರು ಬಳಿ 4 ಪ್ರಾಚೀನ ದೇವಾಲಯಗಳು, ರಾಮೇಶ್ವರ, ನರಸಿಂಹ, ವರದರಾಜ, ದುರ್ಗಾದೇವಿ

## 20. ಯಳಂದೂರು

ಮೈಸೂರಿನಿಂದ 67 ಕಿ.ಮಿ. ಗೌರೀಶ್ವರ ದೇವಾಲಯ.

# ಚಾಮರಾಜನಗರ ಜಿಲ್ಲೆ

## 21. ಬಿಳಿಗಿರಿ ರಂಗನ ಬೆಟ್ಟ

ಮೈಸೂರಿಗೆ 120 ಕಿ. ಮಿ.

ಬೆಂಗಳೂರು 247 ಕಿ. ಮಿ

ಯಳಂದೂರು 15 ಕಿ. ಮಿ

ಈ ಸ್ಥಳಕ್ಕೆ ಯಳಂದೂರಿನ ಮೂಲಕವಾಗಲೀ (4 1/2 ಕಿ.ಮಿ) ಅಥವಾ ಚಾಮರಾಜ ನಗರದ ಮೂಲಕವಾಗಿಯಾಗಲಿ ಬಸ್ಸಿನಲ್ಲಿ ಪ್ರಯಾಣಿಸಬಹುದು. ಇದು 5091 ಅಡಿ ಎತ್ತರ ವಾಗಿದ್ದು ಎರಡುಕಡೆಯೂ ಬಹು ಚೆನ್ನಾಗಿರುವ ರಸ್ತೆ ಸೌಕರ್ಯವಿದೆ. ಇದಕ್ಕೆ ಬಿಳಿಗಿರಿ ಮತ್ತು ಶ್ವೇತಾದ್ರಿ ಎಂಬ ಹೆಸರುಗಳೂ ಇವೆ. (ದಕ್ಷಿಣ ತಿರುಪತಿ) ಬೆಟ್ಟವು ದಕ್ಷಿಣೋತ್ತರವಾಗಿ 16 ಕಿ. ಮಿ. ಹಬ್ಬಿದ್ದು ದಟ್ಟವಾದ ಕಾಡಿನಿಂದ ಆವೃತವಾಗಿದೆ. ಕಾಡುಮೃಗಗಳು ಅದರಲ್ಲೂ ಆನೆಗಳ ಸಂಚಾರವಿರುವ ಈ ಕಾಡುದಾರಿಯಲ್ಲಿ ಯಾವ ಪ್ರಾಣಿಗಳಿಂದಲೂ ಅನಾಹುತ ಸಂಭವಿಸಿಲ್ಲ. ಬಿಳಿಗಿರಿ ರಂಗಸ್ವಾಮಿಯ ದೇವಾಲಯ ಒಂದು ಬಿಳಿ ಕಮರಿಕಲ್ಲಿನ ಮೇಲಿದ್ದು ಅದರಿಂದಲೇ ಇದು ಬಿಳಿಗಿರಿ ಎಂಬ ಹೆಸರನ್ನು ಪಡೆದಿದೆ. ದೇವಸ್ಥಾನವು ದ್ರಾವಿಡ ಶೈಲಿಯಲ್ಲಿ ರಚಿತವಾಗಿರುವುದು. ಬಿಳಿಗಿರಿ ರಂಗಸ್ವಾಮಿಯ (ಬಿಳಿಕಲ್ಲು ರಂಗನಾಥ) ವಿಗ್ರಹವು 4 ½ ಅಡಿ ಎತ್ತರವಿದ್ದು ಚತುರ್ಭುಜ ಮೂರ್ತಿ. ನಡುಪಟ್ಟಿ, ಕಠಾರಿಗಳಿಂದ ಅಲಂಕೃತ. ಇದಕ್ಕೆ ಹೊಂದಿಕೊಂಡು ಅಲಮೇಲು ಮಂಗೈ ಎನ್ನುವ ಹೆಸರಿನ ಅಮ್ಮನವರ ಗುಡಿ ಇದೆ. ಇದು ಬೆಟ್ಟದ ಮೂಲನಿವಾಸಿಗಳಾದ ಸೋಲಿಗರ ಕುಲದೈವವೂ ಆಗಿದೆ. (ನೆಂಟ ಭಾವ) ದಿವಾನ್ ಪೂರ್ಣಯ್ಯನವರಿಂದ 2 ಗ್ರಾಮ ದತ್ತಿಯಾಗಿ ಕೊಡಲ್ಪಟ್ಟಿದೆ. ಹೊಯ್ಸಳ ವಿಷ್ಣುವರ್ಧನನಿಂದ ಜೀರ್ಣೋದ್ಧಾರವಾದ ಬಗ್ಗೆ ಮಾಹಿತಿಯೂ ಇದೆ. ಬೂದಿತಿಟ್ಟಿನ ಮಾದಿಗರಿಂದ ಒಂದು ಜೊತೆ ದೊಡ್ಡ ಅಳತೆಯ ಪಾದರಕ್ಷೆ ವರ್ಷವರ್ಷವೂ ತಯಾರಾಗಿ ದೇವಾಲಯಕ್ಕೆ ಸಮರ್ಪಣೆಯಾಗುತ್ತಿದೆ. ಕಳೆದ ವರ್ಷದ ಪಾದರಕ್ಷೆಯ ಚೂರುಗಳನ್ನು ಭಯ ಭೀತಿಗಳ ನಿವಾರಣೆಗಾಗಿ ಜನರಿಗೆ ಕೊಡಲ್ಪಡುತ್ತಿದೆ.

**ದೊಡ್ಡ ಸಂಪಿಗೆ / ಭಾರ್ಗವಿ ನದಿ :**

ಬಿಳಿಗಿರಿ ರಂಗನ ಬೆಟ್ಟದ ಮೇಲೆ 16 ಕಿ.ಮಿ.

ವೈಖಾನಸ ಇತ್ಯಾದಿ ಮುನಿಪುಂಗವರು ತಪಸ್ಸನ್ನಾಚರಿಸಿದ ಸ್ಥಳ. ಅತಿ ಪುರಾತನವಾದ ಈ ಸ್ಥಳದಲ್ಲಿ ಬೃಹತ್ ಸಂಪಿಗೆ ಮರವಿದೆ. ಮರದ ಕೊಂಬೆಗಳು ಬ್ರಹ್ಮ ವಿಷ್ಣು ಮಹೇಶ್ವರರು

ಎಂಬ ಭಾವನೆ ಇದೆ. ಈ ಸ್ಥಳದಲ್ಲಿ ದುರ್ಗಾದೇವಿ ಮಹಾದೇವರು ಸನ್ನಿಹಿತರಾಗುವೆಂದು ಪ್ರತೀತಿ. ಪರಶುರಾಮರು ಬ್ರಹ್ಮಹತ್ಯಾನಂತರ ದೋಷ ಪರಿಹಾರಾರ್ಥವಾಗಿ ಇಲ್ಲಿ ತಪಸ್ಸನ್ನಾಚರಿಸಿ ಭಗವಂತನ ಪಾದಗಳನ್ನು ಇಲ್ಲಿ ಹರಿಯುವ ಭಾರ್ಗವಿ ನದಿ ನೀರಿನಿಂದ ತೊಳೆದರಂತೆ.

## 22. ಗೋಪಾಲಸ್ವಾಮಿ ಬೆಟ್ಟ

ಚಾಮರಾಜನಗರ ಜಿಲ್ಲೆ. ಮೈಸೂರಿನಿಂದ 55ಕಿ. ಮಿ. ದೂರವಿರುವ ಬೆಟ್ಟ. ಇದು ಗೋವಿನಾಕಾರದಲ್ಲಿರುವುದರಿಂದ ಇದನ್ನು ಗೋವರ್ಧನಗಿರಿ ಎನ್ನುವರು. ಕಮಲಾಚಲ, ಕಂಜಗಿರಿ ಇವು ಇತರ ಹೆಸರುಗಳು. ದಕ್ಷಿಣ ಊಟಿ ಎಂದು ಹೆಸರು ಪಡೆದಿದೆ. ಹಾಗೂ ದಿನದ 24 ಘಂಟೆಯೂ ಹಿಮಾವೃತ ಪ್ರದೇಶವಾಗಿರುವುದರಿಂದ ಹಿಮವದ್‌ಗೋಪಾಲ ಸ್ವಾಮಿ ಬೆಟ್ಟವೆಂದೂ ಕರೆಯಲ್ಪಡುತ್ತಿದೆ. ಈ ಬೆಟ್ಟಕ್ಕೆ ಹೋಗಲು ಸುಗಮವಾದ ರಸ್ತೆ ಇದೆ. ಆದರೆ ಬೆಟ್ಟಕ್ಕೆ ಹೋಗುವ ದಾರಿ ತುಂಬಾ ಕಡಿದಾಗಿದ್ದು ಪ್ರಯಾಣಿಕರನ್ನು ಪೇಚಿಗೆ ಸಿಕ್ಕಿಹಾಕಿಕೊಳ್ಳುವಂತಹ ಪರಿಸ್ಥಿತಿಯನ್ನು ಸೃಷ್ಟಿಸುವಂತಿದೆ. ಗೋಪಾಲಪುರ, ಕುನಗನ ಹಳ್ಳಿ ಹಾಗೂ ಹಂಗಳ ಮಾರ್ಗವಾಗಿ ಬೆಟ್ಟವನ್ನು ಕಾಲ್ನಡಿಗೆಯಲ್ಲೂ ಏರಬಹುದು. ದಾರಿ ಸ್ವಲ್ಪ ಕಠಿಣ. ಇಲ್ಲಿಯ ಆರಾಧ್ಯದೇವತೆ ಗೋಪಾಲಸ್ವಾಮಿ. ದೇವರಿಗೆ ಸಂತಾನಗೋಪಾಲನೆಂದೂ ಹೆಸರು. ಸ್ವಾಮಿ ರುಕ್ಮಿಣಿ ಸತ್ಯಭಾಮೆಯರೊಡನೆ ನೆಲೆಸಿದ್ದಾನೆ. ಇದನ್ನೂ ಅಗಸ್ತ್ಯರು ಸ್ಥಾಪಿಸಿದರೆಂದು ಪ್ರತೀತಿ. ಪುರಾಣದ ಕಥೆಗಳು ವಿಷ್ಣುಪಾರಣ್ಯವನ್ನು ಈ ಕ್ಷೇತ್ರದ ಬಗ್ಗೆ ತಿಳಿಸುತ್ತವೆ. ಈ ದೇವಾಲಯದ ಸುತ್ತ 8 ತೀರ್ಥಗಳಿವೆ. ಅದರಲ್ಲಿ ಹಂಸತೀರ್ಥವೆಂಬು ದರಲ್ಲಿ ಕಾಗೆಗಳು ಸ್ನಾನ ಮಾಡಿ ಹಂಸವಾಗಿ ಹೊರಬಂದುದನ್ನು ಪುರಾಣಕಥೆಗಳು ಹೇಳುತ್ತವೆ. ಸುಂದರಗಿರಿತಾಣವಾಗಿದ್ದು ಪ್ರವಾಸಿಗರಿಗೆ ನೋಡಲು ಉತ್ತಮ ಸ್ಥಳ. ಇಲ್ಲಿ ತಂಗಲು ವೇಣುಲಾಡ್ಜ್, ವೇಣುವಿಹಾರವೆಂಬ ಹೆಸರಿನ ಕಟ್ಟಡವಿದೆ. ಮೈಸೂರಿನಿಂದ ಬಸ್ಸುಗಳು ಶನಿವಾರದಂದು, ವಿಶೇಷ ದಿನಗಳಲ್ಲಿ ಸಿಗುವುವು. ಶ್ರಾವಣಮಾಸದ ಶನಿವಾರಗಳಲ್ಲಿ ವಿಶೇಷ ಪೂಜೆ. ವರ್ಷಕ್ಕೊಮ್ಮೆ ರಥೋತ್ಸವ ನಡೆಯುತ್ತದೆ.

## 23. ಹೊಗೆನೆಕಲ್

ಧರ್ಮಪುರಿ ಜಿಲ್ಲೆ ಪೆನ್ನಾಗರ ತಾಲ್ಲೂಕು. ಕರ್ನಾಟಕದ ಕಡೆಯಿಂದ ಮಾರುಗಟ್ಟೆ, ಗೋಪಿನತ್ತಂ ಮೂಲಕ 12 ಕಿ. ಮಿ. ಇದನ್ನೇ ಕರ್ನಾಟಕದ ಬಾರ್ಡರ್ ಎನ್ನುವರು. ಮೆಟ್ಟೂರು ಮಾರ್ಗ 130 ಕಿ. ಮಿ. ಗೋಪಿನತ್ತಂನಿಂದ 50 ಕಿ.ಮಿ. ಎಲ್ಲಿಯೂ ನೇರ ಬಸ್ ಸೌಕರ್ಯವಿಲ್ಲ. ಎಲ್ಲೆಲ್ಲೂ ಕಾಡು. ಕಾಡು ಮೃಗಗಳ ಹಾವಳಿ ಜಾಸ್ತಿ. ಇಲ್ಲಿ ಕಾವೇರಿ ನದಿಯ ನೀರು ರಭಸವಾಗಿ ಬಂಡೆಗೆ ಅಪ್ಪಳಿಸಿ ಎಲ್ಲೆಲ್ಲೂ ಹೊಗೆಯ ನೋಟವನ್ನು ಸೃಷ್ಟಿಸು ತ್ತಿದ್ದರಿಂದ ಇದಕ್ಕೆ ಹೊಗೆನೆಕಲ್ಲು ಎಂದು ಹೆಸರು ಬಂತೆಂದು ಕಾಣುತ್ತದೆ. ವ್ಯಾಸರಾಯರು ಈ ಸ್ಥಳದಲ್ಲಿ ಧಾತ್ರಿಹವನವನ್ನು ಮಾಡುತ್ತಿದ್ದರಂತೆ. ಈಗಲೂ ತಮಿಳುನಾಡಿನ ಊರಾದ ಪಾಪಾರುಪಟ್ಟಿಯ ಮಾಧ್ವಸಮೂಹ ನವೆಂಬರ್‌ನಲ್ಲಿ ಇಂದಿಗೂ ಇಲ್ಲಿಗೆ ಬಂದು

ವ್ಯಾಸರಾಜರು ಧಾತ್ರಿಹವನ ನಡೆಸುತ್ತಿದ್ದ ಕಟ್ಟೆಯಲ್ಲೇ ಧಾತ್ರಿಹವನ ನಡೆಸು ತ್ತಾರೆ. ಇದು ಪ್ರವಾಸಿಗರ ಸುಂದರ ತಾಣವೂ ಅಹುದು.

## 24. ಇತರ ಸ್ಥಳಗಳು

1. **ಹುಲಿಗನ ಮರಡಿ :** ತೆರಕಣಾಂಬಿ ಸಮೀಪ — ವೆಂಕಟರಮಣ ಸ್ವಾಮಿ
2. **ತೆರಕಣಾಂಬಿ :** ಲಕ್ಷ್ಮಿವರದರಾಜ
3. **ಹಂಗಳ :** (ಗುಂಡ್ಲುಪೇಟೆಯಿಂದ 8 ಕಿ.ಮಿ) ವರದರಾಜಸ್ವಾಮಿ, ಚಿನ್ನದ ಮುದ್ದೆ ಹಿಡಿದ ಮಾಧವ ಮೂರ್ತಿ
4. **ಪಾರ್ವತಿ ಬೆಟ್ಟ :** 12 ಕಿ. ಮಿ. ಶಣ್ಮುಖ ತಾರಕಾಸುರನನನ್ನು ವಧಿಸಿ ಶಿವನನ್ನು ಕುರಿತು ತಪಸ್ಸು ಮಾಡಿದ ಸ್ಥಳ.
5. **ಗುಂಡ್ಲುಪೇಟೆ :** 57 ಕಿ. ಮಿ. ವಿಜಯನಾರಾಯಣ
6. **ಹೆಮ್ಮರಗಾಲ :** ಗೋಪಾಲಕೃಷ್ಣ
7. **ಹೆಡತಲೆ :** ನಂಜನಗೂಡಿನಿಂದ 11 ಕಿ. ಮಿ. ಲಕ್ಷ್ಮಿಕಾಂತ ಸ್ವಾಮಿ.
8. **ಕಳಲೆ :** ನಂಜನ ಗೂಡಿನಿಂದ 7 ಕಿ.ಮಿ. ಲಕ್ಷ್ಮಿಕಾಂತ.

# ಮಂಡ್ಯ ಜಿಲ್ಲೆ

## 25. ಮೇಲುಕೋಟೆ

ಮಂಡ್ಯದಿಂದ 36 ಕಿ. ಮಿ.

ಪಾಂಡವಪುರದಿಂದ 29 ಕಿ. ಮಿ. ಬಸ್ ಸೌಕರ್ಯ ಚೆನ್ನಾಗಿದೆ.

ಮೈಸೂರಿನಿಂದ 50 ಕಿ. ಮಿ.

ರೈಲಿನಿಂದ ಬರುವವರು ಪಾಂಡವಪುರ ಅಥವಾ ಮಂಡ್ಯಕ್ಕೆ ಬಂದು ಇಲ್ಲಿಗೆ ಬಸ್ಸಿನಲ್ಲಿ ಬರಬಹುದು.

ಇದನ್ನು ತಿರುನಾರಾಯಣಪುರ, ಯಾದವಾದ್ರಿ, ನಾರಾಯಣಾದ್ರಿ, ವೇದಾದ್ರಿ, ಯದುಗಿರಿ ಎಂಬ ಹೆಸರುಗಳಿಂದ ಕರೆಯುತ್ತಾರೆ. ದಕ್ಷಿಣಭಾರತದ ನಾಲ್ಕು ವೈಷ್ಣವ ಕ್ಷೇತ್ರಗಳಾದ ಕಂಚಿ, ತಿರುಪತಿ, ಶ್ರೀರಂಗಗಳ ಪೈಕಿ ಮೇಲುಕೋಟೆಯೂ ಒಂದು. ಚೆಲುವನಾರಾಯಣ ಸ್ವಾಮಿ, ಬೆಟ್ಟದ ಮೇಲಿನ (400 ಅಡಿ) ಯೋಗನರಸಿಂಹ ಸ್ವಾಮಿ ಇಲ್ಲಿಯ ಪ್ರಮುಖ ದೇವಾಲಯಗಳು. ಇವು ರಾಮಾನುಜರಿಂದ (ಕ್ರಿ.ಶ. 1110) ಪ್ರತಿಷ್ಠಾಪಿಸಲ್ಪಟ್ಟಿದೆ. ಈ ವಿಗ್ರಹಗಳು ಮನಮೋಹಕವಾದ ಭಂಗಿಯಲ್ಲಿವೆ. ಈ ದೇವಾಲಯದ ಬೆಳವಣಿಗೆಗೆ ಹೊಯ್ಸಳರ ಬಿಟ್ಟಿದೇವ ಅಥವಾ ವಿಷ್ಣುವರ್ಧನನೇ ಕಾರಣ. ಈ ದೇವರುಗಳಲ್ಲಿ ಒಂದಾದ ಚೆಲುವನಾರಾಯಣ ಸ್ವಾಮಿಗೆ ವೈರಮುಡಿ, ರಾಜಮುಡಿ, ಕೃಷ್ಣರಾಜ ಮುಡಿ ಎಂಬ ಕಿರೀಟಗಳಿವೆ. ಇವುಗಳನ್ನು ಆಯಾ ದಿನಗಳಲ್ಲಿ ತೊಡಿಸಿ ಭವ್ಯ ಉತ್ಸವಗಳನ್ನು ನೆರವೇರಿಸುತ್ತಾರೆ. ಉತ್ಸವಮೂರ್ತಿ ಸಂಪತ್‌ಕುಮಾರ ಅಥವಾ ಶೆಲ್ವ ಪಿಳ್ಳೆರಾಯ, ಇದು ಸನತ್‌ಕುಮಾರ ಋಷಿಗೆ ಬ್ರಹ್ಮನು ನೀಡಿದ ಕಾಣಿಕೆ. ಆದಿಶೇಷನು ಈ ದೇವರನ್ನು ಪೂಜಿಸುತ್ತಿದ್ದ. ತ್ರೇತಾಯುಗದಲ್ಲಿ ಲಕ್ಷ್ಮಣ, ಬಲರಾಮರು ಇದನ್ನು ಪೂಜಿಸುತ್ತಿದ್ದರು. ಬೆಟ್ಟದ ಮೇಲಿನ ಯೋಗಾನರಸಿಂಹ ಸ್ವಾಮಿ ಪ್ರಹ್ಲಾದನಿಂದ ಪೂಜಿಸಿಕೊಳ್ಳುತ್ತಿದ್ದ ದೇವರು, ಇಲ್ಲಿಗೆ ಹೋಗಲು 365ಮೆಟ್ಟಿಲುಗಳಿವೆ. ದಾರಿಯಲ್ಲಿ ಪಾಂಡವರು ವಾಸಮಾಡುತ್ತಿದ್ದ ಗುಹೆ ಇದೆ.

ಇತರ ಆಕರ್ಷಕ ಸ್ಥಳಗಳೆಂದರೆ ಸುಂದರವಾದ ಕಲ್ಯಾಣ ತೀರ್ಥ, ಅಕ್ಕನ ಕೊಳ, ತಂಗಿಯ ಕೊಳ, ಇವುಗಳು. ಧನುಷ್ಕೋಟಿ ಎಂಬುದು ದೇವಾಲಯದಿಂದ 1 ಕಿ. ಮಿ. ದೂರವಿದ್ದು, ವನವಾಸಕಾಲದಲ್ಲಿ ಈ ಕ್ಷೇತ್ರಕ್ಕೆ ಬಂದಿದ್ದ ಶ್ರೀರಾಮನು ಸೀತೆಯ ಸ್ನಾನಕ್ಕಾಗಿ ಭೂಮಿಗೆ ಬಾಣಬಿಟ್ಟು ನೀರು ತರಿಸಿದ ತಾಣವಿದು. ಇಲ್ಲಿ ನೀರು ಬತ್ತದೆ ಎಲ್ಲಾ ಋತುಗಳಲ್ಲೂ ನೀರಿರುತ್ತದೆ. ರಾಯಗೋಪುರವೆಂಬ 60 ಅಡಿ ಎತ್ತರದ ಏಕಶಿಲೆಯ ನಾಲ್ಕು ಕಂಬಗಳು ಯಾವುದೇ ಆಧಾರವಿಲ್ಲದೆ ನಿಂತಿರುವ ದೃಶ್ಯ ಯಾರಿಗಾದರೂ ವಿಸ್ಮಯವನ್ನು ತರದೇ ಇರದು.

## 26. ಬಿಂಡಿಗನವಿಲೆ

ನಾಗಮಂಗಲಕ್ಕೆ 19 ಕಿ. ಮಿ. ಇಲ್ಲಿ ದ್ರಾವಿಡಶಿಲ್ಪದ ಕೇಶವದೇವಾಲಯವಿದೆ. ಇಲ್ಲಿರುವ ಮರದ ಗರುಡ ವಿಗ್ರಹಕ್ಕೆ ವಿಶೇಷ ಶಕ್ತಿಯಿದೆ ಎಂದು ಭಕ್ತರ ನಂಬಿಕೆ. ಹಳೆ ಗರುಡ ಜೀರ್ಣವಾಗಿದ್ದರಿಂದ ಹೊಸ ಶ್ರೀಗಂಧದ ಗರುಡನನ್ನು ಸ್ಥಾಪಿಸಲಾಗಿದೆ.

## 27. ಶ್ರೀರಂಗಪಟ್ಟಣ

ಶ್ರೀರಂಗಪಟ್ಟಣದ ರೈಲ್ವೆ ನಿಲ್ದಾಣದ ಸಮೀಪ ಮೈಸೂರಿಗೆ 14 ಕಿ.ಮಿ. ಬೆಂಗಳೂರಿಗೆ 125 ಕಿ. ಮಿ.ದೂರವಿದೆ.

ಬಹಳ ಪ್ರಾಚೀನತೆಯನ್ನು ಪಡೆದ ಊರು. 12 ಶತಮಾನಗಳ ಬಾಳುವೆಯನ್ನು ಕಂಡ ಚಾರಿತ್ರಿಕ ಸ್ಥಳ. ಸುತ್ತಲೂ ಕಾವೇರಿನದಿಯ ಎರಡು ಬಾಹುಗಳಿಂದ ಆವೃತವಾಗಿರುವ ಸುಂದರ ಭೂಭಾಗ. ಇದರ ಶತಮಾನಗಳ ಸುಂದರ ಇತಿಹಾಸ ರೋಮಾಂಚಕಾರಿ. 9ನೇ ಶತಮಾನದಲ್ಲಿ ತಲಕಾಡಿನ ಗಂಗರು ಆಳುತ್ತಿದ್ದು ಕ್ರಿ. ಶ. 894ರಲ್ಲಿ ಗಂಗರಾಜನ ಅಧಿಕಾರಿ ತಿರುಮಲಯ್ಯ ಎಂಬವನ ದೃಷ್ಟಿಗೆ ಕಾಣಿಸಿತು. ತುಂಬಾ ಕಾಡಿನ ನಡುವೆ ಶ್ರೀರಂಗನಾಥನ ಭವ್ಯ ಮೂರ್ತಿಯನ್ನು ಅವನು ಪ್ರತಿಷ್ಠಿಸಿದನು. ಅದಕ್ಕೆ ಒಂದು ಸುಮಾರಾದ ದೇವಾಲಯವನ್ನು ಕಟ್ಟಿಸಿದನು. (ರಂಗನಾಥನ ಭವ್ಯ ವಿಗ್ರಹ ಅಲ್ಲೇ ಉದ್ಭವವಾಗಿತ್ತು. ಎಂದು ಹೇಳುವವರೂ ಇದ್ದಾರೆ) ಅದರ ಜೊತೆಗೆ ಮತ್ತೊಂದು ಚಿಕ್ಕ ದೇವಾಲಯ ಕಟ್ಟಿಸಿದ. ಅದೇ ತಿರುಮಲ ದೇವಾಲಯ. ದೇವಾಲಯದ ಸುತ್ತಲೂ ಪಾಳಿ ನಿರ್ಮಾಣವಾಯಿತು. ಈ ಪ್ರದೇಶವು ಶ್ರೀರಂಗಪುರ, ಶ್ರೀರಂಗಪಟ್ಟಣ ಎಂದು ಹೆಸರಾಯಿತು. ನಂತರ ಈ ಪಟ್ಟಣವು ಕೆಲವು ಕಾಲ ಚೋಳರ ಅಧೀನವಾಗಿತ್ತು. ಇದರ ಬಗ್ಗೆ ಶಾಸನವೊಂದು ಈ ದೇವಾಲಯದ ಗರ್ಭಗುಡಿಯ ಗೋಡೆಯಲ್ಲಿದೆ. 11ನೇ ಶತಮಾನದಲ್ಲಿ ಚೋಳರನ್ನು ಸೋಲಿಸಿದ ಹೊಯ್ಸಳರು ಈ ದೇವಾಲಯದ ಅಭಿವೃದ್ಧಿಗೆ ಮತ್ತಷ್ಟು ಕಾರಣರಾದರು. ವಿಷ್ಣುವರ್ಧನನ ತಮ್ಮ ಉದಯಾದಿತ್ಯನು ದೇವಾಲಯದ ಸುತ್ತ ಇದ್ದ ಕಾಡು ಕಡಿಸಿ ಅರ್ಚಕವರ್ಗದವರಿಗೂ ದೇವಾಲಯದ ಪರಿಚರ್ಯೆ ಮಾಡುವವರಿಗೂ ವಾಸದ ಮನೆಗಳನ್ನು ಕಟ್ಟಿಸಿದನು. ನಂತರ ವಿಜಯನಗರದ ಅಧೀನಕ್ಕೆ ಬಂದ ಮೇಲೆ ಅಲ್ಲಿ ಕೋಟೆನಿರ್ಮಾಣವಾಯಿತು. ಕ್ರಿ. ಶ. 1565ರ ನಂತರ ಶ್ರೀರಂಗಪಟ್ಟಣ ರಾಜ ಒಡೆಯರಿಂದ ಆಕ್ರಮಣವಾಯಿತು. 1610ರಲ್ಲಿ ಮೈಸೂರಿನ ರಾಜಧಾನಿಯಾಗಿದ್ದು, ಕೆಲವು ಕಾಲ ಅಲ್ಲಿ ಹೈದರ್, ಟೀಪುವಿನ ಆಳ್ವಿಕೆ ನಡೆದಿತ್ತು. ಇವರೂ ರಂಗ ನಾಥನ ಭಕ್ತರಾಗಿದ್ದರು. ಈ ರಂಗನಾಥನು 156 ಅಡಿ ಉದ್ದವಿದ್ದು ಏಳು ತಲೆ ಆದಿಶೇಷನ ಮೇಲೆ ಪವಡಿಸಿದ್ದಾನೆ. ರಂಗನಾಥನ ಪಾದದ ಬಳಿ ಲಕ್ಷ್ಮೀದೇವಿ ಹಾಗೂ ಗೌತಮಮುನಿಗಳ ವಿಗ್ರಹಗಳಿವೆ. ಇಲ್ಲಿ ಹಿಂದೆ ಗೌತಮ ಋಷಿಗಳು ಇಲ್ಲಿರುವ ಆದಿರಂಗನನ್ನು ಪೂಜಿಸಿದ್ದರು ಎಂದು ಪುರಾಣಗಳು ಹೇಳುತ್ತವೆ. ದೇವಸ್ಥಾನದ ಎರಡು ಕಂಬಗಳ ಮೇಲೆ ವಿಷ್ಣುವಿನ 24 ರೂಪಗಳನ್ನು ಕೆತ್ತಲಾಗಿದೆ. ಇದನ್ನು ಚತುರ್ವಿಂಶತಿ ಕಂಬಗಳೆನ್ನುತ್ತಾರೆ. ದೇವಾಲಯದ ಗೋಪುರ ಭವ್ಯವಾಗಿದೆ. ಪ್ರತಿ ರಥಸಪ್ತಮಿ ಶ್ರೀರಂಗನಾಥನ ಬ್ರಹ್ಮರಥೋತ್ಸವ ನಡೆಯುವುದು.

ಈ ದೇವಾಲಯಕ್ಕೆ ಹತ್ತಿರದಲ್ಲೇ ಲಕ್ಷ್ಮೀನರಸಿಂಹಸ್ವಾಮಿಯ ಗುಡಿ ಇದೆ. ಇಲ್ಲಿ ನರಸಿಂಹವಿಗ್ರಹ ಹಾಗೂ ಅಂಬೆಗಾಲು ಕೃಷ್ಣರ ಪ್ರತಿಮೆಗಳು ಇದ್ದು ಅವುಗಳು ಮನೋಹರ ವಾಗಿದೆ. ಆಂಜನೇಯ ಹಾಗೂ ಗಂಗಾಧರೇಶ್ವರ ದೇವಾಲಯಗಳು, ಇತರ ಸಂದರ್ಶನೀಯ ಸ್ಥಳಗಳು.

ಶ್ರೀರಂಗಪಟ್ಟಣದಲ್ಲಿ ವ್ಯಾಸರಾಯರ ಮಠ ಹಾಗೂ ಉತ್ತರಾಧಿಮಠಗಳು ಇವೆ, ವ್ಯಾಸರಾಯಮಠದ ಸಮೀಪದ ರಸ್ತೆಯಲ್ಲಿ ಲಕ್ಷ್ಮಿಬಾಯಿ ಎಂಬವರ ಮನೆಯಲ್ಲಿ ಸ್ಥಾಪಿಸಿದ ಪುರಾತನ ರಾಘವೇಂದ್ರ ಬೃಂದಾವನವೂ ಇದೆ. ಇದಲ್ಲದೆ, ಇಲ್ಲಿ ಮುಳುಬಾಗಿಲು ಶ್ರೀಪಾದ ರಾಜ ಮಠದ ಶ್ರೀ ಜ್ಞಾನನಿಧಿಗಳ ಬೃಂದಾವನವಿದೆ.

ಶ್ರೀರಂಗಪಟ್ಟಣದ ಹೊರವಲಯದಲ್ಲಿ ಗುಂಬಸ್‌ಗೆ ಹೋಗುವ ದಾರಿಯ ಬಲಪಕ್ಕದಲ್ಲಿ 2 ಕಿ. ಮಿ. ದೂರದಲ್ಲಿಗೋಸಾಯಿಘಾಟ್ ಎಂಬ ಕಾವೇರಿನದಿ ದಂಡೆಯ ಸ್ನಾನ ಘಟ್ಟವಿದೆ. ತುಂಬ ಸುಂದರ ಪ್ರದೇಶ. ಇಲ್ಲಿ ಕಾಶಿರಾಮೇಶ್ವರ ಗುಡಿ ಹಾಗೂ ಪ್ರಾಣದೇವರ ಗುಡಿಗಳು ಇವೆ. ಇದು ವಿಹಾರ, ವಿನೋದಗಳಿಗೂ ತಕ್ಕ ಸೂಕ್ತಸ್ಥಳ.

## 28. ತೊಣ್ಣೂರು

ಮೇಲುಕೋಟೆಯಿಂದ 29 ಕಿ. ಮಿ. ಪಾಂಡವಪುರದಿಂದ 8 ಕಿ. ಮಿ.

ಪಾಂಡವಪುರದಿಂದ ಮೇಲುಕೋಟೆಯ ದಾರಿಯಲ್ಲಿ 5 ಕಿ. ಮಿ. ಕ್ರಮಿಸಿ ಎಡಭಾಗ ದಲ್ಲಿರುವ ಕವಲುದಾರಿಯಲ್ಲಿ 3 ಕಿ.ಮಿ. ಹೋಗಬೇಕು. ಇದಕ್ಕೆ ತೊಂಡನೂರು ಎಂಬ ಹೆಸರಿತ್ತು. ಭಕ್ತರ ಊರು ಎಂಬುದು ಇದರ ಅರ್ಥ. ಒಮ್ಮೆ ಹೊಯ್ಸಳರ ರಾಜಧಾನಿಯೂ ಆಗಿತ್ತು. ವಿಷ್ಣುವರ್ಧನನಿಂದ ಪ್ರತಿಷ್ಠಾಪಿಸಲ್ಪಟ್ಟ ಪಾರ್ಥಸಾರಥಿ ಅಥವಾ ನಂಬಿನಾರಾಯಣನ ಗುಡಿ ಇದೆ. ಗರ್ಭಗುಡಿಯಲ್ಲಿ ಗರುಡಪೀಠದ ಮೇಲೆ 6 ಅಡಿ ಎತ್ತರದ ನಾರಾಯಣ ಸ್ವಾಮಿಯ ವಿಗ್ರಹವಿದೆ. ಎದುರಲ್ಲಿ 16 ಮೂಲೆ ಗರುಡ ಗಂಬ ಮತ್ತೊಂದು ವಿಶೇಷ. ಮತ್ತೊಂದು ಗುಡಿ ಲಕ್ಷ್ಮೀದೇವಿಯದು. ಗುಡ್ಡದ ಮೇಲೆ ಯೋಗಾನರಸಿಂಹ ಗುಡಿ ಇದೆ. ಇದು 12 ಶತಮಾನದ ರಚನೆ. ಸುಂದರವಾದ ಮೋತಿತಾಲಾಬ್ ಎಂಬ ಹೆಸರಿನ ಕೆರೆಯೂ ಇದೆ. ಟೀಪು ಪ್ರತಿದಿನ ಶ್ರೀರಂಗಪಟ್ಟಣಕ್ಕೆ ಕುಡಿಯಲು ನೀರನ್ನು ಈ ಕೆರೆಯಿಂದ ತರಿಸಿಕೊಳ್ಳುತ್ತಿದ್ದನಂತೆ.

## 29. ಮದ್ದೂರು

ಮಂಡ್ಯಕ್ಕೆ 20 ಕಿ.ಮಿ. ಬೆಂಗಳೂರಿನಿಂದ 80ಕಿ.ಮಿ. ಬೆಂಗಳೂರು-ಮೈಸೂರು ಹೆದ್ದಾರಿ ಯಲ್ಲಿದ್ದು ರೈಲು ಬಸ್ಸುಗಳ ಅನುಕೂಲವಿದೆ. ಇದನ್ನು ಅರ್ಜುನಪುರಿ ಎಂತಲೂ ಕರೆಯು ವರು. ದ್ವಾಪರಯುಗದಲ್ಲಿ ಅರ್ಜುನನು ಶ್ರೀಕೃಷ್ಣನನ್ನು ಕುರಿತು ಉಗ್ರನರಸಿಂಹನ ಅವತಾರ ವನ್ನು ನೋಡಬೇಕೆಂದು ಅಪೇಕ್ಷೆ ಪಟ್ಟಾಗ ಶ್ರೀಕೃಷ್ಣನು ಅವತಾರಮಾಡಿ ತೋರಿಸಲು ಸಾಧ್ಯ ವಿಲ್ಲದಾದಾಗ ಶಿಲಾರೂಪದಲ್ಲಿ ಬ್ರಹ್ಮದೇವರ ಮುಖಾಂತರ ಇದು ಇಲ್ಲಿ ಪ್ರತಿಷ್ಠಾಪಿಸ ಲ್ಪಟ್ಟಿತು.

ಚಾರಿತ್ರಿಕವಾಗಿ ಇಲ್ಲಿ ಮದ್ದುಗುಂಡುಗಳನ್ನು ತಯಾರಿಸುತ್ತಿದ್ದರಿಂದ ಮದ್ದೂರಾಯಿತು. ಕದಂಬ ಋಷಿಗಳು ಸಮೀಪದ ನದಿಯಲ್ಲಿ ಮಿಂದು ಪೂಜೆ ನಡೆಸುತ್ತಿದ್ದರಿಂದ ಕದಂಬ ಕ್ಷೇತ್ರವೆಂದೂ ಹೆಸರು.

ಈ ಉಗ್ರರೂಪದ ನರಸಿಂಹಸ್ವಾಮಿಗೆ (7ಅಡಿ) 8 ಕೈಗಳೂ ಮೂರು ಕಣ್ಣುಗಳೂ ಇವೆ. ತನ್ನ ಎರಡು ಕೈಗಳಿಂದ ತೊಡೆಯಮೇಲೆ ಮಲಗಿಸಿಕೊಂಡಿರುವ ಹಿರಣ್ಯಕಶಿಪುವಿನ ಕರುಳುಗಳನ್ನು ಬಗೆಯುತ್ತಲೂ ಮತ್ತೊಂದು ಕೈಗಳಲ್ಲಿ ಆ ಕರುಳನ್ನು ಮಾಲೆಯಾಗಿ ಹಾಕಿಕೊಳ್ಳುತ್ತಲೂ, ಇನ್ನೆರಡರಲ್ಲಿ ಪಾಶಾಂಕುಶಗಳನ್ನು ಹಿಡಿದೂ ಉಳಿದೆರಡರಲ್ಲಿ ಶಂಖ ಚಕ್ರಧಾರಿಯಾಗಿಯೂ ಅವತರಿಸಿದ್ದಾನೆ.

ದೇವರ ಎಡಭಾಗದಲ್ಲಿ ಗರುಡ, ಬಲಭಾಗದಲ್ಲಿ ಪ್ರಹ್ಲಾದರು ನಿಂತಿದ್ದಾರೆ. ಒಳಾಂಕಣದಲ್ಲಿ ಶ್ರೀ ಶ್ರೀನಿವಾಸದೇವರ ಹಾಗೂ ಕೃಷ್ಣನಿಗೆ ಸ್ತನ್ಯಪಾನ ಮಾಡಿಸುತ್ತಿರುವ ಯಶೋಧಾದೇವಿಯ ವಿಗ್ರಹಗಳೂ ಬಲು ಸುಂದರವಾಗಿವೆ. ದೇವಾಲಯದಲ್ಲಿ ಸೀತಾ, ರಾಮ, ಲಕ್ಷ್ಮಣ, ಆಂಜನೇಯ ವಿಗ್ರಹಗಳೂ ಪ್ರತಿಷ್ಠಾಪಿಸಲ್ಪಟ್ಟಿದೆ. ಅಮ್ಮನವರ ಗುಡಿಯೂ ಸಹ ಇಲ್ಲಿದೆ.

ಪಕ್ಕದಲ್ಲಿರುವ ಮತ್ತೊಂದು ಗುಡಿ ವರದರಾಜಸ್ವಾಮಿಯದು. ದರ್ಶನೀಯಸ್ಥಳ. ಸ್ಥಳಪುರಾಣದಂತೆ ವಿಷ್ಣುವರ್ಧನನ ತಾಯಿಗೆ ಕಣ್ಣು ಕುರುಡಾದಾಗ ಅವರು ಕಂಚಿಗೆ ಹೋಗಿ ಸೇವೆ ಮಾಡಲು ಸಾಧ್ಯವಿಲ್ಲದುದಾಗ ಇಲ್ಲಿಯೇ ಸೇವೆಮಾಡುವಂತೆ ಸ್ವಪ್ನದಲ್ಲಿ ಸೂಚನೆಯಾಗಿ ಅವರು ಈ ದೇವರನ್ನೇ ಸೇವೆ ಮಾಡಿದಾಗ ಹೋದ ಕಣ್ಣುಗಳು ಪುನಃ ಬಂದವಂತೆ.

ಇದಕ್ಕಾಗಿ ಈ ದೇವರನ್ನು ಕಂಚಿಕಣ್ಣ ವರದರಾಜನೆನ್ನುವರು.

## 30. ಶಿವ ಸಮುದ್ರ

ಮೈಸೂರಿಗೆ 80 ಕಿ. ಮಿ. ಮಳ್ಳವಳ್ಳಿಯಿಂದ 20 ಕಿ.ಮಿ. ಮಳವಳ್ಳಿಯಿಂದ ಕೊಳ್ಳೇಗಾಲಕ್ಕೆ ಹೋಗುವ ದಾರಿಯಲ್ಲಿ ಪ್ರಯಾಣಿಸಿ ಮತ್ತೆ ಎಡಕ್ಕೆ 3 ಕಿ. ಮಿ. ಹೋಗಬೇಕು.

ಶ್ರೀರಂಗಪಟ್ಟಣದಂತೆ ಇದೂ ಕಾವೇರಿನದಿಯ ಮಧ್ಯದ ದ್ವೀಪ. ಇದನ್ನು ಮಧ್ಯರಂಗನೆನ್ನುವರು. ರಂಗನಾಥನು 8 ಅಡಿ ಇದ್ದು ಆದಿಶೇಷನ ಮೇಲೆ ಪವಡಿಸಿದ್ದಾನೆ. ಈ ದೇವರಿಗೆ ಜಗನ್ಮೋಹನ ರಂಗನಾಥನೆಂಬ ಹೆಸರೂ ಇದೆ. ಬೃಹದಾಕಾರದ ಸುಗ್ರೀವನ ಪ್ರತಿಮೆ ಮತ್ತೊಂದು ಆಕರ್ಷಣೆ. ಇಲ್ಲಿ ಕಾವೇರಿನದಿಯ ಜಲಪಾತಗಳಿರುವುದರಿಂದ ಯಾತ್ರಿಕರಿಗೆ, ಪ್ರವಾಸಿಗರಿಗೆ ಮತ್ತೂ ಆಕರ್ಷಣೆ.

## 31. ಮಾರೆಹಳ್ಳಿ

ಮಳವಳ್ಳಿಯಿಂದ 4 ಕಿ. ಮಿ. ಬಸ್ಸಿನ ಅನುಕೂಲವಿಲ್ಲ. ಮಳವಳ್ಳಿಯಿಂದ ಆಟೋಗಳ ಅನುಕೂಲವಿದೆ. ಇಲ್ಲಿರುವ ಲಕ್ಷ್ಮೀನರಸಿಂಹ ದೇವಾಲಯವು ಸುಂದರವಾದ ಗದ್ದೆಗಳು ಮತ್ತು ಗಿಡಮರಗಳ ತೋಪಿನಲ್ಲಿ ರಚಿತವಾಗಿದೆ. ಇದು ಪ್ರಶಾಂತ ಸುಂದರ ಸ್ಥಳ. ದೇವಾಲಯವು ಬಹು ವಿಶಾಲವಾಗಿದ್ದು ಗರ್ಭಗುಡಿಯ ಸುತ್ತಲೂ ಒಳಾಂಗಣ ರಚಿತವಾಗಿದೆ. ಈ ದೇವಾಲಯಕ್ಕೆ ಗೋಪುರವಿಲ್ಲ. ಈ ದೇವಾಲಯವು ಅತಿಪ್ರಾಚೀನವಾದದ್ದು ಮತ್ತು

ಚೋಳರ ಕಾಲದಲ್ಲಿ ಒಂದನೇ ರಾಜರಾಜನಿಂದ ಕಟ್ಟಲ್ಪಟ್ಟಿದ್ದು (ಕ್ರಿ.ಶ.1000) ಎಂದು ಹೇಳುವರು. ತಲಕಾಡಿನಂತೆ ಇದು ಗಜಾರಣ್ಯಕ್ಷೇತ್ರದ ಭಾಗ ಇದು. ಹೊಯ್ಸಳ, ವಿಜಯನಗರದ ಆಳ್ವಿಕೆಯ ಕಾಲದಲ್ಲಿ ವಿಸ್ತರಿಸಲ್ಪಟ್ಟಿತು. ಮೇ ಅಥವಾ ಜೂನ್‌ನಲ್ಲಿ ರಥೋತ್ಸವ. ದೇವಾಲಯದ ಮುಂದೆ ಬೃಹತ್ತಾದ ಗರುಡಗಂಭವಿದೆ. ದೇವಾಲಯದ ಮುಂದೆ ದೊಡ್ಡ ಹೆಬ್ಬಾಗಿಲನ್ನು ಪ್ರವೇಶಿಸುತ್ತಲೇ ಎಡಪಕ್ಕಕ್ಕೆ 6 ಅಡಿ ಎತ್ತರವುಳ್ಳ ಪ್ರಾಣದೇವರಿದ್ದಾನೆ. ಮತ್ತೂ ಮುಂದೆ ಧ್ವಜಸ್ತಂಭವಿದ್ದು ಒಂದು ಕಡೆ ಪ್ರಾಣದೇವನು ಮತ್ತೊಂದು ಕಡೆ ಗರುಡರಿದ್ದಾರೆ. ಗರ್ಭಗುಡಿಯಲ್ಲಿ ಸುಖಾಸೀನ ಭಂಗಿಯಲ್ಲಿ ಶ್ರೀ ಲಕ್ಷ್ಮಿನರಸಿಂಹನ ವಿಗ್ರಹವಿದೆ. ಹೊರಾಂಗಣದಲ್ಲಿ ಈಶ್ವರನ ಗುಡಿ ಇದೆ. ಇಲ್ಲಿಗೆ ಹೋಗಲು ರಥೋತ್ಸವ ಕಾಲವೇ ಉತ್ತಮ ಕಾಲ. ದೇವರ ಪತ್ನಿಯರಾದ ಭೂದೇವಿ ಮತ್ತು ನೀಳಾದೇವಿಯರ ವಿಗ್ರಹಗಳು ಪಕ್ಕದಲ್ಲಿರುವ ಗುಡಿಗಳಲ್ಲಿವೆ. ಸೇವೆಮಾಡುವವರು ಅರ್ಚಕರನ್ನು ಸಂಪರ್ಕಿಸಿ ಸೇವೆಗೆ ದಿನ, ಕಾಲ ಗೊತ್ತು ಮಾಡಿಕೊಳ್ಳಬಹುದು.

## 32. ಕರೀಘಟ್ಟ

ಶ್ರೀರಂಗಪಟ್ಟಣ ತಾಲ್ಲೂಕು ಮೈಸೂರಿನಿಂದ 14 ಕಿ.ಮಿ.

ಶ್ರೀರಂಗಪಟ್ಟಣದಿಂದ 3 ಕಿ.ಮಿ.

ಶ್ರೀರಂಗಪಟ್ಟಣ - ಬನ್ನೂರು ಹೆದ್ದಾರಿಯ ಪಕ್ಕದಲ್ಲಿದೆ. ಬಸ್ಸಿನ ಸೌಕರ್ಯ ಚೆನ್ನಾಗಿದೆ. ಬೆಟ್ಟಕ್ಕೆ ಹತ್ತಿ ಹೋಗಲು ಮೆಟ್ಟಿಲುಗಳೂ ಹಾಗೂ ವಾಹನಗಳು ಮೇಲೇರಿ ಹೋಗಲು ರಸ್ತೆ ಇದೆ. ಪುರಾಣ ಪ್ರಸಿದ್ಧವಾದ ಈ ಸ್ಥಳವು ಕರೀಘಟ್ಟ, ನೀಲಾಚಲ, ಎಂಬ ಹೆಸರುಗಳಿಂದ ಕರೆಯಲ್ಪಟ್ಟಿದೆ. ಇಲ್ಲಿ ಶ್ರೀನಿವಾಸ ದೇವರು (ರಂಗನಾಥ) ಬೆಟ್ಟದ ಮೇಲೆ (2697 ಅಡಿ) ನೆಲೆಸಿದ್ದಾನೆ. ಇದನ್ನು ಚಿಕ್ಕ ತಿರುಪತಿ ಎಂತಲೂ ಹೇಳುವರು.

ಇಲ್ಲಿ ಅನೇಕ ಋಷಿ ಮುನಿಗಳು, ನೆಲೆಸಿದ್ದರು. ಪವಿತ್ರ ಲೋಕಪಾವನಿ ಕಾವೇರಿನದಿಗಳ ಸಂಗಮ ಸ್ಥಳ. ಅನೇಕ ಪವಿತ್ರ ತೀರ್ಥಗಳು ಇರುವ ಸ್ಥಳ. ಕಾಶಿಯಷ್ಟೇ ಪವಿತ್ರವಾಗಿರುವ ಕ್ಷೇತ್ರ. ಪುರಾಣಗಳು ಹೇಳುವಂತೆ ಲಂಕಾಪಟ್ಟಣಕ್ಕೆ ಹೋಗಿ ರಾವಣನನ್ನು ಸಂಹರಿಸಿ ಸೀತೆಯನ್ನು ಕರೆತರಲು ದಕ್ಷಿಣ ಸಮುದ್ರಕ್ಕೆ ಸೇತುವೆಯನ್ನು ಕಟ್ಟುವ ಸಂದರ್ಭದಲ್ಲಿ ಸುಗ್ರೀವನು ತಿರುಮಲೆ ಬೆಟ್ಟದ ಶೇಷಾಚಲಕ್ಕೆ (ಕರಿಘಟ್ಟ) ಅಂಟಿಕೊಂಡಿದ್ದ ನೀಲಾಚಲವನ್ನೇ ಕಿತ್ತು ತರುತ್ತಿದ್ದಾಗ ವಿಷ್ಣು ಭಕ್ತರು ಅವನನ್ನು ತಡೆದು ಈ ಬೆಟ್ಟವು ನೀಲಾಚಲ ಇದನ್ನು ಸೇತುವೆಗೆ ಉಪಯೋಗಿಸುವುದು ತರವಲ್ಲ ಎಂದು ಆಪೇಕ್ಷಿಸಿದಾಗ ಸುಗ್ರೀವನು ಆ ಮಾತಿನಿಂದ ಭಯಗ್ರಸ್ತನಾಗಿ ತಾನು ಹೊತ್ತು ತಂದಿದ್ದ ಬೆಟ್ಟವನ್ನು ಅಲ್ಲಿಯೇ ಇಟ್ಟು ಹೊರಟು ಹೋದ. ಅದೇ ಈಗಿನ ಕರೀಘಟ್ಟ. ಭೃಗುಋಷಿಗಳು ಈ ಸ್ಥಳದಲ್ಲಿ ಅಶ್ವತ್ಥವೃಕ್ಷದ ಕೆಳಗೆ ತಪಸ್ಸನ್ನಾಚರಿಸಿ ಶ್ರೀ ಲಕ್ಷ್ಮಿನರಸಿಂಹನನ್ನು ಪ್ರತ್ಯಕ್ಷಮಾಡಿ ಕೊಂಡಿರುವ ಸ್ಥಳ. ಅವರು ಇಲ್ಲಿ ತಪಸ್ಸು ಮಾಡಿ ಶ್ರೀ ಶ್ರೀನಿವಾಸನನ್ನು ಈಬೆಟ್ಟದಲ್ಲಿ ನೆಲಸುವಂತೆ ಪ್ರಾರ್ಥಿಸಿದಾಗ ಅದರಂತೆ ದೇವರು ನೆಲೆಸಿದ ಸ್ಥಳ. ಅವರೇ ಇಲ್ಲಿ ತಪಸ್ಸನ್ನು ಮಾಡಿ ಭೋದಾಯನ ಧರ್ಮ ಸೂತ್ರಗಳನ್ನು ರಚಿಸುವ ಸಾಮರ್ಥ್ಯವನ್ನು ಪಡೆದ ಸ್ಥಳ.

## 33. ತಲಕಾಡು

ಮೈಸೂರಿಗೆ 45 ಕಿ. ಮಿ.

ಪುರಾಣಗಳ ಪ್ರಕಾರ ಇಲ್ಲಿ ವಸಿಷ್ಠ ಗೋತ್ರಕ್ಕೆ ಸೇರಿದ ಸೋಮದತ್ತನೆಂಬ ಬ್ರಾಹ್ಮಣನು ಸಂಸಾರದ ಜುಗುಪ್ಸೆಗೆ ಒಳಗಾಗಿ ತನ್ನ ಶಿಷ್ಯರ ಸಮೇತ ಕಾಶಿಗೆ ಹೋಗಿ ತಪಸ್ಸುಮಾಡಿದನು. ಕಾಶಿವಿಶ್ವನಾಥನು ಇವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾದನು. ಆಗ ಸೋಮದತ್ತನು ತನಗೂ ತನ್ನ ಶಿಷ್ಯರಿಗೂ ಸಶರೀರಮುಕ್ತಿ ದೊರೆಯಬೇಕೆಂದು ವರವನ್ನು ಕೇಳಿದನು. ಸ್ವಾಮಿ ಅವನನ್ನು ಶಿಷ್ಯರ ಸಮೇತ ಕಾವೇರಿ ತೀರದ ಗಜಾರಣ್ಯಕ್ಷೇತ್ರಕ್ಕೆ ತೆರಳಲು ಹೇಳಿದನು. ಆದರೆ ಅವನೂ ಮತ್ತು ಅವನ ಕಡೆಯವರು ದಾರಿಯಲ್ಲಿ ಆನೆಗಳ ಧಾಳಿಗೆ ಸಿಕ್ಕಿ ಮೃತರಾದರು. ಅವರೆಲ್ಲಾ ಮುಂದೆ ಗಜಾರಣ್ಯದಲ್ಲಿ ಆನೆಗಳಾಗಿ ಹುಟ್ಟಿದರು. ಆನೆಗಳು ತಮ್ಮ ಪೂರ್ವಜನ್ಮ ಸ್ಮರಣೆ ಯಿಂದ ಇಲ್ಲಿನ ಗೋಕರ್ಣ ಸರೋವರದಲ್ಲಿ ಮಿಂದು ಒಂದು ಬೂರುಗದ ಮರದ ಕೆಳಗಿನ ಶಿವಲಿಂಗಕ್ಕೆ ಅಭಿಶೇಖಮಾಡುತ್ತಿದ್ದವು. ಅಲ್ಲಿ ಸಂಚರಿಸುತ್ತಿದ್ದ ತಲ ಕಾಡ ಎಂಬ ಇಬ್ಬರು ಖಡ್ಗದಿಂದ ಕಾಡನ್ನು ಸವರುತ್ತಿದ್ದಾಗ ಅದು ಈ ಶಿವಲಿಂಗಕ್ಕೆ ತಗುಲಿ ಅದರ ತಲೆಯಿಂದ ಮಾನುಷರಕ್ತ ಚಿಮ್ಮಲಾರಂಭಿಸಿತು. ಆಶರೀರವಾಣಿಯನ್ನು ಕೇಳಿ ಅವರು ಬೂರುಗ ಮರದ ಸೊಪ್ಪನ್ನು ಅರೆದು ಶಿವಲಿಂಗಕ್ಕೆ ಬಳಿದರು. ರಕ್ತ ಹಾಲಾಗಿ ಹರಿಯಿತು. ಈ ಹಾಲನ್ನು ಸೇವಿಸಿದ ಬೇಡರು, ಹಾಗೂ ಆನೆಗಳು ಗಣಪದವಿಯನ್ನು ಪಡೆದವು. ಈ ಪ್ರಾಂತ್ಯ ತಲಕಾಡು ಎಂದಾಯಿತು. ಈ ಲಿಂಗ ವೈದ್ಯೇಶ್ವರ ಲಿಂಗವೆಂದು ಪೂಜೆಗೊಳ್ಳುವಂತಾಯಿತು.

ಇದು ಕಾವೇರಿನದಿಯ ಎಡ ದಡದಲ್ಲಿದ್ದು ಐತಿಹಾಸಿಕ ಮತ್ತು ಧಾರ್ಮಿಕ ಕ್ಷೇತ್ರವೆನಿಸಿದೆ. ಚಾರಿತ್ರಿಕವಾಗಿ ಇದು ಗಂಗರ ರಾಜಧಾನಿ. ಪೌರಾಣಿಕವಾಗಿ ಇದು ಗಜಾರಣ್ಯ ಮತ್ತು ಸಿದ್ಧಾರಣ್ಯಕ್ಷೇತ್ರ. ದಕ್ಷಿಣ ಕಾಶಿ. ಎಂತಲೂ ಕರೆಯುವರು. ಚೋಳರ ಕಾಲದಲ್ಲಿ ಇದಕ್ಕೆ ರಾಜರಾಜಪುರವೆಂದು ಹೆಸರಿತ್ತು. ಅವರು ಇಲ್ಲಿ ಪಂಚಲಿಂಗ ದೇವಸ್ಥಾನಗಳನ್ನು ನಿರ್ಮಿಸಿ ದರು. ಅದೇ ವೈದ್ಯೇಶ್ವರ, ಅರ್ಕೇಶ್ವರ, ಪಾತಾಳೇಶ್ವರ, ಮರಳೇಶ್ವರ, ಹಾಗೂ ಮಲ್ಲಿ ಕಾರ್ಜುನ ಗುಡಿಗಳು. ಹೊಯ್ಸಳರ ಕಾಲದಲ್ಲಿ ವಿಷ್ಣುವರ್ಧನನಿಂದ ಕೀರ್ತಿನಾರಾಯಣ ದೇವಾಲಯ ಕಟ್ಟಲ್ಪಟ್ಟಿತು. ಇದು ಇಲ್ಲಿನ ದೇವಾಲಯಗಳಲ್ಲೆಲ್ಲಾ ಅತ್ಯಂತ ಸುಂದರ. ದೇವರು ಪದ್ಮಧಾರಿ ಯಾಗಿದ್ದು 10 ಅಡಿ ಎತ್ತರವಾಗಿದ್ದಾನೆ. ಈ ಚತುರ್ಭುಜ ಮೂರ್ತಿಯ ದರ್ಶನ ಮನಮೋಹಕ. ಇದರ ಪ್ರಭಾವಳಿಯ ಮೇಲೆ ದಶಾವತಾರದ ಕೆತ್ತನೆ ಇದೆ. ಪಂಚಲಿಂಗ ದೇವಾಲಯದ ದೇವರುಗಳಿಗೆ ಪಂಚಲಿಂಗ ದರ್ಶನವೆಂಬ ಉತ್ಸವವು ನಾಲ್ಕರಿಂದ ಹನ್ನೆರಡು ವರ್ಷಗಳಲ್ಲಿ ವೈಭವವಾಗಿ ನಡೆಯುವುದು. ಇದು ಕಾರ್ತಿಕ ಬಹುಳ ಅಮಾವಾಸ್ಯೆಯ ಸೋಮ ವಾರ ಸೂರ್ಯ ಚಂದ್ರರಿಬ್ಬರೂ ವೃಶ್ಚಿಕರಾಶಿಯಲ್ಲಿ ಸೇರಿದ ಯೋಗದಲ್ಲಿ ನಡೆಯುವುದು.

## 34. ಇತರ ಸ್ಥಳಗಳು

**1. ನಾಗಮಂಗಲ :** ಬೆಂಗಳೂರಿನಿಂದ 130 ಕಿ. ಮಿ. ಮೈಸೂರಿಗೆ 65 ಕಿ. ಮಿ. ಮಂಡ್ಯದಿಂದ 41 ಕಿ.ಮಿ. ಸೌಮ್ಯಕೇಶವ, ನರಸಿಂಹ ದೇವಾಲಯಗಳು

**2. ಬೆಳ್ಳೂರು :** ನಾಗಮಂಗಲಕ್ಕೆ 16 ಕಿ.ಮಿ. ಆದಿ ಮಾಧವರಾಯ

**3. ಕಂಬದ ಹಳ್ಳಿ :** ನಾಗಮಂಗಲಕ್ಕೆ 16 ಕಿ. ಮಿ. 50 ಅಡಿ ಎತ್ತರದ ಬ್ರಹ್ಮದೇವರ ಕಂಬ. ತುದಿಯಲ್ಲಿ ಬ್ರಹ್ಮನ ಶಿಲ್ಪ.

**4. ಕಿಕ್ಕೇರಿ :** ಕೆ. ಆರ್. ಪೇಟೆಗೆ 16 ಕಿ. ಮಿ. ಬ್ರಹ್ಮೇಶ್ವರ

**5. ಗೋವಿಂದನ ಹಳ್ಳಿ :** ಕಿಕ್ಕೇರಿಗೆ 16 ಕಿ.ಮಿ. ಪಂಚಲಿಂಗೇಶ್ವರ

**6. ಹೊಸಹೊಳಲು :** ಕೆ. ಆರ್. ಪೇಟೆ ಬಳಿ. ಮಂಡ್ಯದಿಂದ 50 ಕಿ.ಮಿ. ಬೆಂಗಳೂರಿನಿಂದ 157 ಕಿ.ಮಿ. ಲಕ್ಷ್ಮಿನಾರಾಯಣ

**7. ಬಸರಾಳು :** ಮಂಡ್ಯದಿಂದ 24 ಕಿ. ಮಿ. ಮಲ್ಲಿಕಾರ್ಜುನ

**8. ಮಂಡ್ಯ :** ಮೈಸೂರಿಗೆ 44 ಕಿ. ಮಿ. ಲಕ್ಷ್ಮಿಜನಾರ್ದನ

**9. ಪಡಗ :** ನಾಗಮಂಗಲ ಸಮೀಪ ಯೋಗಾನರಸಿಂಹ

**10. ಕೋಟೆಬೆಟ್ಟ :** ನಾಗಮಂಗಲ ಸಮೀಪದ ಪಾಲ ಅಗ್ರಹಾರದಲ್ಲಿ. ಶ್ರೀನಿವಾಸ

**11. ಮುಡುಕು ತೊರೆ :** ತಲಕಾಡಿಗೆ 4 ಕಿ. ಮಿ. ಮಲ್ಲಿಕಾರ್ಜುನ , ಬ್ರಮರಾಂಬೆ

**12. ಮಳವಳ್ಳಿ :** ಬೆಂಗಳೂರಿನಿಂದ 124 ಕಿ.ಮಿ. ಮಂಡ್ಯದಿಂದ 29 ಕಿ. ಮಿ. ಸಾರಂಗಪಾಣಿ

**13. ಮುತ್ತತ್ತಿ :** ಮಳವಳ್ಳಿ ಕನಕಪುರ ರಸ್ತೆ ಮುತ್ತತ್ತಿರಾಯನ ಗುಡಿ. ಸುಂದರ ತಾಣ ರಮ್ಯ ವಿಹಾರ ಸ್ಥಳ.

# ಹಾಸನ ಜಿಲ್ಲೆ

## 35. ಅರಸೀಕೆರೆ

ಹಾಸನ ಜಿಲ್ಲೆ ರೈಲು ಬಸ್ಸುಗಳ ಸೌಕರ್ಯ ಚೆನ್ನಾಗಿವೆ. ಹಾಸನದಿಂದ 41ಕಿ. ಮಿ. ಬೆಂಗಳೂರು 176ಕಿ.ಮಿ

ಅರಸೀಕೆರೆಯಿಂದ 3 ಕಿ.ಮಿ. ದೂರದಲ್ಲಿ ಮಾಲೆಕಲ್ಲು ತಿರುಪತಿ, ಹಿರೇಕಲ್ಲು ಬೆಟ್ಟ ತಿರುಪತಿ ಎಂಬ ಹೆಸರಿನ ಬೆಟ್ಟವಿದೆ. ಈ ಬೆಟ್ಟಕ್ಕೆ ಕಡಿದಾದ 1700 ಮೆಟ್ಟಿಲುಗಳಿದ್ದು, ಹತ್ತಲು ಬಲು ಪ್ರಯಾಸಕರ. ತಿರುಪತಿಯಂತೆ ಇಲ್ಲಿಯೂ ಬೆಟ್ಟದ ಮೇಲೆ ವೆಂಕಟರಮಣನ ದೇವಾಲಯ ವಿದೆ. ಹಾಗೂ ಪುಷ್ಕರಿಣಿ ಆಕರ್ಷಕವಾಗಿದೆ. ಗೋವಿಂದರಾಜ ದೇವಾಲಯವು ತಿರುಪತಿಯಂತೆ ಬೆಟ್ಟದ ಬುಡದಲ್ಲಿರುವುದು. ಪ್ರತಿವರ್ಷ ಆಶಾಡ ಶುದ್ಧ ದ್ವಾದಶಿ ರಥೋತ್ಸವ.

## 36. ಗೊರೂರು

ಹಾಸನದಿಂದ 28 ಕಿ.ಮಿ. ಅರಕಲಗೂಡಿನಿಂದ 9 ಕಿ. ಮಿ.

ಇದನ್ನು ಹೇಮಾವತಿ ನದಿಯ ರಾಜಧಾನಿ, ಹೇಮಾವತಿ ನದಿಯ ಕಂಠಾಭರಣ ಎನ್ನುವರು. ನದಿಯಲ್ಲಿ ಕುದುರೆಕಲ್ಲು, ದೊಡ್ಡನ ಕಲ್ಲು, ಚಿಕ್ಕನ ಕಲ್ಲು, ಮಟ್ಟೆ ಕಲ್ಲು ಎಂಬ ಆಳವಾದ ಮಡುಗಳಿವೆ. ನದಿಯ ಅಣೆಕಟ್ಟಿನ ಕೆಳಗೆ ದಂಡೆಯಲ್ಲಿ ಯೋಗಾನರಸಿಂಹ ದೇವಾಲಯವಿದೆ. ಗೋಕರ್ಣನೆಂಬ ಋಷಿ ಪೂರ್ವ ದಿಕ್ಕಿಗೆ ನಮಿಸಿ ತಪಸ್ಸು ಮಾಡಲಾಗಿ ನರಸಿಂಹದೇವರು ಅವನ ಮುಂದುಗಡೆಯೇ ಪಶ್ಚಿಮಾಭಿಮುಖವಾಗಿ ಪ್ರತ್ಯಕ್ಷವಾಗಬೇಕಾಯಿತು. ಆದುದ ರಿಂದಲೇ ಇದಕ್ಕೆ ಗೋಕರ್ಣಪುರಿ ಎಂಬ ಇನ್ನೊಂದು ಹೆಸರಿದೆ. ಯೋಗಾನರಸಿಂಹ ಪಶ್ಚಿಮಾಭಿಮುಖವಾಗಿದ್ದಾನೆ. ಇದು ಉದ್ಭವಮೂರ್ತಿ. ಕೈಯಲ್ಲಿ ಶಂಖ, ಚಕ್ರಧಾರಿಯಾಗಿದ್ದು, ಯೋಗ ಮುದ್ರೆಯಲ್ಲಿದ್ದಾನೆ. ಮತ್ತೆರಡು ಕೈಗಳು ತೊಡೆಯ ಮೇಲಿವೆ. ಮತ್ತು ಪರಮಾತ್ಮನ ದಿವ್ಯ ಶಾಂತಿಗೆ ಅನುಗುಣವಾಗಿದ್ದಾನೆ. ಪೀಠಧ ಮೇಲೆ ಗರುಡನಿದ್ದಾನೆ. ಊರಿನ ಮಧ್ಯದಲ್ಲಿ ಪರವಾಸುದೇವರ ಗುಡಿ ಇದೆ. ಇದು ನರಸಿಂಹದೇವಾಲಯಕ್ಕಿಂತ ಹಳೆಯದು. ಗಂಭೀರವಾದ ಪರವಾಸುದೇವ ಮೂರ್ತಿ ಪೂರ್ವಾಭಿಮುಖವಾಗಿದ್ದಾನೆ. 5 ಅಡಿ ಎತ್ತರವಿದ್ದು 2 ಅಡಿ ಪೀಠದ ಮೇಲಿದ್ದಾನೆ. ಇದು ಬೇಲೂರು ಕೇಶವ ದೇವರ ವಿಗ್ರಹದಂತಿದೆ.

ಈ ದೇವರಿಗೆ ಇದ್ದ ಅಪೂರ್ವ ಸಾಲಿಗ್ರಾಮ ಸರ, ಮಹಾಲಕ್ಷ್ಮಿ ದೇವಿಗೆ ನಿಜವಾದ ವಜ್ರದ ಹರಳಿನ ಮೂಗುತಿ ಇದ್ದು ಅದು ಕದ್ದೊಯ್ಯಲ್ಪಟ್ಟಿತು ಎಂದು ತಿಳಿಯುತ್ತದೆ. ಮತ್ತೊಂದು ಈಶ್ವರನ ಬೃಹತ್ ಲಿಂಗವಿರುವ ದೇವಾಲಯವಿದೆ. ಅಣೆಕಟ್ಟಿನ ಭಾಗದಲ್ಲಿ ಉದ್ಯಾನವನ ನಿರ್ಮಿತವಾಗಿದ್ದು ಪ್ರವಾಸಿಗರಿಗೆ ಮತ್ತೊಂದು ಪ್ರೇಕ್ಷಣೀಯ ಸ್ಥಳವಾಗಿದೆ.

## 37. ರಾಮನಾಥಪುರ

ಅರಕಲುಗೂಡಿಗೆ 19 ಕಿ. ಮಿ., ಸಾಲಿಗ್ರಾಮಕ್ಕೆ 30 ಕಿ.ಮಿ.

ಪುರಾಣದ ಹೇಳಿಕೆಯಂತೆ ಬೃಗುಮಹರ್ಷಿಗಳಿಂದ ಶಾಪಗ್ರಸ್ತಸ್ಥನಾದ ಅಗ್ನಿ ಅವಮಾನಿತನಾಗಿ ವಿಂದ್ಯಪರ್ವತದ ದಕ್ಷಿಣಕ್ಕೆ ಪ್ರಯಾಣ ಮಾಡಿ ದಂಡಕಾರಣ್ಯದಲ್ಲಿದ್ದ ಪುಷ್ಕರ ಸರೋವರವೊಂದನ್ನು ಸೇರಿ ಅದರ ತಟದಲ್ಲಿಯೇ ತಾನಾಗಿಯೇ ಉದ್ಭವಿಸಿರುವ ಶಿವಲಿಂಗವನ್ನು ಅರ್ಚಿಸುತ್ತಾ ಘೋರ ತಪಸ್ಸು ಮಾಡಿದನು. ಅಗ್ನಿಯ ತಪೋಮಹಿಮೆ ಯಿಂದಾದ ಜ್ವಾಲೆಯನ್ನು ತಡೆಯಲಾರದೆ ಇಂದ್ರಾದಿ ದೇವತೆಗಳು ಕೈಲಾಸವಾಸಿಯಾದ ಪರಮೇಶ್ವರನ ಸನ್ನಿಧಾನಕ್ಕೆ ಬಂದು ಅಗ್ನಿಗೆ ಅಭೀಷ್ಟಫಲವನ್ನು ನೀಡಿ ತಮ್ಮನ್ನು ಜ್ವಾಲಾ ತಾಪದಿಂದ ಮುಕ್ತಿಗೊಳಿಸಬೇಕೆಂದು ಪ್ರಾರ್ಥಿಸಲು ಅಗ್ನಿಯು ಆರಾಧಿಸುತ್ತಿದ್ದ ಲಿಂಗ ದಲ್ಲಿಯೇ ವಹ್ನಿನೇತ್ರ ಈಶ್ವರ ಪ್ರತ್ಯಕ್ಷನಾದ. ಅಗ್ನಿಯ ಕಾಯಕದಿಂದ ಸುಪ್ರೀತನಾದ ಕೈಲಾಸ ವಾಸಿಯು ಪಾರ್ವತಿ ಸಮೇತನಾಗಿ ಅಲ್ಲಿಯೇ ನೆಲಸಿದ. ಹೀಗೆ ಈಶ್ವರನು ನೆಲಸಿದ ಸ್ಥಳವೇ ವಹ್ನಿಪುಷ್ಕರಿಣಿ ಎಂದು ಪ್ರಸಿದ್ಧವಾಯಿತು. ಹೀಗೆ ವಾಸವಾಪುರ ಎಂದೇ ಪ್ರಖ್ಯಾತವಾದ ಇಂದಿನ ರಾಮನಾಥಪುರದ ಕಾವೇರಿ ದಡದಲ್ಲಿ ವಹ್ನಿ ಪುಷ್ಕರಿಣಿ ಇದೆ. ಅಗಸ್ತ್ಯೇಶ್ವರನಿದ್ದಾನೆ. ಇಲ್ಲಿನ ಇನ್ನೊಂದು ಪವಿತ್ರ ಸ್ಥಳ ರಾಮೇಶ್ವರ ದೇವಾಲಯ. ಇಲ್ಲಿನ ಶಿವಲಿಂಗವು ಚತುರ್ಯುಗ ಮೂರ್ತಿ ಎಂದೇ ಪ್ರಖ್ಯಾತ. ತ್ರೇತಾಯುಗದಲ್ಲಿ ಲಂಕಾಧಿಪತಿ ದಶಕಂಠ ರಾವಣನನ್ನು ಸಂಹರಿಸಿದ ಶ್ರೀರಾಮನು ವಸಿಷ್ಠರ ಪ್ರೇರಣೆಯಿಂದಾಗಿ ವಾಸವಾಪುರಕ್ಕೆ (ರಾಮನಾಥಪುರ) ಬಂದಿಳಿದು ಅಲ್ಲಿ ಹನುಮಂತನಿಗೆ ಶ್ರೇಷ್ಠವಾದ ಶಿವಲಿಂಗ ಒಂದನ್ನು ತರಲು ಆಜ್ಞೆ ಮಾಡಿದ. ರಾಮನ ಇಚ್ಛೆಯಂತೆ ಹನುಮಂತನು ಪ್ರಯಾಣ ಮಾಡಿದ. ಆಗ ಅಗಸ್ತ್ಯರು ವಹ್ನಿಪುಷ್ಕರಣಿ ಬಳಿಯಲ್ಲಿಯೇ ಉದ್ಭವಿಸಿರುವ ಮತ್ತೊಂದು ಲಿಂಗದ ಸಂಗತಿ ಯನ್ನು ಶ್ರೀರಾಮನಿಗೆ ಹೇಳಿದರು. ಅದನ್ನು ಶ್ರೀರಾಮನು ಅರ್ಚಿಸಿದನು. ಅದಕ್ಕೆ ಶ್ರೀರಾಮೇಶ್ವರ ಎಂದು ಹೆಸರಾಯಿತು. ಹೀಗೆ ಈ ಸ್ಥಳ ರಾಮೇಶ್ವರಪುರವಾಗಿದ್ದು ಅದು ಹೋಗಿ ರಾಮನಾಥಪುರವಾಯಿತು. ಈ ದೇವಾಲಯವು ಅಪೂರ್ವ ಕೆತ್ತನೆಗಳಿಂದ ಕೂಡಿದ್ದು ಹೊಯಿಸಳರ ಅತಿಶಯ ಕೊಡುಗೆ. ಹೊಯಿಸಳರ ರಾಜ ಮೂರನೇ ನರಸಿಂಹನ ಕಾಲದಲ್ಲಿ ಸೋಮದಂಢನಾಯಕನಿಂದ ನಿರ್ಮಿಸಲ್ಪಟ್ಟಿತು.

ಶ್ರೀರಾಮನ ಅಪ್ಪಣೆಯಂತೆ ಹನುಮಂತ ಬೇರೊಂದು ಲಿಂಗವನ್ನು ಗಂಡಕೀ ಕ್ಷೇತ್ರದಿಂದ ತಂದಾಗ ಅವನು ಆ ಸ್ಥಳದಲ್ಲಿ ಬೇರೊಂದು ಲಿಂಗವಿರುವುದನ್ನು ಕಂಡು ಅಸಮಾಧಾನ ಗೊಂಡ. ಆಗ ಶ್ರೀರಾಮನು ಆ ಲಿಂಗವನ್ನು ಹನುಮಂತೇಶ್ವರನೆಂದು ಕರೆದು ಅಲ್ಲಿಯೇ ಸ್ಥಾಪಿಸಿದ. ಮತ್ತು ರಾಮೇಶ್ವರನನ್ನು ದರ್ಶನ ಮಾಡುವ ಮುನ್ನ ಹನುಮಂತೇಶ್ವರನನ್ನು

ದರ್ಶನ ಮಾಡಬೇಕೆಂತಲೂ ಹಾಗೆ ಮಾಡದಪಕ್ಷದಲ್ಲಿ ರಾಮೇಶ್ವರ ದರ್ಶನದಿಂದುಂಟಾದ ಫಲವು ಲಭಿಸುವುದಿಲ್ಲ ಎಂಬ ವರವನ್ನಿತ್ತ.

ಈ ಸ್ಥಳಗಳಲ್ಲಿರುವ ಈ ಲಿಂಗಗಳಲ್ಲದೇ ಲಕ್ಷ್ಮಣೇಶ್ವರ, ಅಂಗದೇಶ್ವರ ಎಂಬ ಲಿಂಗ ಗಳೂ ಇವೆ. ಕಾವೇರಿ ನಡುವಿನ ಗಾಯತ್ರಿ ಶಿಲೆ (ಕಪಿಲಾ ಶಿಲೆ) ಮತ್ತೊಂದು ಪುಣ್ಯಸ್ಥಳ. ಈ ಗಾಯತ್ರಿ ಶಿಲೆಯಲ್ಲಿ ಒಂದು ಗಾಯತ್ರಿ ಜಪವನ್ನು ಮಾಡಿದರೆ ಹನ್ನೆರಡು ಸಾವಿರ ಗಾಯತ್ರಿ ಜಪದ ಫಲವು ದೊರಕುವುದು. ಹಿಂದೆ ಶ್ರೀರಾಮ, ಲಕ್ಷ್ಮಣ, ವಸಿಷ್ಠರು, ಅಗಸ್ತ್ಯರು, ವಿಭೀಷಣಾದಿಯಾಗಿ ಎಲ್ಲರೂ ಈ ಗಾಯತ್ರಿ ಶಿಲೆಯ ಮೇಲೆ ಆಸೀನರಾಗಿ 1008 ಬಾರಿ ಗಾಯತ್ರಿ ಮಂತ್ರವನ್ನು ಪಠಿಸಿದ್ದರು. ಸೀತಾರಾಮರ ಪಾದಕಮಲಗಳ ಗುರುತಗಳು ಇಂದಿಗೂ ಅಲ್ಲಿ ಶಿಲೆಯ ಮೇಲೆ ಸ್ಪಷ್ಟವಾಗಿ ಮೂಡಿರುವುದು ಗೋಚರವಾಗುತ್ತದೆ. ಈ ಶಿಲೆಯಲ್ಲಿ ಪಂಚಲಿಂಗೇಶ್ವರ, ನಂದಿ, ಗಣೇಶನ ಕೆತ್ತನೆಗಳಿದ್ದು ಆಂಜನೇಯ ವಿಗ್ರಹವಿರುವ ಗುಡಿ ಯೊಂದಿದೆ.

ನದಿಯ ಮಧ್ಯದಲ್ಲಿ ಸೇತುವೆಯ ಬಳಿ ಗೋಗರ್ಭವೆಂಬ ಸ್ಥಳವಿದೆ. ಒಮ್ಮೆ ಶುಕ್ರಾ ಚಾರ್ಯರು ಮೃತಸಂಜೀವಿನಿ ಮಂತ್ರದ ಸಿದ್ಧಿಗಾಗಿ ಇಲ್ಲಿಯ ಕಾವೇರಿ ಮಧ್ಯದಲ್ಲಿರುವ ಗಾಯತ್ರಿ ಶಿಲೆಯ ಮೇಲೆ ದಕ್ಷಿಣಕ್ಕೆ ಅಭಿಮುಖವಾಗಿ ನಿಂತು ಮಹದೇವನನ್ನು ಕುರಿತು ಮಹತ್ತರವಾದ ತಪಸ್ಸನ್ನಾಚರಿಸಲು ಪ್ರಾರಂಭಿಸಿದರು. ಅದರಿಂದ ಭೀತನಾದ ಇಂದ್ರನು ಅವರ ತಪಸ್ಸನ್ನು ಭಂಗಮಾಡಲು ಊರ್ವಶಿ ಮತ್ತು ಕಾಮಧೇನುವನ್ನು ಕಳುಹಿಸಿದ. ಶುಕ್ರಾಚಾರ್ಯರ ತಪಭಂಗ ವಾಗಿ ಅವರು 'ಶಿಲೆಯಾಗಿ' ಎಂದು ಅವರಿಗೆ ಶಾಪ ನೀಡಿದರು. ಅಂದಿನಿಂದ ಕಾಮಧೇನುವು ಹಸುವಿನ ಶಿಲಾರೂಪದಲ್ಲಿ ಊರ್ವಶಿಯು ಅದರ ಸಮೀಪದಲ್ಲಿ ಕರುವಾಗಿ ಇದ್ದಾರೆ. ಇದನ್ನು ಗೋಗರ್ಭಶಿಲೆ ಎನ್ನುವರು. ಇದರ ಪಕ್ಕದಲ್ಲಿ ಶುಕ್ರಾಚಾರ್ಯರ ಏಕಪಾದವು ಅಲ್ಲಿ ಮೂಡಿದೆ.

ಈ ಗೋಗರ್ಭದ ಸಮೀಪದಲ್ಲಿಯೇ ಊರ್ವಶಿ ಶಿಲೆ, ಸ್ವಲ್ಪ ದೂರದಲ್ಲಿ ಮೇನಕಾಶಿಲೆ ಇದೆ. ಈ ಶಿಲೆಯಲ್ಲಿ ರುದ್ರಪಾದವೂ ಇದೆ. ಇದರ ಸಮೀಪದಲ್ಲಿ ಹನುಮಂತನ ಗೋವು, ಸಂಗಡವೇ ಯಮತೀರ್ಥವಿದೆ. ಈ ಕ್ಷೇತ್ರದ ಸನಿಹದ ಮಲ್ಲರಾಜಪಟ್ಟಣದ ಬಳಿ ಗೌತಮ ಶಿಲೆ ಎಂಬುದು ಇತ್ತಂತೆ. ಆದರೆ ಸೇತುವೆ ಕಟ್ಟುವ ಕೆಲಸ ನಡೆದಾಗ ಇದು ಸ್ಫೋಟಗೊಂಡು ನಾಶವಾಯಿತೆಂದು ಹೇಳುವರು.

ಈ ಕ್ಷೇತ್ರದಲ್ಲಿರುವ ಮತ್ತೊಂದು ಪುಣ್ಯಸ್ಥಳ ಪಟ್ಟಾಭಿರಾಮ ದೇವಾಲಯ, ಈ ಹೆಸರಿನ ಶ್ರೀರಾಮ ದೇವಾಲಯದಲ್ಲಿ ಪಟ್ಟಾಭಿಷಿಕ್ತನಾದ ಶ್ರೀರಾಮ ತನ್ನ ತೊಡೆಯ ಮೇಲೆ ಸೀತಾ ದೇವಿಯನ್ನು ಕುಳ್ಳಿರಿಸಿಕೊಂಡಿರುವ ಅಪೂರ್ವ ಭಂಗಿಯಲ್ಲಿದೆ. ಇಲ್ಲಿನ ಮತ್ತೊಂದು ಪವಿತ್ರ ಸ್ಥಳ ಪ್ರಸನ್ನ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಾಲಯ. ಇದನ್ನು ಸುಬ್ರಮಣ್ಯಮಠದ ಶ್ರೀ ವಿಭುದೇಶ ತೀರ್ಥ ಶ್ರೀಪಾದಂಗಳವರು ಪುನರುದ್ಧಾರ ಮಾಡಿದ್ದಾರೆ. ಇದೊಂದು ರಾಮ ನಾಥಪುರದಂತಹ ಅತಿ ಪುರಾತನ ಸ್ಥಳದಲ್ಲಿ ಮಿಂಚುತ್ತಿರುವ ಸುಂದರ, ಪ್ರಶಾಂತ ಸ್ಥಳ. ದೇವಸ್ಥಾನದ ಆವರಣವು ಕೊಳೆಕಸಗಳಿಲ್ಲದೆ ಶುಭ್ರವಾಗಿದ್ದು ಅಲ್ಲಿ ಬೇಕಾಗುವ ಶಾಂತ ವಾತಾವರಣಕ್ಕೆ ತಕ್ಕ ಹಿನ್ನೆಲೆಯನ್ನು ಒದಗಿಸಿದೆ. ಅಲ್ಲಿನ ಸುಬ್ರಮಣ್ಯದೇವರು, ಶ್ರೀ ಲಕ್ಷ್ಮಿ ನರಸಿಂಹಸ್ವಾಮಿ ಈ ಪ್ರತಿಮೆಗಳ ಅಲಂಕಾರ, ಪೂಜೆ ಇವುಗಳು ಯಾವ ಯಾತ್ರಿಕನ

ಮನಸ್ಸಿನಲ್ಲೂ ಪೂಜ್ಯ ಭಾವನೆಯನ್ನು ಹೆಚ್ಚಿಸುವಂತಿದೆ. (ಇಲ್ಲಿ ಊಟ, ವಸತಿಗಳು ತಂಗುವ ಯಾತ್ರಿಕರಿಗೆ ದೊರಕುವುವು. ದೂರವಾಣಿ : 25555 / 08175).

ಈ ಕ್ಷೇತ್ರಕ್ಕೆ ದ್ವೈತಮತಾಚಾರ್ಯರುಗಳಾದ ಶ್ರೀ ಮಧ್ವಾಚಾರ್ಯರು, ಶ್ರೀ ಸತ್ಯಧ್ಯಾನತೀರ್ಥರು ಆಗಮಿಸಿ ಇಲ್ಲಿಯ ನೆಲವನ್ನು ಪಾವನಗೊಳಿಸಿದ್ದಾರೆ. ಶ್ರೀ ವ್ಯಾಸರಾಯರು ಸ್ಥಾಪಿಸಿದ ವ್ಯಾಸಾಂಜನೇಯ, ಶ್ರೀ ರಾಘವೇಂದ್ರಸ್ವಾಮಿಗಳಿಂದ ಪ್ರತಿಷ್ಠಾಪಿಸಿದ ಶ್ರೀ ಪ್ರಾಣದೇವರು ಇದ್ದಾರೆ. ಶ್ರೀ ಸತ್ಯಧ್ಯಾನ ತೀರ್ಥರು ಪ್ರತಿಷ್ಠಾಪಿಸಿದ್ದ ಶ್ರೀ ಆಂಜನೇಯ ದೇವಾಲಯವೂ ಇದೆ. ಪ್ರಕೃತಿ ಪ್ರಿಯರಿಗೆ ಕಾವೇರಿ ನದಿಪಾತ್ರ, ಅದರಲ್ಲಿ ನಿರ್ಭಯವಾಗಿ ಜಲಕೇಳಿಯಾಡುವ ಮೀನುಗಳ ಸಮೂಹ ಮತ್ತೊಂದು ಆಕರ್ಷಣೆ.

## 38. ಬೇಲೂರು

ಹಾಸನದಿಂದ 39 ಕಿ. ಮಿ. ಮೈಸೂರಿಗೆ 158 ಕಿ.ಮಿ. ಬೆಂಗಳೂರಿಗೆ 224 ಕಿ. ಮಿ.

ಇದರ ಪೂರ್ವದ ಹೆಸರು ವೇಲಾಪುರಿ, ವೇಲೂರು ಎಂಬುದು. ದಕ್ಷಿಣ ವಾರಣಾಸಿ ಎಂದು ಪ್ರಸಿದ್ಧಿ. ಕ್ಷೇತ್ರಸ್ವಾಮಿ ಸೌಮ್ಯಕೇಶವ. ಸೌಮ್ಯನಾಯಕಿ ಅಮ್ಮನವರು ಪುರಾಣದ ಹೇಳಿಕೆಯಂತೆ ಉಲೂಪಿ ಎಂಬ ನಾಗಕನ್ನಿಕೆಯಾಗಿದ್ದಳು. ಕೇಶವ ವಿಗ್ರಹ ಚಂದ್ರದ್ರೋಣ ಪುರದಲ್ಲಿ ಭೂಗತವಾಗಿದ್ದು ಅದನ್ನು ವಿಷ್ಣುವರ್ಧನ ಬೇಲೂರಿನಲ್ಲಿ ಪ್ರತಿಸ್ಥಾಪಿಸಿ, ವಿಷ್ಣು ಸಮುದ್ರವೆಂಬ ಮಹಾತೀರ್ಥವನ್ನು ನಿರ್ಮಿಸಿದನು. ಅರ್ಜುನಾಂಶರಾದ ವೈಕುಂಠದಾಸರು, ಎಂಬುವರು ಇಲ್ಲಿ ಜನಿಸಿದ್ದು ಮುಕುಂದ ಮಾಲಾ ಸ್ತೋತ್ರವನ್ನೂ ದೇವರ ಮುಂದೆ ಮನೋಹರವಾಗಿ ಹಾಡುತ್ತಿದ್ದರಂತೆ. ಇವರಿಗೂ ಪುರಂದರದಾಸರಿಗೂ ಪರಿಚಯವಿತ್ತು. ವೈಕುಂಠದಾಸರ ವೃದ್ಧಾಪ್ಯದಲ್ಲಿ ವಾದಿರಾಜರು ಬೇಲೂರಿಗೆ ಬಂದು ಕೆಲಕಾಲ ಅಲ್ಲಿ ವಾಸ ಮಾಡಿದ್ದರು. ವೈಕುಂಠ ದಾಸರಿಗೂ ವಾದಿರಾಜರಿಗೂ ಕೆಲವು ಮಹಿಮಾ ವಿಶೇಷಗಳು ನಡೆದವು. ಕನಕದಾಸರು ಉಡುಪಿಯನ್ನು ಬಿಟ್ಟನಂತರ ಹೆಚ್ಚು ಕಾಲ ವಾಸಮಾಡಿದ ಸ್ಥಳ ಬೇಲೂರು. ಅಲ್ಲಿಯೂ ಅನೇಕ ದೇವರ ನಾಮಗಳನ್ನು ರಚಿಸಿ ಹಾಡಿದ್ದಾರೆ. 'ಹರಿಭಕ್ತಿಸಾರ' ಗ್ರಂಥವನ್ನು ಅವರು ಬೇಲೂರಿನಲ್ಲಿದ್ದಾಗ ರಚಿಸಿದ್ದು.

ಬೇಲೂರಿನ ಮುಖ್ಯ ಆಕರ್ಷಣೆ ಬೇಲೂರಿನ ಚೆನ್ನಕೇಶವ ದೇವಾಲಯ. (ಕ್ರಿ.ಶ 1117) ಹೊಯ್ಸಳ ಶೈಲಿಯಲ್ಲಿ ರಚಿಸಲ್ಪಟ್ಟಿದೆ. ನಕ್ಷತ್ರಾಕಾರದ ತಳವಿನ್ಯಾಸವನ್ನು ಹೊಂದಿ 443 ½ x 369 ಅಡಿ ಅಗಲವಾಗಿದೆ. ಕೇಶವ ದೇವಾಲಯದ ಕುಸುರಿ ಕೆಲಸ ಹೊರಗಿನ ಭಾಗಕ್ಕಿಂತಲೂ ಹೆಚ್ಚು ಸುಂದರ. ವಿಜಯನಾರಾಯಣ ದೇವಾಲಯ, ಸೌಮ್ಯನಾಯಕಿ ಗುಡಿ, ಕಪ್ಪೆ ಚೆನ್ನಿಗರಾಯನ ಗುಡಿ ಇವು ನೋಡಲು ಇತರ ಸ್ಥಳಗಳು.

## 39. ಹೊಳೆ ನರಸೀಪುರ

ಹಾಸನದಿಂದ 44 ಕಿ. ಮಿ. ಮೈಸೂರಿನಿಂದ 71 ಕಿ.ಮಿ.

ಹಾಸನ-ಮೈಸೂರು ರೈಲುಮಾರ್ಗದ ಮಧ್ಯೆ ಇದೆ. ಬಸ್ಸುಗಳ ಸೌಕರ್ಯ ತುಂಬಾ ಚೆನ್ನಾಗಿದೆ.

ಇದು ಹೇಮಾವತಿ ದಂಡೆಯಲ್ಲಿರುವ ಯಾತ್ರಾಸ್ಥಳ. ಬಸ್ಸು ಮತ್ತು ರೈಲು ನಿಲ್ದಾಣಕ್ಕೂ ದೂರವಾಗಿದ್ದೂ ಕೋಟೆಯ ಪ್ರದೇಶದಲ್ಲಿ ಲಕ್ಷ್ಮೀನರಸಿಂಹನ ದೇವಾಲಯವಿದೆ. ಅದರ ಹತ್ತಿರವೇ ಉತ್ತರಾಧಿಮಠವೂ ಇದೆ. ಉತ್ತರಾದಿ ಮಠದ ಸ್ವಾಮಿಗಳಾದ ಶ್ರೀ ಸತ್ಯಧರ್ಮರು (1787-1830) ದಿವಾನ್ ಪೂರ್ಣಯ್ಯನವರ ಆಮಂತ್ರಣದಂತೆ ಹೊಳೆ ನರಸೀಪುರದಲ್ಲಿ ಹತ್ತುವರ್ಷಗಳ ಕಾಲ ನೆಲೆಸಿದ್ದರು. ಇಲ್ಲಿ ಅವರು ದೊಡ್ಡದಾದ ಮಠವನ್ನೇ ಕಟ್ಟಿಸಿಕೊಟ್ಟಿದ್ದರು. ಹೀಗಾಗಿ ಒಂದು ಕಾಲದಲ್ಲಿ ಶ್ರೀಮಠಕ್ಕೆ ಹೊಳೆ ನರಸೀಪುರ ಮಠವೆಂದೇ ಹೆಸರು ಬಂದಿತ್ತು. ಶ್ರೀಮಠಕ್ಕೆ ಬೆಂಕಿಬಿದ್ದು ಬಹಳ ಹಾನಿ ಸಂಭವಿಸಿದಾಗ ಮೈಸೂರು ಅರಸರು ಮತ್ತೆ ಅದನ್ನು ದುರಸ್ತಿಮಾಡಿಸಿ 12 ಸಾವಿರ ಜನರಿಗೆ ಏಕಕಾಲದಲ್ಲಿ ಭೋಜನ ಮಾಡುವಂತಹ ಕಟ್ಟಡವನ್ನು ಕಟ್ಟಿಸಿಕೊಟ್ಟಿದ್ದರು. ಇಲ್ಲಿ ಈಗಲೂ ಉತ್ತರಾದಿಮಠವೂ ರಾಘವೇಂದ್ರ ಮಠವೂ ಇದೆ. ಹೊಳೆ ದಂಡೆಯ ಪ್ರದೇಶ ತುಂಬಾ ಆಕರ್ಶಕವಾಗಿದೆ.

## 40. ಇತರ ಸ್ಥಳಗಳು

**1. ದೊಡ್ಡ ಗದ್ದವಳ್ಳಿ** : ಹಾಸನದಿಂದ 16 ಕಿ. ಮಿ. ಲಕ್ಷ್ಮಿದೇವಿ (ಅಭಿನವ ಕೊಲ್ಲಾಪುರ) ಬೆಂಗಳೂರು 112 ಕಿ.ಮಿ

**2. ಹಳೇಬೀಡು** : ಬೇಲೂರಿನಿಂದ 17 ಕಿ. ಮಿ., ಹಾಸನದಿಂದ 29 ಕಿ.ಮಿ. ಹೊಯ್ಸಳೇಶ್ವರ, ಕೇದಾರೇಶ್ವರ.

**3. ಮೊಸಳೆ** : ಹಾಸನದಿಂದ 13 ಕಿ.ಮಿ., ಹಾಸನ - ಮೈಸೂರು ಮುಖ್ಯರಸ್ತೆಯಿಂದ 2 ಕಿ.ಮಿ. ಶೈವ ವೈಷ್ಣವ ಸಂಗಮ ಉಗ್ರನರಸಿಂಹ, ಚೆನ್ನಕೇಶವ (13 ನೇ ಶತಮಾನ).

**4. ಶಾಂತಿಗ್ರಾಮ** : ಹಾಸನದಿಂದ 13 ಕಿ.ಮಿ ಸೌಮ್ಯಕೇಶವ

**5. ಕೊಣನೂರು** : ಅರಕಲಗೂಡಿಗೆ 24 ಕಿ.ಮಿ. ಕೊಳಲ ಗೋಪಾಲಸ್ವಾಮಿ

**6. ಹಾರನಹಳ್ಳಿ** : ಅರಸೀಕೆರೆಯಿಂದ 8ಕಿ.ಮಿ. ಕೇಶವ, ಸೋಮೇಶ್ವರ.

# ಬೆಂಗಳೂರು ನಗರ

## 41. ಬೆಂಗಳೂರು ನಗರ

ಕರ್ನಾಟಕದ ರಾಜಧಾನಿ. ಇದರ ವಿಸ್ತಾರ ವರ್ಷ ವರ್ಷಕ್ಕೆ ಹೆಚ್ಚಾಗುತ್ತಲಿದೆ. ಬೆಂಗಳೂರು ದೇವಾಲಯಗಳ ನಗರವೂ ಅಹುದು. ಪುರಾತನ ದೇವಾಲಯಗಳ ಜೊತೆಗೆ ಹೊಸ ಹೊಸ ದೇವಾಲಯಗಳೂ ಕಟ್ಟಲ್ಪಡುತ್ತಲೇ ಇವೆ. ಬೆಂಗಳೂರು ನಗರ ಒಂದರಲ್ಲೇ ಸುಮಾರು 150 ದೇವಾಲಯಗಳಿವೆ ಎಂದರೆ ಆಶ್ಚರ್ಯವಾಗದೇ ಇರದು. ಅದರಲ್ಲಿ ವೈಷ್ಣವರು ಸಂದರ್ಶಿಸುವ ದೇವಸ್ಥಾನಗಳು ಇಂತಿವೆ.

1. ಬಸವನ ಗುಡಿಯ ದೊಡ್ಡ (ವಿದ್ಯಾ) ಗಣಪತಿ (ಬ್ಯೂಗಲ್‌ರಾಕ್ ಗುಡ್ಡದ ಬುಡ. ಪಲ್ಲವ ಶಿಲ್ಪ)
2. ಕಾರಂಜಿ ಆಂಜನೇಯ ದೇವಾಲಯ (ಬಸವನಗುಡಿ) ರಾಮದೇವಾಲಯ.
3. ಗವಿ ಗಂಗಾಧರ ಸ್ವಾಮಿ ದೇವಾಲಯ (ಗವೀಪುರ-ಕೆಂಪೇಗೌಡ ನಗರ-ಪುರಾತನ
4. ಧರ್ಮರಾಯ ಸ್ವಾಮಿ ಗುಡಿ (ಬೆಂಗಳೂರು ಕರಗ ಖ್ಯಾತಿ)
5. ಸುಬ್ರಮಣ್ಯೇಶ್ವರ (ಸಜ್ಜನ್ ರಾವ್ ವೃತ್ತ) ಕೋಟೆ ವೆಂಕಟರಮಣ ಸ್ವಾಮಿ
6. ಸತ್ಯನಾರಾಯಣ (ಸಜ್ಜನ್ ರಾವ್ ವೃತ್ತ)
7. ಕಾಶಿ ವಿಶ್ವೇಶ್ವರ ಸ್ವಾಮಿ (ಬಳೇಪೇಟೆ-ಚಿಕ್‌ಪೇಟೆ ಚೌಕ)
   ವೇಣುಗೋಪಾಲಸ್ವಾಮಿ ಗುಡಿ - ಚಿಕ್ಕಪೇಟೆ ಉತ್ತರಾದಿ ಮಠದ ಸಮೀಪದ ಗುಡಿ 1916ರಲ್ಲಿ ಸೋಸಲೆ ವಿದ್ಯಾರತ್ನಾಕರ ತೀರ್ಥರಿಂದ ಸ್ಥಾಪನೆ. ಇಲ್ಲಿ 2 ಅಡಿ ಎತ್ತರದ ಕೊಳಲೂದುವ ವೇಣುಗೋಪಾಲಸ್ವಾಮಿ ವಿಗ್ರಹವಿದೆ. ಆಂಜನೇಯನ ಗುಡಿ ಗರುಡದೇವರ ಗುಡಿ (ಜಗನ್ನಾಥತೀರ್ಥರಿಂದ ಪ್ರತಿಷ್ಠೆ)
8. ಪೂರ್ಣ ಪ್ರಸಾದ್ ಆಂಜನೇಯ (ರೇಸ್ ಕೋರ್ಸ್‌ಬಳಿ)
9. ತುಳಸಿ ತೋಟದ ಬೆಣ್ಣೆ ಕೃಷ್ಣ (1844)
10. ಸುಗ್ರೀವ ದೇವಾಲಯ - (ಬಳೆ ಪೇಟೆ) (3 ಅಡಿ) ಕೋರೆಹಲ್ಲುಗಳಿರುವ ವಿಗ್ರಹ ಭಾರತದಲ್ಲಿ ಇದು ಒಂದೇ.
11. ನರಸಿಂಹಸ್ವಾಮಿ (ಕೆಂಪೇಗೌಡ ಚೌಕದಿಂದ ಬಳೆಪೇಟೆಗೆ ಹೋಗುವ ಮಾರ್ಗದಲ್ಲಿ)
12. ಕಾಡುಮಲ್ಲೇಶ್ವರ ಸ್ವಾಮಿ (ಮಲ್ಲೇಶ್ವರ ಬಡಾವಣೆ) ಬಹಳ ಪುರಾತನ.
13. ಸೋಮೇಶ್ವರ (ಅಲ್ಸೂರ್)

14. ಕೋಟೆ ಆಂಜನೇಯ (ವ್ಯಾಸರಾಜ ಪ್ರತಿಷ್ಠೆ) ಪುರಾತನ ದೇವಾಲಯ
15. ಕೋಟೆ ವೆಂಕಟರಮಣ - ತಿರುಪತಿ ದೇವರ ಹೋಲಿಕೆ (1687)
16. ಗಾಳಿ ಹನುಮಂತರಾಯ 5 ಅಡಿ (ಬೆಂಗಳೂರು ಮೈಸೂರು ರಸ್ತೆ -ಬ್ಯಾಟರಾಯನ ಪುರ, ಅತಿ ಪುರಾತನ - ವ್ಯಾಸರಾಯ ಪ್ರತಿಷ್ಠೆ

## 42. ಪೂರ್ಣ ಪ್ರಜ್ಞ ವಿದ್ಯಾಪೀಠ

ಇದು ಬೆಂಗಳೂರಿನ ಮಧ್ಯದಲ್ಲಿರುವ ಶ್ರೀ ಪೇಜಾವರ ಸ್ವಾಮಿಗಳಿಂದ ಸ್ಥಾಪಿತವಾದ ಕ್ಷೇತ್ರ. ಶ್ರೀನಿವಾಸ ನಗರದ ಬಸ್ ನಿಲ್ದಾಣದಿಂದ ಕೆಲವೇ ಹೆಜ್ಜೆಗಳ ನಡುಗೆಯ ದೂರ ದಲ್ಲಿದೆ. ಇದನ್ನು ಪೂರ್ಣಪ್ರಜ್ಞ ನಗರವೆಂದು ಕರೆಯುತ್ತಾರೆ. ಇಲ್ಲಿನ ವಿಶಾಲವಾದ ಮಠದ ಆವರಣದಲ್ಲಿ ಆಧುನಿಕರೀತಿಯ ದೇವಾಲಯದಲ್ಲಿ ಶ್ರೀಕೃಷ್ಣನ ಸುಂದರ ವಿಗ್ರಹವೂ, ಬಲದ ಭಾಗದಲ್ಲಿ ಶ್ರೀಮಧ್ವಾಚಾರ್ಯರು ಹಾಗೂ ವಾದಿರಾಜರು ಒಂದೆಡೆ, ಮತ್ತೊಂದೆಡೆ ಶ್ರೀ ರಾಘವೇಂದ್ರರ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿರುತ್ತಾರೆ. ವಿದ್ಯಾಪೀಠದ ಸ್ಥಳವು ಯಾವಾಗಲೂ ಜನಭರಿತವಾಗಿರಲು ಅಲ್ಲಿಯ ಪೂಜೆ, ಪಾಠ, ಅಧ್ಯಯನ, ಪ್ರವಚನಗಳೇ ಕಾರಣ. ಇಲ್ಲಿ ವಿದ್ಯಾರ್ಥಿಗಳನ್ನು ಧಾರ್ಮಿಕ ವೃತ್ತಿಗೆ ತರಬೇತಿ ಕೊಡಲು ಬೇಕಾದ ವ್ಯವಸ್ಥೆ ಇದೆ. ವೇದಾಂತ ಗುರುಕುಲ, ಗ್ರಂಥಾಲಯ, ಹೊಸ ಶಾಸ್ತ್ರ, ಧಾರ್ಮಿಕ ಸಾಂಸ್ಕೃತಿಕ ಪುಸ್ತಕಗಳ ಮುದ್ರಣ ಇವುಗಳೂ ಕೂಡ ವ್ಯವಸ್ಥಿತವಾಗಿ ನಡೆಯುತ್ತವೆ. Phone : 6693974, 6693036

# ಬೆಂಗಳೂರು ಜಿಲ್ಲೆ

ಈ ಜಿಲ್ಲೆಯಲ್ಲಿ 350ಕ್ಕೂ ಮಿಕ್ಕಿ ದೇವಾಲಯಗಳಿವೆ.

## 43. ಐಗಂಡಪುರ

ಇದು ಹೆಸರುಘಟ್ಟ ಕೆರೆಯ ದಕ್ಷಿಣದಲ್ಲಿರುವ ಗ್ರಾಮ. ಇದರ ಪ್ರಾಚೀನ ಹೆಸರು ಐವರ್‌ಕಂಡಪುರ ಇಲ್ಲಿ ವ್ಯಾಸರಾಯರು ಅರ್ಕಾವತಿ ನದಿ ದಂಡೆಯ ಮೇಲೆ ಲಕ್ಷ್ಮೀ ನರಸಿಂಹ ಸ್ವಾಮಿಯ ದೇವಾಲಯವನ್ನೂ ಸ್ಥಾಪಿಸಿರುವರು. ಶಾಸನಗಳಲ್ಲಿ ಈ ದೇವರನ್ನೂ ಐವರ್ ಗಂಡಮಹದೇವ ಎಂದು ಕರೆದಿದೆ. ಪಂಚ ಪಾಂಡವರು ಕಂಡು ನೆಲೆಸಿದ ಸ್ಥಳ. ಇಲ್ಲಿ ಧರ್ಮ ರಾಯನ ದೇವಾಲಯವಿದೆ. ಅದರೊಳಗೆ ಭೀಮ ನಕುಲ ಸಹದೇವ ಕುಂತಿಯರ ಹೆಸರಿನಲ್ಲಿ ಲಿಂಗಗಳನ್ನು ಒಳಗೊಂಡ ಸಣ್ಣ ಗುಹೆಗಳಿವೆ. ಚಂದ್ರಮೌಳೇಶ್ವರ ದೇವಾಲಯದ ಪ್ರತಿಷ್ಠೆ ದೂರ್ವಾಸರಿಂದ ಆಗಿದೆ. (1532) ಆಂಜನೇಯರ ದೇವಾಲಯವೂ ಇದೆ.

## 44. ಹೊಸ ಕಾಕೋಳು

ಬೆಂಗಳೂರಿಗೆ ಉತ್ತರದಲ್ಲಿ 30 ಕಿ.ಮಿ. ಪೌರಾಣಿಕವಾಗಿ ಇದು ಕಾಕಾಸುರನ ಪಟ್ಟಣ. ಊರಿನ ಮಧ್ಯಭಾಗದಲ್ಲಿ 5 ಅಡಿ ಎತ್ತರದ ಕಂಬದ ಕೆಳಭಾಗದಲ್ಲಿ ಪ್ರಾಣದೇವರ ಪ್ರತಿಮೆ ಇದೆ. ಇದು ವ್ಯಾಸರಾಯರ ಪ್ರತಿಷ್ಠೆ. ಇದಲ್ಲದೆ ಇಲ್ಲಿ ವೇಣುಗೋಪಾಲಸ್ವಾಮಿಯ ದೇವಾಲಯವಿದೆ. ತುಳಸಿ ಬೃಂದಾವನದಲ್ಲಿ ವೇಣುಗೋಪಾಲನ ಕೆತ್ತನೆಯಿದೆ. ಕೃಷ್ಣನ ಎಡಬಲಗಳಲ್ಲಿ ಶಂಖ ಚಕ್ರಗಳಿವೆ. ಈ ದೇವರನ್ನು ಸಂತಾನ ಗೋಪಾಲ ಸ್ವಾಮಿ ಎಂತಲೂ ಕರೆಯುವರು. ಸಂತಾನ ಭಾಗ್ಯ ಪಡೆಯಲಿಚ್ಛಿಸುವ ಮಂದಿಗೆ ಈ ದೇವರ ಸೇವೆ ಮಾಡುವುದರಿಂದ ಸಂತಾನ ಭಾಗ್ಯವಾಗುವುದೆಂಬ ನಂಬಿಕೆ ಇದೆ. ಚೈತ್ರ ಶುದ್ಧ ಪಂಚಮಿ ಇಲ್ಲಿ ರಥೋತ್ಸವವಾಗುವುದು.

## 45. ಹೆಸರುಘಟ್ಟ

ಬೆಂಗಳೂರಿಗೆ 24 ಕಿ.ಮಿ. ಬೆಂಗಳೂರು ಉತ್ತರ ತಾಲ್ಲೂಕು. ಇದನ್ನು ವ್ಯಾಸರ ಘಟ್ಟ ವೆಂದು ಕರೆಯುತ್ತಿದ್ದು ಇದು ಈಗ ಹೆಸರುಘಟ್ಟವಾಗಿದೆ. ಇಲ್ಲಿ ದೂರ್ವಾಸಮುನಿಗಳು ಪೂಜಿಸುತ್ತಿದ್ದ ಲಕ್ಷ್ಮಿನರಸಿಂಹ ದೇವಾಲಯವಿದೆ. ದೇವಾಲಯದ ಹೊರಭಾಗ ವಿಜಯ ನಗರದ ರಾಜ ಅಚ್ಯುತರಾಯನಿಂದ ವಿಸ್ತರಿಸಲ್ಪಟ್ಟಿದೆ.

## 46. ದೊಡ್ಡ ಬಾಣಸವಾಡಿ

ಬೆಂಗಳೂರಿನಿಂದ 5 ಕಿ.ಮಿ. ಕಾಲಕಾಲಕ್ಕೆ ಸಿಟಿ ಬಸ್ಸುಗಳು ಕೆಂಪೇಗೌಡ ಬಸ್ಸು ನಿಲ್ದಾಣದಿಂದ (301 A 300B), ಸಿಟಿಮಾರ್ಕೆಟ್‌ನಿಂದಲೂ ಬಸ್ಸುಗಳು ನಿಯತ ಕಾಲಕ್ಕೆ ಓಡುತ್ತವೆ.

ಈ ಬಸ್ಸುಗಳು ವಿಧಾನಸೌಧ ಮಾರುತಿ ಸೇವಾನಗರದ ಭುವನಗಿರಿ ಮೂಲಕ ತಲುಪುತ್ತವೆ. ಇಲ್ಲಿ ಪ್ರಸಿದ್ಧವಾದ ಆಂಜನೇಯಸ್ವಾಮಿಯ ದೇವಾಲಯವಿದೆ. 5 ಅಡಿ ಎತ್ತರದ ಮೂಲವಿಗ್ರಹವು ತುಂಬಾ ಆಕರ್ಶಕವಾಗಿದ್ದು ಭಕ್ತರ ಬೇಡಿಕೆ ಇಷ್ಟಾರ್ಥಗಳನ್ನು ಪೂರೈಸುತ್ತಿದೆ. ಗರ್ಭಗುಡಿಯ ಹೊರಗೋಡೆಯಲ್ಲಿ ಗದೆ ಹಿಡಿದು ನಿಂತಿರುವ ಆಂಜನೇಯನನ್ನು ಕಾಣಬಹುದು. ಹನುಮಜ್ಜಯಂತಿಯ ದಿನ ದೇವಾಲಯದ ಮೂಲಮೂರ್ತಿಯ ಕಣ್ಣಿನಲ್ಲಿ ಆನಂದ ಬಾಷ್ಪ ಉದುರುತ್ತದೆಂದು ಹೇಳಿಕೆ ಇದೆ. ಇದು ಇಲ್ಲಿನ ಆಶ್ಚರ್ಯಕರವಾದ ಸಂಗತಿ. ಈ ದೇವಾಲಯದ ಆವರಣದಲ್ಲಿ ಶ್ರೀರಾಮ, ಸೀತಾ ಲಕ್ಷ್ಮಣರ ಪುರಾತನ ವಿಗ್ರಹಗಳೂ ಇರುವುವು.

## 47. ಅಗರ

ಬೆಂಗಳೂರಿನ ದಕ್ಷಿಣದಲ್ಲಿ 8ಕಿ.ಮಿ. ದೂರದಲ್ಲಿ ಕೆಂಗೇರಿ ಹೋಬಳಿಗೆ ಸೇರಿದ ಈ ಸ್ಥಳದಲ್ಲಿ ತುಂಬಾಸುಂದರವಾದ ಶ್ರೀರಾಮನ ದೇವಸ್ಥಾನವಿದೆ. ಒಂದೇ ಸಾಲಿನಲ್ಲಿರುವ ಮೂರು ಗರ್ಭಗುಡಿಗಳಲ್ಲಿ ಗೋಪಾಲಕೃಷ್ಣ, ರಾಮ ಹಾಗೂ ಹನುಮಂತನ ವಿಗ್ರಹಗಳಿವೆ. ಆನಂದ ರಾಮಾಯಣವನ್ನು ಬರೆದ ತಿಮ್ಮ ಕವಿ ಈ ಊರಿನವನು.

## 48. ಅರಿಸಿನ ಕುಂಟೆ

ಬೆಂಗಳೂರಿನಿಂದ 24 ಕಿ.ಮಿ.

ಬೆಂಗಳೂರಿನಿಂದ ನೆಲಮಂಗಲಕ್ಕೆ ಹೋಗುವ ರಾಷ್ಟ್ರೀಯ ಹೆದ್ದಾರಿಯ ಬದಿಯಲ್ಲಿ ಅರಿಶಿನಕುಂಟೆ ಎಂಬ ಸ್ಥಳದಲ್ಲಿ ವಿಶ್ವಶಾಂತಿ ಆಶ್ರಮ ಸ್ಥಾಪಿತವಾಗಿದೆ. ಇದಕ್ಕೆ ಮೂಲ ಕಾರಣಕರ್ತರು ದಾಸಾಶ್ರಮದ ಸಂತ ಭದ್ರಗಿರಿ ಕೇಶವದಾಸರು ಹಾಗೂ ಭದ್ರಗಿರಿ ಅಚ್ಯುತ ದಾಸರು. ಇಲ್ಲಿ ವಿಶ್ವರೂಪ ವಿಜಯ. ವಿಠಲನ ಬೃಹತ್ ಮೂರ್ತಿ (57 ಅಡಿ) ಸ್ಥಾಪನೆಯಾಗಿದೆ. ಈ ದೇವರು ತನ್ನ ವಕ್ಷಸ್ಥಳದಲ್ಲಿ ಲಕ್ಷ್ಮಿದೇವಿಯನ್ನಿರಿಸಿಕೊಂಡು ತಾನು ವೆಂಕಟರಮಣನೆನಿಸಿಕೊಂಡಿದ್ದಾನೆ. ಅಲ್ಲದೆ ವಿಶ್ವರಭರ ಗಣಪತಿ, ಸಂಕಟ ಮೋಚಕ ವೀರಾಂಜನೇಯ, ರುದ್ರದೇವರು, ಮಾರ್ಕಂಡೇಯ ಸ್ವಾಮಿ, ಐಶ್ವರ್ಯ ಲಕ್ಷ್ಮಿಯ ಪ್ರತಿಮೆಗಳನ್ನು ಕಾಣಬಹುದು. ಇತರ ಆಕರ್ಶಕ ಮಂದಿರಗಳೆಂದರೆ, 5000 ಜನ ಕುಳಿತುಕೊಳ್ಳಬಹುದಾದ ಭಗವದ್ಗೀತಾ ದರ್ಶನ ಮಂದಿರ, ಪಾಂಡುರಂಗ ಸಭಾಭವನ, ಗಾಯತ್ರಿ ಬ್ರಹ್ಮ ವಿದ್ಯಾವಿಶ್ವವಿದ್ಯಾನಿಲಯ, ಸಪ್ತಋಷಿ ಮಂಡಲ, ಸಪ್ತಧಾರ, ಗಂಗಾಸಂಗಮ, ಈ ಯೋಜನೆಗಳು ಕ್ರಮವಾಗಿ ಇಲ್ಲಿ ಕಾರ್ಯಗತವಾಗುತ್ತಿವೆ. ವೈಕುಂಠ ಏಕಾದಶಿ, ಪುರಂದರ, ಕನಕದಾಸರ ಉತ್ಸವಗಳು ಇಲ್ಲಿ ಬಹುವಿಜೃಂಭಣೆಯಿಂದ ಜರುಗುತ್ತವೆ.

## 49. ಬನ್ನೇರುಘಟ್ಟ

ಬೆಂಗಳೂರು ಆನೇಕಲ್ ರಸ್ತೆ 15 ಕಿ.ಮಿ.

ಸಮುದ್ರಮಟ್ಟದಿಂದ 371 ಅಡಿ ಎತ್ತರದಲ್ಲಿರುವ ಬೆಟ್ಟದಲ್ಲಿ ಪ್ರಸಿದ್ಧವಾದ ಚಂಪಕ ಧಾಮಸ್ವಾಮಿ ಅಥವಾ ಸಂಪಂಗಿ ರಾಮಸ್ವಾಮಿ ದೇವಸ್ಥಾನವಿದೆ. ಇಲ್ಲಿ ರಥೋತ್ಸವ, ಪಾಲ್ಗುಣ ಬಹುಳ ಷಷ್ಠಿ. ಹೂವಿನ ಪಲ್ಲಕ್ಕಿ ಉತ್ಸವ ಬಹಳ ವೈಭವದಿಂದ ಸ್ವಾಮಿಗೆ ನಡೆಯುವುದು. ಇಲ್ಲಿನ ಬೃಹತ್ ಬಂಡೆ ಹತ್ತಿಹೋದರೆ ಮೇಲೆ ನರಸಿಂಹನ ದೇವಾಲಯವಿದೆ. ಅಲ್ಲಿ 4 ಅಡಿ ಎತ್ತರದ ನರಸಿಂಹನ ವಿಗ್ರಹವಿದೆ. ಇಲ್ಲಿಂದ 2 ಕಿ. ಮೀ. ದೂರದಲ್ಲಿ ಸುವರ್ಣಮುಖಿ ಕ್ಷೇತ್ರವಿದೆ. ಇಲ್ಲಿ ಪ್ರಾಣದೇವರು ಹಾಗೂ ರುದ್ರದೇವರು ಇದ್ದಾರೆ. ಪ್ರಾಣದೇವರು ಮತ್ತು ರುದ್ರದೇವರು ಒಂದೆಡೆಯಲ್ಲಿರುವುದು ಇಲ್ಲಿನ ವಿಶೇಷ. ಇಲ್ಲಿರುವ ಸರೋವರವೇ ಸುವರ್ಣ ಮುಖಿ ನದಿಯ ಉಗಮಸ್ಥಾನ. ಈ ನದಿಗೆ ಪೊನ್ನಾರು ಎಂತಲೂ ಕರೆಯುವರು. ಇದು ಮುಂದೆ ಅರ್ಕಾವತಿಯನ್ನು ಸೇರುವುದು. ಸುವರ್ಣಮುಖಿ ಸರೋವರದ ನೀರಿನಲ್ಲಿ ಔಷಧೀಯ ಗುಣಗಳಿವೆ ಎನ್ನುತ್ತಾರೆ. ನದಿಯ ಪಶ್ಚಿಮ ಭಾಗದ ದಡದ ಮೇಲೆ ಮತ್ತೊಂದು ಪ್ರಾಣದೇವರ ಗುಡಿಯುಂಟು. ಸುತ್ತಮುತ್ತಲಿರುವ ಕಾಡನ್ನು ಸರ್ಕಾರ ರಾಷ್ಟ್ರೀಯ ಉದ್ಯಾನವನವನ್ನಾಗಿ ಮಾಡಿದೆ. ಇದು 104 ಚ. ಕಿ.ಮಿ. ವಿಸ್ತಾರವಿದೆ. ಕಾಡು ಮೃಗಗಳ ಅಭಯಾರಣ್ಯ ಸಿಂಹ ಸಫಾರಿ ಪಾರ್ಕ್ ಕೂಡ ಇದೆ. ವಿಹಾರಕ್ಕೆ ತುಂಬಾ ಸೊಗಸಾದ ಸ್ಥಳ. ಹೋಗಿಬರಲು ಬಿ.ಟಿ.ಎಸ್. ಸೌಕರ್ಯವಿದೆ. (ಬಸ್ ನಂ. 365)

## 50. ಮಾಕಳಿ

ಇದು ಅರ್ಕಾವತಿ ನದಿ ದಡದಲ್ಲಿರುವ ಸ್ಥಳ. ಭೀಮಸ್ಥಾಪಿಸಿದ ಭೀಮೇಶ್ವರ ದೇವಾಲಯ ವಿದೆ. ಒಂದು ಬಂಡೆಯಮೇಲೆ ಭೀಮನ ಪಾದ ಎಂದು ಹೇಳುವ ದೊಡ್ಡ ಹೆಜ್ಜೆಯ ಗುರುತಿದೆ. ಇದು ಎಡಪಾದ. ಬಲಪಾದ ಕನಕಪುರದ ಬಳಿ ಇದೆ ಎಂದು ಹೇಳುವರು.

## 51. ಘಾಟಿ ಸುಬ್ರಮಣ್ಯ

ಬೆಂಗಳೂರಿನಿಂದ 53 ಕಿ.ಮಿ. ಮೈಸೂರಿನಿಂದ 192 ಕಿ.ಮಿ. ದೊಡ್ಡ ಬಳ್ಳಾಪುರದಿಂದ 12 ಕಿ.ಮಿ.

ಇದು ನಾಗದೇವತೆ ವಾಸುಕಿ ತಪಸ್ಸು ಮಾಡಿದ ಪುಣ್ಯಸ್ಥಳ. ಮೂಲದೇವರಾದ ಸುಬ್ರಮಣ್ಯ ವಿಗ್ರಹ ಮುಂದೆ ಕಾಣಿಸಿದರೆ, ಆ ವಿಗ್ರಹದ ಹಿಂಭಾಗದಲ್ಲಿ ನರಸಿಂಹನ ಆಕೃತಿ ಇದೆ. ಹನುಮಂತನ ದೇವಾಲಯವೂ ಕುಮಾರಧಾರಾ ಪುಷ್ಕರಿಣಿಯೂ ಇರುವುದು, ಸುಬ್ಬ ರಾಯನ ಷಷ್ಠಿ ದಿನವಂದು ಜಾತ್ರೆಯ ದಿನ. ಸಾವಿರಾರು ಸಂಖ್ಯೆಯಲ್ಲಿ ಜನರು ಸೇರುತ್ತಾರೆ.

## 52. ರಾಮಗಿರಿ

ಬೆಂಗಳೂರಿನಿಂದ ರಾಮನಗರ 49 ಕಿ.ಮಿ. ರಾಮನಗರದಿಂದ 5 ಕಿ.ಮಿ.

ಇದರ ಬಳಿ ರಾಮಗಿರಿ ಬೆಟ್ಟವಿದೆ. ಇಲ್ಲಿ ರಾಮ, ರಾಮೇಶ್ವರ ದೇವಾಲಯಗಳಿವೆ. ಸ್ಥಳಪುರಾಣದಂತೆ ಇಲ್ಲಿ ಕಾಕಾಸುರನೆಂಬ ರಾಕ್ಷಸನಿದ್ದ. ಅವನನ್ನು ಶ್ರೀರಾಮ ಸಂಹರಿಸಿದ. ಆದುದರಿಂದ ಇಲ್ಲಿ ಕಾಕಾಸುರನ ಹಾವಳಿ ಇಲ್ಲವಾಗಿದುದರ ನೆನಪಾಗಿ ಈಗಲೂ ಬೆಟ್ಟದ ಮೇಲೆ ಕಾಗೆಗಳು ಹಾರುವುದಿಲ್ಲವೆಂದು ಪ್ರತೀತಿ.

## 53. ಅಬ್ಬೂರು

ಚೆನ್ನಪಟ್ಟಣಕ್ಕೆ 3 ಕಿ.ಮಿ. ಮೈಸೂರು ಬೆಂಗಳೂರು ರಸ್ತೆಯಲ್ಲಿ ಪ್ರಯಾಣಿಸಿ ರೈಲ್ವೆ ಹಳಿಯನ್ನು ದಾಟಿ, ಕೆರೆಯ ಏರಿಯ ಮೇಲೆ ಪ್ರಯಾಣಿಸಿ, ಮುಂದುವರಿಯಬೇಕು. ಇದು ಕಣ್ವನದಿಯ ತೀರದ ಪವಿತ್ರ ಕ್ಷೇತ್ರ. ಇಲ್ಲಿ ಹಸಿರುಗದ್ದೆ ತೋಟಗಳ ನಡುವೆ ರಾಜೇಂದ್ರ ತೀರ್ಥರ ಹಾಗೂ ಶ್ರೀ ಜಯಧ್ವಜತೀರ್ಥರ ಪರಂಪರೆಯಲ್ಲಿ ಬಂದ ಶ್ರೀ ಪುರುಷೋತ್ತಮ ತೀರ್ಥರ ಶಿಷ್ಯರಾದ ಶ್ರಿ ಬ್ರಹ್ಮಣ್ಯ ತೀರ್ಥರ ಮೂಲ ಬೃಂದಾವನವಿರುವುದು. ಇವರು ಮಹಾತಪಸ್ವಿಗಳು. ಹಾಗೂ ಸೂರ್ಯಾಂಶ ಸಂಭೂತರು. ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಲ್ಲಿ ಜಗನ್ಮಾನ್ಯರಾದ ಶ್ರೀ ವ್ಯಾಸರಾಯರನ್ನು ಜಗತ್ತಿಗೆ ಕೊಟ್ಟ ಮಹಾನುಭಾವರು. ತಂದೆ, ರಾಮಾಚಾರ್ಯ, ತಾಯಿ ಸೀತಮ್ಮ, ಲಕ್ಷ್ಮೀನರಸಿಂಹ ಪ್ರಸಾದದಿಂದ ಜನಿಸಿದ ಶಿಶು. ಅವರಿಗೆ ಪೂರ್ವಾಶ್ರಮದಲ್ಲಿ ಶ್ರೀ ನರಸಿಂಹಾಚಾರ್ಯರೆಂಬ ಹೆಸರಿತ್ತು. ಇವರೇ ಬ್ರಹ್ಮಣ್ಯತೀರ್ಥರು.

ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಲ್ಲಿ 9ನೆಯವರಾದ ಪುರುಷೋತ್ತಮ ತೀರ್ಥರಲ್ಲಿ ಇವರು ವ್ಯಾಸಂಗ ಮಾಡಿದರು. ಶ್ರಿಮಧ್ವಾಚಾರ್ಯ ಕರಾರ್ಚಿತ ಶ್ರೀಯೋಗಪಟ್ಟಿಕಾ ನರಸಿಂಹಾದಿ ದೇವರ ಅರ್ಚನೆ ಮಾಡಿ ಶಾಸ್ತ್ರ ಬೋಧನೆ ಮಾಡಿದರು. ಬುದ್ಧಿಯಲ್ಲಿ ಬೃಹಸ್ಪತಿ, ಭಕ್ತಿಯಲ್ಲಿ ಪ್ರಹ್ಲಾದ, ವಿರಕ್ತಿಯಲ್ಲಿ ಸನಕಾದಿಗಳಂತೆಯೂ ಶೋಭಿಸುತ್ತಾ ವಿರಾಜಮಾನರಾದರು. ಬದರಿಕಾಶ್ರಮಕ್ಕೆ ಕಾಲ್ನಡಿಗೆಯಲ್ಲಿ ಹೋಗಿ ಶ್ರೀನರನಾರಾಯಣನ ದರ್ಶನ ಪಡೆದ ಧೈರ್ಯಶಾಲಿಗಳು, ಸಿದ್ಧಪುರುಷರು. ಹಿಂದಿರುಗಿ ಬರುವಾಗ ಧಾರವಾಡ ಜಿಲ್ಲೆಯ ಸಾತೇನಹಳ್ಳಿಯಲ್ಲಿ ಶ್ರೀಪ್ರಾಣದೇವರನ್ನು ಪ್ರತಿಷ್ಠಾಪಿಸಿದರು. ಚಿಕ್ಕ ಗಂಗವಾಡಿ ಸಂಸ್ಥಾನದ ರಾಜನ ಮಗನಿಗೆ ಕತ್ತರಿಸಿದ್ದ ಕಾಲು ಪುನಃ ಪಡೆಯಲು ಇವರ ಪಾದಮೃತ್ತಿಕೆಯಿಂದ ಸಾಧ್ಯವಾಯಿತು. ಅದಕ್ಕಾಗಿ ಯಾವ ಕಾಣಿಕೆಯನ್ನೂ ಪಡೆಯದೆ ರಾಜಕೋಶಾಗಾರದಲ್ಲಿದ್ದ ಬ್ರಹ್ಮಕರಾರ್ಚಿತ ಶ್ರೀ ವಿಠಲ ಪ್ರತಿಮೆಯನ್ನು ಪಡೆದರು, ಇವರು ಮಹಾವಿರಕ್ತರು ಹಾಗೂ ವಾಕ್‌ಶುದ್ಧಿ ಮಂತ್ರಶುದ್ಧಿಯನ್ನೂ ಪಡೆದ ಮಹಾ ತಪಸ್ವಿಗಳು. ನಿಜವಾದ ಸನ್ಯಾಸಿಗಳು ಯಾವರೀತಿ ಶಾಸ್ತ್ರಕ್ರಮದಲ್ಲಿ ಜೀವಿಸಬೇಕೋ ಹಾಗೆ ಬೆಳಗಿನ ಜಾವವೇ ಎದ್ದು ಮೃತ್ತಿಕಾದಿ ಶೌಚಗಳ ನಂತರ, ಸ್ನಾನ, ಜಪ ತಪ ಪಾಠ ಪ್ರವಚನ, ನಂತರ ಸ್ನಾನ, ತಂತ್ರಸಾರೋಕ್ತಮದಲ್ಲಿ ದೇವತಾರ್ಚನೆ, ಇವುಗಳನ್ನು ನೆರವೇರಿಸುತ್ತಿದ್ದರು.

ಶ್ರೀರಾಜೇಂದ್ರ ತೀರ್ಥರ ಪರಂಪರೆಯಲ್ಲಿ ಪೀಠದಲ್ಲಿ ಶ್ರೀ ವ್ಯಾಸತೀರ್ಥರನ್ನು ಕುಳ್ಳಿರಿಸಿ ತಾವು ಅಬ್ಬೂರಿನಲ್ಲಿಯೇ ಬೃಂದಾವನಸ್ಥರಾದರು. ಅವರ ಪುಣ್ಯ ದಿನ ವೈಶಾಖ ಬಹುಳ ದ್ವಾದಶಿ ಸಂಸ್ಥಾನದ ಪೂಜೆಗೊಳಿಸುತ್ತಿರುವ ದೇವರುಗಳು ಶ್ರೀ ವ್ಯಾಸರಾಯ ಪ್ರತ್ಯಕ್ಷ ವೇಣುಗೋಪಾಲದೇವರು, ವ್ಯಾಸರಾಯ ಪೂಜಿತ ಲಕ್ಷ್ಮೀನರಸಿಂಹ, ಭೂವರಹಾದೇವರು

ರಾಮಚಂದ್ರ ಸೀತಾಲಕ್ಷ್ಮಣ ದೇವರು, ಮದ್ವಾಚಾರ್ಯ ಕರಾರ್ಚಿತ ಯೋಗಪಟ್ಟಿಕಾ ಲಕ್ಷ್ಮಿನರಸಿಂಹ, ಲಕ್ಷ್ಮಿದೇವಿ, ಸತ್ಯಭಾಮಾದೇವಿಯರು.

**ಪುರುಷೋತ್ತಮ ತೀರ್ಥರ ಗುಹೆ :** ಶ್ರೀ ಪುರುಷೋತ್ತಮ ತೀರ್ಥರು ಬ್ರಹ್ಮಣ್ಯ ತೀರ್ಥರ ಗುರುಗಳು. ಅಬ್ಬೂರಿನ ಗುಹೆಯೊಂದರಲ್ಲಿ ವಾಸಿಸುತ್ತಿದ್ದ ಶ್ರೀಗಳು ಅಬ್ಬೂರಿನ ಬಾಲಕನೊಬ್ಬನನ್ನು ಸಾಕಿ, ಸಲಹಿ ವಿದ್ಯಾಭ್ಯಾಸ ನೀಡಿದರು. ಅವರಿಗೆ ಆಶ್ರಯವನ್ನಿತ್ತು ಚೈತ್ರಶುದ್ಧ ಪ್ರತಿಪದೆಯಂದು ಅಬ್ಬೂರಿನಲ್ಲಿ ಸಶರೀರರಾಗಿ ಗುಹಾಪ್ರವೇಶ ಮಾಡಿದರು. ಅವರು ಇಂದಿಗೂ ಅಲ್ಲಿ ತಪಸ್ಸು ಮಾಡುತ್ತಿರುವರೆಂದು ಜನಶ್ರುತಿ ಇದೆ. ಇವರು ತಪಸ್ಸನ್ನಾಚರಿಸುತ್ತಿರುವ ಗುಹಾ ಅಬ್ಬೂರಿನ ಸಮೀಪದ ಗುಡ್ಡದಲ್ಲಿದೆ.

## 54. ಚಿಕ್ಕನ ಹಳ್ಳಿ :

ಅಬ್ಬೂರಿಗೆ 2 ಕಿ.ಮಿ. ಇಲ್ಲಿ 5 ಅಡಿ ಎತ್ತರದ ಆಂಜನೇಯನ ಗುಡಿ ಇದೆ. ಇದು ವ್ಯಾಸರಾಯ ಪ್ರತಿಷ್ಠೆ.

## 55. ಸಾತನೂರು :

ಕನಕಪುರದಿಂದ 35 ಕಿ.ಮಿ.

ಇಲ್ಲಿ ವಿಠಲರಾಯ ದೇವಸ್ಥಾನವಿದೆ. ವಿಠಲನ ವಿಗ್ರಹ ಸುಮಾರು 32 ಅಡಿ ಎರಡು ಕೈಗಳೂ ಸೊಂಟದಮೇಲಿದೆ. ಬಲಗೈಯಲ್ಲಿ ಶಂಖ ಕೊಳಲು ಇದೆ. ಎಡಗೈಯಲ್ಲಿ ಹಗ್ಗದಿಂದ ಬಾಯಿಕಟ್ಟಿದ ಚೀಲವಿದೆ. ಇನ್ನೊಂದು ಕೈಯಲ್ಲಿ ಕಮಲ, ಮತ್ತೊಂದರಲ್ಲಿ ಚಾಮರ ಮೂರ್ತಿಯ ಪಕ್ಕದಲ್ಲಿ ದೇವ ಪತ್ನಿಯರು, ಪ್ರಭಾವಳಿಯ ಮೇಲ್ಭಾಗದಲ್ಲಿ ಕಲಾಪೂರ್ಣವಾಗಿ ಕಡೆದಿರುವ ದಶಾವತಾರ ಶಿಲ್ಪ, ತಳಭಾಗದಲ್ಲಿ ಮಕರ ರೂಪನಾಗಿರುವ ವರುಣನ ಮೂರ್ತಿ ಇದಕ್ಕೆ ವಿಠಲ ಗೋಪಾಲಸ್ವಾಮಿ ಎಂದು ಹೆಸರು. ಫಾಲ್ಗುಣದಲ್ಲಿ ರಥೋತ್ಸವ.

## 56. ಮಾಗಡಿ : ತಿರುಮಲೆ

ಬೆಂಗಳೂರು 48 ಕಿ.ಮಿ. ಮಾಗಡಿಗೆ 2 ಕಿ.ಮಿ. ಮಾಂಡವ್ಯ ಕ್ಷೇತ್ರವೆಂದು ಪುರಾಣಗಳಲ್ಲಿ ಕರೆಯಲ್ಪಟ್ಟಿದೆ. ಮಾಂಡವ್ಯ ಕುಟಿ ಮಾಕುಟಿ-ಮಾಗುಡಿ ಮಾಗಡಿಯೆಂದು ಕರೆಯಲ್ಪಟ್ಟಿದೆ ಮಾಂಡವ್ಯ ಋಷಿಗಳಿಗೆ ತಪಸ್ಸಿನಲ್ಲಿ ದೇವರು ಸಾಲಿಗ್ರಾಮ ರೂಪದಲ್ಲಿ ದರ್ಶನ ಕೊಟ್ಟ ಸ್ಥಳ. ಈ ಸ್ಥಳ ಅಷ್ಟ ಶೈಲ, ಅಷ್ಟ ತೀರ್ಥಗಳಿರುವ ಕ್ಷೇತ್ರ, ಪವಿತ್ರ ಕಣ್ವನದಿಯಿಂದ ಪಾವನವಾಗಿದೆ. ತಿರುಪತಿ ಶ್ರೀನಿವಾಸ ದೇವರ ಆಜ್ಞಾನುಸಾರ ಮಾಂಡವ್ಯ ಋಷಿಗಳು ಸ್ವರ್ಣಾದ್ರಿ ಎಂದು ಹೆಸರಾಗಿದ್ದ ಈ ತಿರುಮಲೆಯಲ್ಲಿ ಪಶ್ಚಿಮ ವೆಂಕಟಾಚಲಪತಿಯನ್ನು ಸ್ಥಾಪಿಸಿದರು. ಈ ವಿಚಾರ ಬ್ರಹ್ಮಾಂಡ ಪುರಾಣದಲ್ಲಿ ವಿವರಿಸಲ್ಪಟ್ಟಿದೆ. ತಿರುಪತಿಗೆ ಹೋಗಲಾಗದವರು ಈ ದೇವರ ದರ್ಶನದಿಂದಲೇ ದೇವರ ಕೃಪೆಗೆ ಪಾತ್ರರಾಗುವರು. ಈ ದೇವಾಲಯವು ಚೋಳರ ಕಾಲದಲ್ಲಿ ರಚಿತವಾಗಿ ಹೊಯ್ಸಳರು, ವಿಜಯನಗರದ ಅರಸರು ಮತ್ತು ಮಾಗಡಿ ಕೆಂಪೇಗೌಡರ ಕಾಲದಲ್ಲಿ ವಿಸ್ತರಣೆಯಾಯಿತು.

ಸ್ವಾಮಿಗೆ ತಿರುವೆಂಗಡನಾಥ ಎಂಬ ಹೆಸರಿತ್ತು. ಟೀಪುವಿನ ಕಾಲದಿಂದೀಚೆಗೆ ಶ್ರೀರಂಗನಾಥ ಎಂಬ ಹೆಸರು ಬಂತು.

ಈ ದೇವಾಲಯಕ್ಕೆ ಪಶ್ಚಿಮ ಪೂರ್ವಗಳಲ್ಲಿ ರಾಜಗೋಪುರಗಳಿವೆ. ಈ ದೇವಾಲಯದ ಎಲ್ಲ ಪ್ರತಿಮೆಗಳೂ ಪೂರ್ವಾಭಿಮುಖವಾಗಿರುವುದು ಇಲ್ಲಿನ ವಿಶೇಷ. ರಂಗನಾಥನ ಪ್ರತಿಮೆ 4 ½ ಅಡಿ ಇದ್ದು ತುಂಬ ಚೆಲುವಾಗಿದೆ. ಈ ವಿಗ್ರಹದ ಮೇಲೆ ಎಷ್ಟು ನೀರನ್ನು ಅಭಿಶೇಖ ಮಾಡಿದರೂ ಪೀಠದ ಮೇಲೆ ಒಂದು ಹನಿಯೂ ನಿಲ್ಲುವುದಿಲ್ಲ ಭೂಮಿಯಲ್ಲಿ ಈ ನೀರು ಅಂತರ್ಗತವಾಗುವುದು, ಈ ದೇವರ ಹಿಂಭಾಗದ ಬಂಡೆಯ ಮೇಲೆ 7 ಹೆಡೆ ಸರ್ಪದ ಮೇಲೆ ಮಲಗಿರುವ ಭಂಗಿಯ 6 ಅಡಿ ಎತ್ತರವಿರುವ ರಂಗನಾಥನಿದ್ದಾನೆ. ಇದನ್ನು ಮಕ್ಕಳ ರಂಗ, ಬೆಳೆಯುವ ರಂಗ ಎನ್ನುವರು. ಇದು ದಿನೇ ದಿನೇ ಬೆಳೆಯುತ್ತಲಿದೆ ಎಂದು ಹೇಳುತ್ತಾರೆ.

ದೇವಾಲಯದ ಆವರಣದಲ್ಲಿ ಒಂದು ಕಡೆ ಶ್ರೀ ಆಂಜನೇಯ ಸ್ವಾಮಿ ಮತ್ತೊಂದೆಡೆ ಗರುಡರ ಮೂರ್ತಿಗಳಿವೆ. ದೇವಾಲಯದ ಮುಂದೆ ಸುಂದರ ಕಲ್ಯಾಣಿ ಇರುವುದು.

ದೇವಾಲಯದ ಬಲಭಾಗಕ್ಕೆ ಅನತಿದೂರದಲ್ಲಿ ಸ್ಥಂಬಗಿರಿ ಎಂಬ ಹೆಸರಾಂತ ಶ್ರೀ ನರಸಿಂಹಸ್ವಾಮಿ ಬೆಟ್ಟವಿದೆ. ಇಲ್ಲಿ ಯೋಗಾನರಸಿಂಹನಿದ್ದಾನೆ. ಇವನನ್ನು ಕಂಬದ ನರಸಿಂಹ ಸ್ವಾಮಿ ಎನ್ನುವರು.

ಇಲ್ಲಿಗೆ ಬೇಟಿಕೊಡುವ ಯಾತ್ರಿಕರ ತೊಂದರೆಯೆಂದರೆ ಅಗ್ಗದ ವಾಹನ ಸೌಕರ್ಯವಿಲ್ಲದಿರುವುದು. ಸ್ವಂತ ವಾಹನವಿರುವವರು ಸುಲಭವಾಗಿ ಇಲ್ಲಿಗೆ ತಲುಪಬಹುದು. ಇತರರು ಬಸ್‌ನಿಲ್ದಾಣದಿಂದ ಆಟೋಗಳಲ್ಲಿ ಪ್ರಯಾಣಿಸಬಹುದು.

## 57. ಸಾವನ ದುರ್ಗ :

ಬೆಂಗಳೂರಿನಿಂದ 62 ಕಿ.ಮಿ. ಕೆಲವೇ ಬಸ್ಸುಗಳು ಇಲ್ಲಿಗೆ ಬಂದುಹೋಗುತ್ತವೆ. ಮಾಗಡಿಯಿಂದ 10 ಕಿ.ಮಿ. ರಾಮನಗರದಿಂದ 15 ಕಿ.ಮಿ. ಇದನ್ನು ನೆಲಪಟ್ಟಣ, ಮಾಗಡಿ ಬೆಟ್ಟ ! ಕೃಷ್ಣರಾಜಗಿರಿ ಎನ್ನುವರು. ಮಾಗಡಿಗೆ ಆಗ್ನೇಯದಲ್ಲಿ ಬೆಟ್ಟ ಪ್ರದೇಶವೊಂದಿದೆ. ಇದು ಏಕಶಿಲೆಯ ಕಡಿದಾದ ಬೆಟ್ಟ. ಬುಡ 13 ಕಿ.ಮಿ. ಸುತ್ತಳತೆ ಇದ್ದು 4024 ಅಡಿ ಎತ್ತರವಿದೆ. ಅದಕ್ಕೆ 2 ಕೋಡುಗಳಿವೆ. ಅದನ್ನು ಕರಿಕೋಡು, ಬಿಳಿಕೋಡು ಎನ್ನುವರು. ಬೆಟ್ಟದ ಮೇಲೆ ಹೋಗಲು ಕಡಿದಾದ ದಾರಿಯಿದ್ದು ಹಳೆಯ ಅವಶೇಷಗಳು, ಕೊಳಗಳೂ ಇವೆ. ಜಕ್ಕರಾಯನ ದೊಣೆ ಎಂಬುದು ವಿಶಾಲವಾದ ಆರೆಯ ಮಧ್ಯದಲ್ಲಿ ಪ್ರಾಕೃತಿಕವಾಗಿ ಉಂಟಾಗಿರುವ ದೊಣೆ ಬೆಟ್ಟದ ಕೆಳಗಿನ ಬಯಲು ಪ್ರದೇಶದಲ್ಲಿ ಗವಿಯಲ್ಲಿ ಲಕ್ಷ್ಮಿನರಸಿಂಹ ದೇವರ ವಿಗ್ರಹವಿದೆ. ಈ ವಿಗ್ರಹವು ಅತ್ಯಂತ ಸುಂದರವಾಗಿದ್ದು ಎಲ್ಲರನ್ನು ಒಮ್ಮೆಲೆ ಆಕರ್ಷಿಸುತ್ತದೆ. ಬಂಡೆಗಲ್ಲಿನಿಂದ ಮೂಡಿ ಬಂದಂತೆ ಕಾಣಿಸುವುದು. ಪಾದದ ದರ್ಶನವೂ ನಮಗೆ ಆಗುತ್ತದೆ, ಲಕ್ಷ್ಮಿದೇವಿಯ ಗುಡಿ ಪಕ್ಕದಲ್ಲಿದೆ.

ಬಿಳಿ ಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಉತ್ತರಾಭಿಮುಖವಾಗಿ ಶ್ರೀ ಆಂಜನೇಯನನ್ನು ಕೆತ್ತಲಾಗಿದೆ. ಈ ದೇವರು ಗುಂಡಾಂಜನೇಯ. ಇದೊಂದು ಬಯಲು ದೇವಾಲಯ. ಈ ದೇವರು ನೆಲಪಟ್ಟಣದ ರಕ್ಷಕ ದೇವತೆಯಂತೆ. ರಾತ್ರಿ ನಗರ ಸಂಚಾರ ಮಾಡುತ್ತಾನೆಂದು ಜನರ ನಂಬಿಕೆ.

ಪ್ರಚಲಿತವಾಗಿರುವ ದಂತಕಥೆಯಂತೆ ಅಲ್ಲಿನ ಪಾಳೇಗಾರನ ಮಗಳಿಗೆ ಪಿಶಾಚಿ ಹಿಡಿದಿತ್ತು. ಯಾರಿಂದಲೂ ಬಿಡಿಸಲು ಆಗದಾಗ ಪಾಳೇಗಾರನಿಗೆ ಕನಸಿನಲ್ಲಿ ನೆಲಪಟ್ಟಣದ ಈ ಜಾಗದಲ್ಲಿ ದೇವರು ಉದ್ಭವಿಸಿರುವುದಾಗಿಯೂ ಅಲ್ಲಿ ಒಂದು ದೇವಾಲಯ ಕಟ್ಟಿಸಿದರೆ ಮಗಳಿಗೆ ಪಿಶಾಚ ಬಿಟ್ಟುಹೋಗುವುದೆಂದು ಹೇಳಿದಂತಾಯಿತು. ಮಗಳು 48ದಿನ ಪ್ರದಕ್ಷಿಣೆ ಮಾಡಿ ದೇವರಿಗೆ ಪೂಜೆಸಲ್ಲಿಸಿದಾಗ ಪಿಶಾಚಿ ಬಿಟ್ಟುಹೋಯಿತಂತೆ. ಆಗ ಪಾಳೇಗಾರನು ದೇವಾಲಯ ನಿರ್ಮಿಸಿ ಗುಹೆಯಲ್ಲಿದ್ದ ನರಸಿಂಹನ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿದ.

ಸಾವನದುರ್ಗ ಪ್ರಕೃತಿಯ ನೆಲೆವೀಡು. ಸಾಹಸಿಗಳೆಂದೇ ನಿರ್ಮಾಣವಾದ ಬೆಟ್ಟಸ್ಥಳ.

## 58. ಕನಕಪುರ :

ಬೆಂಗಳೂರು ಮಳವಳ್ಳಿ ರಸ್ತೆಯಲ್ಲಿ 50 ಕಿ.ಮಿ. ಅರ್ಕಾವತಿ ಬಲದಂಡೆಯಲ್ಲಿ ಈ ಊರಿದೆ. ಕಾಣಕಾರನಹಳ್ಳಿ ಎಂಬುದು ಈಗ ಕನಕಪುರವಾಗಿದೆ. ಕನಕಪುರ ಕೋಟೆಯಲ್ಲಿ ಶ್ರೀನಿವಾಸದೇವರ ಹಳೇ ದೇವಾಲಯವಿದೆ. ಸೇತುವೆ ಆಂಜನೇಯನ ಗುಡಿ ಮತ್ತೊಂದು ಪವಿತ್ರ ಸ್ಥಳ. ಇದರ ಜಾತ್ರೆ ಮಾರ್ಗಶಿರ ಕೃಷ್ಣ ಪಂಚಮಿ.

## 59. ಆನೆಕಲ್ಲು :

ಬೆಂಗಳೂರಿಗೆ ಆಗ್ನೇಯದಲ್ಲಿ 25 ಕಿ.ಮಿ. ಇಲ್ಲಿ ಹರಿಯುವ ಪವಿತ್ರ ನದಿ ದಕ್ಷಿಣ ಪಿನಾಕಿನಿ. ಇಲ್ಲಿಯೇ ಚೆನ್ನಕೇಶವ ದೇವಾಲಯವಿದೆ. ಈ ದೇವಾಲಯದ ಕಂಬಗಳ ಮೇಲೆ ದಶಾವತಾರ ದೃಶ್ಯಗಳನ್ನು ಕೆತ್ತಲಾಗಿದೆ. 14 ಕೈಗಳುಳ್ಳ ವಿಷ್ಣುವಿನ ವಿಗ್ರಹವುಳ್ಳ ದೇವಾಲಯ. ಅಮೃತ ಮಲ್ಲಿಕಾರ್ಜುನ ದೇವಾಲಯ ಈ ಸ್ಥಳದ ದೇವಾಲಯಗಳು.

## 60. ಗೋಕಟ್ಟೆ :

ಚೆನ್ನಪಟ್ಟಣಕ್ಕೂ ಅಬ್ಬೂರಿಗೂ ನಡುವೆ, ಪುರಂದರ ದಾಸರು ಕಟ್ಟಿಸಿದ ಕಟ್ಟೆಯೊಂದಿದೆ. ಇದು ದಾಸರ ಕಟ್ಟೆಯೆಂದು ಕರೆಸಿಕೊಂಡಿದ್ದು ತರುವಾಯ ದಾಸನಕಟ್ಟೆಯಾಯಿತು. ಅದು ಈಗ ಗೋಕಟ್ಟೆ ಎಂಬ ಹೆಸರನ್ನು ಪಡೆದಿದೆ.

## 61. ಚೆನ್ನಪಟ್ಟಣ :

ಮೈಸೂರು ಬೆಂಗಳೂರು ಹೆದ್ದಾರಿಯಲ್ಲಿದೆ. ಮೈಸೂರಿನಿಂದ 80 ಕಿ.ಮಿ. ಬೆಂಗಳೂರಿನಿಂದ 60 ಕಿ.ಮಿ. ಕೋಟೆ ವರದರಾಜ ಸ್ವಾಮಿ ಗುಡಿ ಇಲ್ಲಿಯ ದೊಡ್ಡ ದೇವಸ್ಥಾನ. ಇಲ್ಲಿನ ಶ್ರೀನಿವಾಸ ದೇವಾಲಯದ ಮೂರ್ತಿ ವ್ಯಾಸರಾಯ ಪ್ರತಿಷ್ಠೆ. ಇಲ್ಲಿ ವ್ಯಾಸರಾಯರ ಮಠವಿದೆ. ಈ ಮಠದ ಒಳಗೆ ಪೂಜಾಮಂಟಪವಿದ್ದು ಇದನ್ನು ಪುರಂದರ ದಾಸರು ತಮ್ಮ ಗುರುಗಳಾದ ವ್ಯಾಸರಾಯರಿಗೆ ಪೂಜಾಕಾರ್ಯಗಳನ್ನು ನೆರವೇರಿಸಲು ಕಟ್ಟಿಸಿಕೊಟ್ಟರು.

## 62. ಮಳೂರು :

ಚೆನ್ನಪಟ್ಟಣಕ್ಕೆ 3 ಕಿ.ಮಿ. ಮೈಸೂರು ಬೆಂಗಳೂರು ಹೆದ್ದಾರಿಯ ಪಕ್ಕ. ಇಲ್ಲಿ ರಾಮಾಪ್ರಮೇಯ ದೇವಾಲಯವಿದೆ. ಚೋಳರ ಕಾಲದಲ್ಲಿ ರಚಿತವಾಗಿರುವ ದೇವಾಲಯ ಇದು. ಪುರಾಣಗಳ ಪ್ರಕಾರ ಇದು ಸ್ವಯಂ ವ್ಯಕ್ತಮೂರ್ತಿ. ರಾಮನು ಪೂಜಿಸಿದ ದೇವರೆಂದು ವಿಶೇಷತೆ ಇದೆ. ಈ ದೇವರ ರಥೋತ್ಸವ ವೈಶಾಖ ಬಹುಳ ತ್ರಿಯೋದಶಿ. ಹಸ್ತನಕ್ಷತ್ರದಲ್ಲಿ ನಡೆಯುತ್ತದೆ. ಈ ದೇವರನ್ನು ಪುರಂದರದಾಸರು ಕೆಲವು ದೇವರನಾಮಗಳಿಂದ ಕೊಂಡಾಡಿದ್ದಾರೆ. ವ್ಯಾಸರಾಯರಾದರೋ ತಮ್ಮ 'ತರ್ಕಕಾಂಡವ' ವೆಂಬ ಪ್ರಸಿದ್ಧ ಗ್ರಂಥವನ್ನು ಬರೆದು ಅಪ್ರಮೇಯ ಸ್ವಾಮಿಗೆ ಅರ್ಪಿಸಿದ್ದ ಬಗ್ಗೆ ಐತಿಹ್ಯವಿದೆ. ಈ ದೇವಾಲಯದ ವಾಯುವ್ಯ ಮೂಲೆಯ ಚಿಕ್ಕಕೋಣೆಯೊಂದರಲ್ಲಿ ವ್ಯಾಸರಾಯ ಪ್ರತಿಷ್ಠಿತ ಸಾಲಿಗ್ರಾಮಶಿಲೆಯ ಅಂಬೆಗಾಲು ಕೃಷ್ಣನ ನಯನಮನೋಹರ ಮೂರ್ತಿಯನ್ನು ಕಾಣಬಹುದು. ಇದಲ್ಲದೆ ಈ ದೇವಾಲಯದ ಸಮೀಪದಲ್ಲೇ ಯಜ್ಞವಲ್ಕ್ಯ ತೀರ್ಥ ಹಾಗೂ ಕಣ್ವನದಿಯ ದಂಡೆಯಲ್ಲಿ ನರಸಿಂಹಸ್ವಾಮಿ ದೇವಾಲಯವಿದೆ. ವ್ಯಾಸರಾಯರು ಈ ಮೂರ್ತಿಯನ್ನು ಪೂಜಿಸುತ್ತಿದ್ದರೆಂದು ಹೇಳುವರು. ವೇಣುಗೋಪಾಲಸ್ವಾಮಿ ಹಾಗೂ ವ್ಯಾಸರಾಯಪ್ರತಿಷ್ಠಿತ ಪ್ರಾಣದೇವರ ಗುಡಿಗಳು ಸಮೀಪದಲ್ಲೇ ಇವೆ.

ಚೆನ್ನಪಟ್ಟಣವು ನಿರಪರಾಧಿ ಸಾರಂಗಧರನ ಕತ್ತರಿಸಿದ ಕಾಲು ಮೊಳೆದ ಸ್ಥಳವೆಂದು ಹೇಳುವರು. ಮೊಳೆತ + ಊರು ಮಳೆತೂರು - ಮಳೂರಾಗಿದೆ. ಈ ಸ್ಥಳವನ್ನು ಮಳೂರಿನ ಹತ್ತಿರ (2 ಕಿ.ಮಿ) ಇಂದಿಗೂ ನೋಡಬಹುದು. ಇದನ್ನು ಸಾರಂಗಧರನ ಗುಡ್ಡ ಎನ್ನುವರು.

## 63. ಇತರ ಸ್ಥಳಗಳು

| | | |
|---|---|---|
| 1. | ಎಲಹಂಕ | ವೇಣುಗೋಪಾಲ ಸ್ವಾಮಿ ಗುಡಿ |
| 2. | ಸುಗ್ಗನಹಳ್ಳಿ | ನರಸಿಂಹ ಪಾಲ್ಗುಣದಲ್ಲಿ ರಥೋತ್ಸವ |
| 3. | ನೆಲಮಂಗಲ | ಅಡಿಕೆ ಆಂಜನೇಯ |
| 4. | ವರ್ತೂರು (12 ಕಿ.ಮಿ.) | ಕೇಶವ |
| 5. | ವಸಂತಪುರ (8 ಕಿ.ಮಿ.) | ವಸಂತ ವಲ್ಲಭ ರಾಯಸ್ವಾಮಿ (5 ಅಡಿ) |
| 6. | ಹೊಸಕೋಟೆ (26 ಕಿ.ಮಿ.) | ವರದರಾಜ, ಶ್ರೀನಿವಾಸ, ಕೋಟೆ ಆಂಜನೇಯ ಅಗ್ರಹಾರದ ಆಂಜನೇಯ |
| 7. | ಕೆಂಗಲ್ಲು (ಚೆನ್ನಪಟ್ಟಣದ ಬಳಿ) ಬೆಂಗಳೂರು-ಮೈಸೂರು ರಸ್ತೆ, | ಆಂಜನೇಯ ವ್ಯಾಸರಾಜರು ಅಭಿಶೇಕ ಮಾಡಿದ ಸ್ಥಳ. |
| 8. | ಆವತಿ | ದೇವನಹಳ್ಳಿಯಿಂದ 4 ಕಿ.ಮಿ. ಕೇಶವ |

| | | |
|---|---|---|
| 9. | ದೇವನಹಳ್ಳಿ ವೇಣುಗೋಪಾಲಸ್ವಾಮಿ | ಬೆಂಗಳೂರಿನಿಂದ 29 ಕಿ.ಮಿ |
| 10. | ಸೊಂಡೇಕೊಪ್ಪ ಕೇಶವ | ನೆಲಮಂಗಲದ ಬಳಿ 245 A ಬಸ್ಸು |
| 11. | ದೊಡ್ಡ ಬಳ್ಳಾಪುರ | ಬೆಂಗಳೂರಿಗೆ 39 ಕಿ.ಮಿ.<br>ವೆಂಕಟರಮಣ ಸ್ವಾಮಿ |
| 12. | ಹುಳಿಮಾವು | ಪುರಾತನ ಗುಹಾಂತರ ಶಿವದೇವಾಲಯ<br>(200 x 100 ಅಡಿ)<br>ಮೀನಾಕ್ಷಿ ದೇವಾಲಯ<br>ಮುತ್ತುರಾಯನ ಗುಡಿ<br>ರಾಮದೇವರ ಗುಡಿ<br>ರಾಘವೇಂದ್ರರ ಬೃಂದಾವನ.<br>ಸಿಟಿಬಸ್ಸು : 369C, 369 |
| 13. | ಶಿವಗಂಗೆ | ನೆಲಮಂಗಲ ತಾಲ್ಲೂಕು<br>ನೆಲಮಂಗಲದಿಂದ 31 ಕಿ.ಮಿ<br>ಬೆಂಗಳೂರಿನಿಂದ 55 ಕಿ.ಮಿ<br>ಹೊನ್ನಾದೇವಿ ಗಂಗಾಧರೇಶ್ವರ ದೇವಾಲಯಗಳು<br>ಪಾತಾಳಗಂಗೆ, ಕೋಡುಗಲ್ಲಿನ ಬಸವಣ್ಣ |

# ಕೊಡಗು ಜಿಲ್ಲೆ

ಕಾವೇರಿ ಜಿಲ್ಲೆ ಎಂಬ ಖ್ಯಾತಿ ಇದಕ್ಕಿದೆ.

## 64. ಭಾಗಮಂಡಲ :

ಮಡಿಕೇರಿ ತಾಲ್ಲೂಕು

ಬೆಂಗಳೂರು 288 ಕಿ.ಮಿ.

ಮಡಿಕೇರಿ 46 ಕಿ.ಮಿ.

ಮೈಸೂರು 150 ಕಿ.ಮಿ.

ಕಾವೇರಿ ನದಿಯ ಉಗಮಸ್ಥಾನ ಈ ತಾಲ್ಲೂಕಿನ ಭಾಗಮಂಡಲದ ಬಳಿಯ ತಲಕಾವೇರಿಯಲ್ಲಿ. ಆಗಿರುವುದು. ಇಲ್ಲಿ ಭಗಂಡ ಮುನಿಗಳು ತಪಸ್ಸು ಮಾಡಿದ್ದರೆಂದು ಹೇಳುವರು, ಈ ಸ್ಥಳದಲ್ಲಿ ಕಾವೇರಿ ಮತ್ತು ಕನ್ನಿಕೆ ನದಿಗಳು ಸಂಗಮವಾಗಿರುತ್ತದೆ. ಇಲ್ಲಿ ಭಗಂಡೇಶ್ವರ ದೇವಾಲಯವಿದೆ.

## 65. ತಲಕಾವೇರಿ :

ಭಾಗಮಂಡಲಕ್ಕೆ 16 ಕಿಮಿ.

ಇದು ಕಾವೇರಿನದಿಯ ಮೂಲಸ್ಥಳ. ಇಲ್ಲಿ ಅಗಸ್ತ್ಯೇಶ್ವರ ಹಾಗೂ ಗಣಪತಿಯ ಗುಡಿಗಳಿವೆ. ಇಲ್ಲಿಯ ಚೌಕಾಕೃತಿಯ ಕೊಳದಿಂದ ಕಾವೇರಿ ಸಂಕ್ರಮಣದ ದಿನ ಉದ್ಭವಿಸುತ್ತಾಳೆ. ಇದಕ್ಕೆ ಕಾವೇರಿ ತೀರ್ಥೋದ್ಭವವೆನ್ನುವರು. ಇದರ ಬದಿಯಲ್ಲಿ 300 ಅಡಿ ಎತ್ತರವಿರುವ ಬ್ರಹ್ಮಗಿರಿ ಬೆಟ್ಟಗಳಿವೆ. ಈ ಸ್ಥಳಕ್ಕೆ ಪಾಂಡವರು ಬಂದಿದ್ದರೆಂದು ಪ್ರತೀತಿ. ಇದಕ್ಕೆ ಸಾಕ್ಷಿಯಾಗಿ ಭೀಮನ ಕಲ್ಲು ಎಂಬ ಭಾರೀಗಾತ್ರದ ಬಂಡೆಯನ್ನು ತೋರಿಸುವರು.

## 66. ಮಡಿಕೇರಿ :

ಬೆಂಗಳೂರಿನಿಂದ 263 ಕಿ.ಮಿ. ಇದನ್ನು 1681ರಲ್ಲಿ ಕಟ್ಟಲಾಯಿತು. ಇಲ್ಲಿ ರಾಜರ ಕೋಟೆ, ರಾಜರ ಗದ್ದುಗೆಗಳಿರುವುದಲ್ಲದೇ ಓಂಕಾರೇಶ್ವರ ದೇವಾಲಯವಿದೆ. ಮುಂದುಗಡೆ ರಚಿಸಿರುವ ಸರೋವರದಲ್ಲಿ ಮೀನುಗಳು ಅಧಿಕ ಪ್ರಮಾಣದಲ್ಲಿ ವಿಹರಿಸುತ್ತಿರುತ್ತವೆ. ರಾಜಾಸೀಟ್, ಅಬ್ಬಿ ಜಲಪಾತ ಈ ನಗರದ ಬಳಿಯ ಸುಂದರ ವಿಹಾರತಾಣಗಳು.

## 67. ಕುಂಜುಗ್ರಾಮ :

ವೀರಾಜಪೇಟೆಗೆ 20 ಕಿ.ಮಿ. ಈ ಗ್ರಾಮದ ಬಳಿ ಇಗ್ಗುತಪ್ಪ ಬೆಟ್ಟವಿದೆ. ಇದರ ಬದಿಯಲ್ಲಿ ಇಗ್ಗುತಪ್ಪ ದೇವರ ದೇವಾಲಯವಿದೆ. ಇಲ್ಲಿರುವ ದೇವರು ಇಗ್ಗುತಪ್ಪ ಎಂಬ ಹೆಸರಿನ ಸುಬ್ರಮಣ್ಯನೇ. ಇದಕ್ಕೆ ಪಾಡಿ ಸುಬ್ರಮಣ್ಯ ಎಂದೂ ಹೆಸರಿದೆ. ಕೊಡಗರಿಗೆ ತಲಕಾವೇರಿಯಂತೆ ಇದೂ ಕೂಡ ಯಾತ್ರಾಸ್ಥಳ.

## 68. ಇರ್ಪು :

ಬೆಂಗಳೂರು 272 ಕಿ.ಮಿ

ಶ್ರೀಮಂಗಲದಿಂದ 8 ಕಿ.ಮಿ.

ವಿರಾಜಪೇಟೆಯಿಂದ 48 ಕಿ.ಮಿ.

ಕುರ್ಚಿಗ್ರಾಮದಲ್ಲಿರುವ ಈ ಸ್ಥಳ ಪವಿತ್ರ ಸ್ಥಳವೆಂದು ಪರಿಗಣಿಸಲಾಗಿದೆ. ಇಲ್ಲಿ ಮರಳಿನ ಶಿವಲಿಂಗವಿರುವ ರಾಮೇಶ್ವರ ದೇವಾಲಯವಿರುವುದು. ಇದನ್ನು ಶ್ರೀರಾಮನೇ ಸ್ಥಾಪಿಸಿದ ನೆಂದು ಪ್ರತೀತಿ. ಮಹಾಶಿವರಾತ್ರಿಯಂದು ಇಲ್ಲಿ ಜಾತ್ರೆಯಾಗುವುದು. ಇಲ್ಲಿನ ಸಮೀಪದ ಬೆಟ್ಟದಿಂದ ಲಕ್ಷ್ಮಣತೀರ್ಥ ನದಿಯು 300 ಅಡಿಗಳಿಂದ ಧುಮುಕಿ ಸುಂದರ ಜಲಪಾತವನ್ನು ಸೃಷ್ಟಿಸಿದೆ. ಇದು ಯಾತ್ರಿಕರಿಗೊಂದು ಹೆಚ್ಚಿನ ಆಕರ್ಷಣೆ.

## 69. ಇತರ ಸ್ಥಳಗಳು :

1. ಬಲಮುರಿ : ಮಡಿಕೇರಿಯಿಂದ 19 ಕಿ.ಮಿ. ಇಲ್ಲಿ ಅಗಸ್ತ್ಯೇಶ್ವರ ದೇವಾಲಯವಿದೆ.
2. ಸುಂಟಿಕೊಪ್ಪ : ರಾಮದೇವಾಲಯ
3. ನಾಗರಹೊಳೆ : ಬೆಂಗಳೂರಿನಿಂದ 283 ಕಿ.ಮಿ. ವಿರಾಜಪೇಟೆಯಿಂದ 67 ಕಿ.ಮಿ. ಅಭಯಾರಣ್ಯವಿದೆ.
4. ನಿಸರ್ಗ ಧಾಮ : ಕುಶಾಲನಗರದ ಬಳಿ 3 ಕಿ.ಮಿ. ಸುಂದರ ವಿಹಾರಸ್ಥಳ.

# ಕೋಲಾರ ಜಿಲ್ಲೆ

## 70. ಕೋಲಾರ :

ಬೆಂಗಳೂರಿನಿಂದ 66 ಕಿ.ಮಿ. ಬೆಂಗಳೂರು ತಿರುಪತಿ ಮಾರ್ಗ. ಕುವಲಾಪುರವೆಂದು ಕರೆಯಲ್ಪಟ್ಟಿತ್ತು. ಇದು ಬಹಳ ಹಳೆಯ ಊರು. ಇಲ್ಲಿ ಕೆರೆಯ ಬಳಿ ಕೋಲಾರಮ್ಮ ಹಾಗೂ ಸೋಮೇಶ್ವರ ದೇವಾಲಯಗಳಿವೆ. ಸೋಮೇಶ್ವರ ದೇವಾಲಯವು ವಾಸ್ತುಶಿಲ್ಪದ ದೃಷ್ಠಿಯಿಂದ ಮುಖ್ಯ. ಈ ಪಟ್ಟಣದ ಪಡುವಣ ದಿಕ್ಕಿನಲ್ಲಿ ಜೋಡಿ ದೇವಾಲಯಗಳಿವೆ. ಇದರಲ್ಲಿ ಒಂದು ಶ್ರೀ ವೆಂಕಟರಮಣ ಸ್ವಾಮಿ ಆಲಯ. ಮತ್ತೊಂದು ನಂಜುಂಡೇಶ್ವರ ದೇವಾಲಯ. ಈ ದೇವಾಲಯಗಳಿಗೆ ಹೊಂದಿಕೊಂಡಂತೆ ಒಂದು ವಿಶಾಲವಾದ ಹೊಂಡವಿದೆ. ಇದಕ್ಕೆ ನಾಗರಕುಂಟೆ ಎನ್ನುವರು. ವೆಂಕಟರಮಣನ ದೇವಾಲಯದ ಪ್ರಾಚೀನತೆಯನ್ನು ಕುರಿತಂತೆ ಹೇಳುವುದಾದರೆ ಮುಚುಕುಂದ ಮಹರ್ಷಿಗಳು ಈ ಸ್ವಾಮಿಯನ್ನು ಪ್ರತಿಷ್ಠಾಪಿಸಿದರು. ಗರ್ಭಗುಡಿಯಲ್ಲಿರುವ ವೆಂಕಟರಮಣ ವಿಗ್ರಹವು 4 ಅಡಿ ಎತ್ತರವಾಗಿದ್ದು ಹೊಯ್ಸಳ ಶಿಲ್ಪದ ಮಾದರಿಯಲ್ಲಿ ಬಿಡಿಸಲಾಗಿದೆ. ಕೋಲಾರಮ್ಮನ ದೇವಾಲಯದಲ್ಲಿ ಹರಕೆ ಹೊತ್ತವರು ಬೆಳ್ಳಿ ಚೇಳು ಅರ್ಪಿಸುವ ಪದ್ಧತಿ ಇದೆ. ಕೋಲಾರದ ಹತ್ತಿರ ಪ್ರಾಕೃತಿಕ ಸೌಂದರ್ಯದ ಪ್ರದೇಶವೊಂದುಂಟು. ಇದು ಮೂರು ಕಿ.ಮಿ. ದೂರದಲ್ಲಿದ್ದು ಇದನ್ನು ಅಂತರ ಗಂಗೆ ಎನ್ನುವರು. ಇಲ್ಲಿಯ ಬೆಟ್ಟದ ಮೇಲೆ ಬಸವನ ಬಾಯಿಯಲ್ಲಿ ನೀರು ಸ್ವಾಭಾವಿಕವಾಗಿ ಬರುತ್ತದೆ. ಇದು ಪ್ರವಾಸಿಗಳಿಗೆ ಸುಂದರ ತಾಣ.

## 71. ಕುರುಡುಮಲೆ :

ಮುಳುಬಾಗಿಲಿನಿಂದ ಶ್ರೀನಿವಾಸ ಪುರ ರಸ್ತೆಯಲ್ಲಿ 4 ಕಿ.ಮಿ. ಕೌಂಡಿನ್ಯ ಋಷಿ ಆಶ್ರಮ ವಿದ್ದ ಜಾಗ. ಇಲ್ಲಿಯ ಸೋಮೇಶ್ವರ ದೇವಾಲಯ ಅತಿ ಸುಂದರ. ಇಲ್ಲಿ ಅತಿ ಪ್ರಾಚೀನ ವಾದ ಗಣಪತಿಯ ದೇವಾಲಯವಿದೆ. ಹೊಯ್ಸಳ ಶಿಲ್ಪದ ಪ್ರತೀಕವಾದ ಈ ಗಣಪತಿ 8 ½ ಅಡಿ ಎತ್ತರವಿದೆ. ಇದೊಂದು ತ್ರಿಭಂಗಿಯಲ್ಲಿರುವ ವಿಗ್ರಹವೆಂದು ವಿವರಣೆ ಕೊಡುತ್ತಾರೆ. ತಲೆಯ ಮೇಲಿಂದ ಹರಿಯುವ ಅಭಿಷೇಖದ ನೀರು ನಾಸಿಕದ ಮೇಲಿಂದ ನೇರವಾಗಿ ಪಾದದ ಮೇಲೆ ಹರಿಯುವುದು. ಭವ್ಯ ಹಾಗೂ ಸುಂದರ ವಿಗ್ರಹ. ಇಲ್ಲಿ 5 ಅಡಿ ಎತ್ತರದ ನವಿಲಿನ ಮೇಲೆ ಕುಳಿತಿರುವ ಕುಮಾರಸ್ವಾಮಿಯ ವಿಗ್ರಹವೂ ಇದೆ. ಪ್ರವಾಸಿಗರಿಗೆ ಸುಂದರ ತಾಣವಾದರೂ ಹೋಗಿಬರಲು ಖಾಸಗಿ ವಾಹನಗಳನ್ನು ಅವಲಂಬಿಸಬೇಕು.

## 72. ತಂಬಿಹಳ್ಳಿ :

ಬೆಂಗಳೂರು-ಮದ್ರಾಸ್ ರಾಷ್ಟ್ರೀಯ ಹೆದ್ದಾರಿಯ ಬದಿಯಲ್ಲಿ ಕೋಲಾರದಿಂದ 13 ಕಿ.ಮಿ. ಮಜ್ಜಿಗೆ ಹಳ್ಳಿ, ಮಾಧವಪುರವೆಂದು ಹೆಸರಿತ್ತು.

ಮದ್ವಾಚಾರ್ಯರ ನಾಲ್ಕು ಮಂದಿ ಶಿಷ್ಯರಲ್ಲಿ ಒಬ್ಬರಾದ ಮಾಧವತೀರ್ಥರ ಮೃತ್ತಿಕಾ ಬೃಂದಾವನವಿದೆ (1992) ಮುಮ್ಮಡಿ ಕೃಷ್ಣರಾಜ ಒಡೆಯರು ಕೇಶವ ಮಾಧವ ತೀರ್ಥರ ಕಾಲದಲ್ಲಿ ಮಜ್ಜಿಗೆ ಹಳ್ಳಿಯೆಂದು ನಾಮಕರಣಮಾಡಿದರು. ಪೂರ್ಣಯ್ಯನವರು ಈ ಮಠಕ್ಕೆ ದರ್ಬಾರ್ ಹಾಲ್ ಕಟ್ಟಿಸಿಕೊಟ್ಟು ಬೇಕಾದ ದಾನದತ್ತಿಗಳನ್ನು ಕೊಡಿಸಿಕೊಟ್ಟಿದ್ದರು. ಪೂರ್ಣ ಶಿಥಿಲವಾದ ದೇವಾಲಯದಲ್ಲಿ ವ್ಯಾಸರಾಯ ಪ್ರತಿಷ್ಠಿತ ಪ್ರಾಣದೇವರ ದೇವಾಲಯ ನಿರ್ಮಾಣವಾಗಿದೆ. ಇದಲ್ಲದೆ ಶ್ರೀನಿವಾಸ ಮಾಧವ ತೀರ್ಥರ ಕಾಲದಲ್ಲಿದ್ದ ಅಂಬಾರಿ ಆನೆ ಮೃತವಾದಾಗ ಅದನ್ನು ಶ್ರೀಮಠದ ಆವರಣದಲ್ಲಿ ಸಮಾಧಿ ಮಾಡಿರುವರು. ಆ ಸ್ಥಳವನ್ನು ಈಗ ಆನೆ ಮಂಟಪವೆಂದು ಕರೆಯುತ್ತಾರೆ. ತಂಬಳ್ಳಿ ಪ್ರಾಣದೇವರು ಜಾಗೃತ ದೇವರು. ಜೇನುತುಪ್ಪ ಅಭಿಶೇಖ ಮಾಡಿಸಿದ ಭಕ್ತಾದಿಗಳ ಎಲ್ಲ ಬಗೆಯ ಇಷ್ಟಾರ್ಥಗಳೂ ಪೂರೈಸಲ್ಪಡುತ್ತವೆ ಎಂಬುದು ಜನಜನಿತವಾಗಿರುವ ವಿಚಾರ. ಇದಲ್ಲದೆ ವಿಜಯಮಾಧವ ತೀರ್ಥರಿಗೆ ಶ್ರೀರಾಮ ಪ್ರತ್ಯಕ್ಷವಾದ ಸ್ಥಳವನ್ನು ಮಠದಲ್ಲಿ ಕಾಣಬಹುದು. ಈಗ ಮಠಾಧೀಶರಾಗಿರುವ ಪ್ರಸನ್ನಶೂರ ಮಾಧವ ತೀರ್ಥರ ಮುಂದಾಳುತ್ವದಲ್ಲಿ ಶ್ರೀಮಠ ಬಹಳ ಅಭಿವೃದ್ಧಿ ದೆಸೆಯನ್ನು ಹೊಂದುತ್ತಿದೆ. ಸಂಸ್ಥಾನದ ಮೂಲಪ್ರತಿಮಾ ಮದ್ವಾಚಾರ್ಯ ಕರಾರ್ಚಿತ ಶ್ರೀ ವೀರ ರಾಮಚಂದ್ರದೇವರು. ಇತರ ಪ್ರಸಿದ್ಧ ಪೂಜಾವಿಗ್ರಹಗಳೆಂದರೆ ಕಡೆಗೋಲು ಕೃಷ್ಣ, ದಿಗ್ವಿಜಯ ರಾಮದೇವರು, ಲಕ್ಷ್ಮಿನರಸಿಂಹ ದೇವರು, ಪ್ರಸನ್ನರಾಮ, ಯೋಗಾನರಸಿಂಹ, ಪಂಚಮುಖಿ ಆಂಜನೇಯ ಹಾಗೂ ಶ್ರೀವೇದವ್ಯಾಸರು.

ತಿರುಪತಿಗೆ ಹೋಗುವ ಹೆದ್ದಾರಿಯಲ್ಲಿರುವುದರಿಂದ ಯಾತ್ರಾರ್ಥಿಗಳು ಮಧ್ಯಪ್ರಯಾಣ ದಲ್ಲಿ ತಂಗಲು ಬೇಕಾದಷ್ಟು ಅನುಕೂಲವಿದೆ. ಬಸ್ಸುಗಳ ಸೌಕರ್ಯ ತುಂಬಾ ಚೆನ್ನಾಗಿದೆ.

Phone : 36103, 372337

## 73. ವಿದುರಾಶ್ವತ್ಥ :

ಗೋರಿಬಿದನೂರಿನಿಂದ 6 ಕಿ.ಮಿ

ಉತ್ತರ ಪಿನಾಕಿನಿ ಎಡದಂಡೆಯಲ್ಲಿ ದೊಡ್ಡಕುರಗೋಡು ಸಮೀಪ ವಿದುರ ನೆಟ್ಟ ಬೃಹತ್ ಅಶ್ವತ್ಥ ವೃಕ್ಷವಿದೆ. ನವಗ್ರಹ ಹಾಗೂ ವೆಂಕಟರಮಣನ ಗುಡಿಗಳೂ ಇವೆ. ಸಂತಾನ ಪ್ರಾಪ್ತಿಗಾಗಿ ನಾಗರಕಲ್ಲಿನ ಪ್ರತಿಷ್ಠೆ ಹಾಗೂ ಸೇವೆ ನಿರಂತರವಾಗಿ ನಡೆಯುತ್ತಿರುತ್ತದೆ. ಚೈತ್ರಶುದ್ಧ ಪೂರ್ಣಿಮ ರಥೋತ್ಸವ.

## 74. ಬಂಗಾರು ತಿರುಪತಿ :

ಬೆಂಗಳೂರು 112 ಕಿ.ಮಿ. ಕೆಜಿಎಫ್‌ನಿಂದ 12 ಕಿ.ಮಿ. ಮುಳುಬಾಗಿಲಿನಿಂದ 14 ಕಿ.ಮಿ.

ಕೆ.ಜಿ.ಎಫ್. ಮುಳುಬಾಗಿಲು ರಸ್ತೆಯ ನಡುವೆ ಇರುವ ಈ ಕ್ಷೇತ್ರವು ತಿರುಪತಿ ಯಂತೆಯೇ ಶ್ರೀನಿವಾಸನ ಆವಾಸಸ್ಥಾನ. ಈ ಗುಡಿ 40 ಮೀಟರ್ ಎತ್ತರದ ಗುಡ್ಡದ ಮೇಲೆ ಇರುವುದು. ಕಿಂಡಿಯ ಮೂಲಕ ದೇವರ ದರ್ಶನ. ಮತ್ತೊಂದು ಚಿಕ್ಕ ಗುಡ್ಡದ ಮೇಲೆ ಪದ್ಮಾವತಿಯ ಗುಡಿ ಇರುವುದು. ಇಲ್ಲಿ ಭೃಗುಋಷಿಗಳು ತಪಸ್ಸನ್ನಾಚರಿಸಿದರೆಂದು ಪ್ರತೀತಿ. ಒಳ್ಳೆ ಸಾರಿಗೆ ವ್ಯವಸ್ಥೆ ಇದೆ. ಇದನ್ನು ದಕ್ಷಿಣ ಕಾಶಿ ಎನ್ನುವರು.

## 75. ಮುಳುಬಾಗಿಲು :

ಕೋಲಾರದಿಂದ 30ಕಿ.ಮಿ. ಬೆಂಗಳೂರು 100 ಕಿ.ಮಿ.

ಇದನ್ನು ಶತಕವಾಟ ಪುರಿ, ಮೂಡಲಬಾಗಿಲು ಎಂದು ನಾನಾ ರೀತಿಯಾಗಿ ಕರೆಯುತ್ತಾರೆ.

ಊರಿನ ಮಧ್ಯಭಾಗದಲ್ಲಿ ಬಸ್ ನಿಲ್ದಾಣದ ಪಕ್ಕದಲ್ಲಿ 5000 ಸಾವಿರ ವರ್ಷಗಳಷ್ಟು ಹಳೆಯದಾದ 10ಅಡಿ ಎತ್ತರದ ಆಂಜನೇಯ ಸ್ವಾಮಿಯ ಭವ್ಯ ದೇವಾಲಯವಿದೆ. ಮಹಾ ಭಾರತ ಯುದ್ಧವಾದ ಮೇಲೆ ಶ್ರೀಕೃಷ್ಣನ ಆಜ್ಞೆಯಂತೆ ಅರ್ಜುನನ ರಥದ ಮೇಲಿದ್ದ ಹನುಮ ಧ್ವಜವನ್ನು ತೆಗೆದುಕೊಂಡು ಇಲ್ಲಿ ಪ್ರತಿಷ್ಠೆಮಾಡಲಾಗಿದೆ. ಇದು ಪೌರಾಣಿಕವಾಗಿ ಅರ್ಜುನ ಪ್ರತಿಷ್ಠೆ. ಕೃಷ್ಣದೇವರಾಯ ಕಾಲದಲ್ಲಿ ಇದು ಜೀರ್ಣೋದ್ಧಾರವಾಯಿತು. ಈ ದೇವರಿಗೆ ತಾಳೆ ಹೂವಿನಿಂದ ದಿನಾ ಪೂಜೆಯಾಗಬೇಕೆಂಬ ನಿಯಮವಿದೆ. ಇದೇ ದೇವಾಲಯದ ಆವರಣದಲ್ಲಿ ಭೃಗುಋಷಿಗಳಿಂದ ಪ್ರತಿಸ್ಥಾಪಿಸಲ್ಪಟ್ಟ ಶ್ರೀ ವೆಂಕಟರಮಣ ಸ್ವಾಮಿಯ ಗುಡಿಯೂ ಇಲ್ಲಿದೆ . ಊರಿನಮತ್ತೊಂದು ಭಾಗದಲ್ಲಿ ಮಹಾಮಹಿಮಾನ್ವಿತ ಸ್ವಯಂವ್ಯಕ್ತ ಸೋಮೇಶ್ವರನ ಗುಡಿ ಇರುವುದು. ಸ್ಥಳ ಪುರಾಣದಂತೆ ಇಲ್ಲಿ ಸೇವೆಮಾಡಿದ ಭಕ್ತರಿಗೆ ಕಣ್ಣು ಬಂದಿತೆಂದೂ ಅಂಥಹ ಮಹಿಮೆಗಳು ಆಗಾಗ್ಗೆ ನಡೆಯುತ್ತಿವೆ. ಎಂದು ಹೇಳು ವರು. ಇಲ್ಲಿಯ ಅಗಸ್ತ್ಯ ಪ್ರತಿಷ್ಠಿತ ಅಗಸ್ತೇಶ್ವರ ದೇವಾಲಯವೂ ಸಂದರ್ಶನಾರ್ಹ.

## 76. ನರಸಿಂಹತೀರ್ಥ :

ಮುಳುಬಾಗಿಲಿನಿಂದ 2 ಕಿ. ಮಿ. ದೂರದಲ್ಲಿ ನರಸಿಂಹತೀರ್ಥವೆಂಬ ಪವಿತ್ರ ಸ್ಥಳವಿದೆ. ಇದು ಬೆಂಗಳೂರು – ಚೆನ್ನೈ ರಾಷ್ಟ್ರೀಯ ಹೆದ್ದಾರಿಗೆ ಹೊಂದಿಕೊಡಿರುವ ಪ್ರಕೃತಿ ರಮ್ಯ ಸ್ಥಳ. ಇಲ್ಲಿ ಜಗದ್ಗುರು ಶ್ರೀ ಮಧ್ವಾಚಾರ್ಯರ ಪ್ರಮುಖ ಹಾಗೂ ಪ್ರಥಮ ಶಿಷ್ಯರಾದ ಶ್ರೀ ಪದ್ಮನಾಭತೀರ್ಥರಿಂದ ಮುನ್ನಡೆದುಕೊಂಡು ಬಂದ ಶ್ರೀ ಮಠವಿದೆ. ಇದೇ ಶ್ರೀ ಶ್ರೀಪಾದ ರಾಜ ಮಠ. ಇಲ್ಲಿ 1412 ರಿಂದ 1504ರ ವರೆಗೆ ಶ್ರೀ ಮಧ್ವಾಚಾರ್ಯರ ಪ್ರಥಮ ಶಿಷ್ಯರೆನಿಸಿದ ಶ್ರೀ ಪದ್ಮನಾಭ ತೀರ್ಥರ ಪರಂಪರೆಯಲ್ಲಿ 9ನೆಯ ಶ್ರೀ ಮಠದ ಯತಿ ರಾಜ್ಯರಾಗಿದ್ದ ಶ್ರೀ ಪಾದರಾಜರ ಮೂಲ ಬೃಂದಾವನವಿದೆ. ಸಶರೀರವಾಗಿ ಬೃಂದಾವನವನ್ನು ಪ್ರವೇಶಿಸಿದವರಲ್ಲಿ ಇವರೇ ಮೊದಲಿಗರು. ಇವರ ಆರಾಧನೆ ಚೈತ್ರಶುದ್ಧ ದಶಮಿ. ಶ್ರೀ ವಾಸುದೇವನ ಪರಮಭಕ್ತ ಧ್ರುವರಾಜರೇ ಧರೆಯಲ್ಲಿ ಅವತರಿಸಿದ ಇವರೇ ಶ್ರೀ ಶ್ರೀಪಾದರಾಜರು. ಅವರು ತಮ್ಮ 98 ವರ್ಷಗಳ ದೀರ್ಘಕಾಲದಲ್ಲ ಸುಜ್ಞಾನದ ಹೊಂಬೆಳಕನ್ನು ಎಲ್ಲೆಡೆ ಪಸರಿಸಿದರು. ಶ್ರೀರಂಗ ಕ್ಷೇತ್ರದಿಂದ ಬಂದು ಮುಳುಬಾಗಿಲಿನ ಈ ನೆಲವನ್ನು ತಮ್ಮ ತಪೋಭೂಮಿಯಾಗಿ

ಸ್ವೀಕರಿಸಿದ್ದು ಈ ನಾಡಿನ ಭಾಗ್ಯ. ಧರ್ಮಶಾಸ್ತ್ರ-ವೇದಾಂತ-ಉಪನಿಷತ್ತುಗಳ ಸಾರಸರ್ವಸ್ವ ವನ್ನು ಶ್ರೀಸಾಮಾನ್ಯರಿಗೂ ತಿಳಿಯುವಂತೆ ಸರಳ ಆಡುಭಾಷೆ ಕನ್ನಡದಲ್ಲಿ ದೇವರನಾಮಗಳನ್ನು ರಚಿಸಿ ಶ್ರೀರಂಗವಿಠಲನಿಗೆ ಭಕ್ತಿಯಿಂದ ಅರ್ಪಿಸಿ ಹರಿದಾಸ ಪರಂಪರೆಯ ಹರಿಕಾರರಾದರು. ಇವರು ವ್ಯಾಸರಾಯರಂತಹ ಅಮೂಲ್ಯ ನಿಧಿಯನ್ನೂ ಜಗತ್ತಿಗೆ ನೀಡಿದ ಮಹಾ ಯತಿ ಶ್ರೇಷ್ಠರು. ರಾಜರ ರಾಜರು 'ವಾಗ್ವಜ್ರ' ಎಂಬ ಮೇರುಕೃತಿ ರಚಿಸಿ ಮದ್ವ ಸಿದ್ಧಾಂತವನ್ನು ಇನ್ನಷ್ಟು ಸುಭದ್ರಗೊಳಿಸಿದವರು. ದ್ವೈತ ವೇದಾಂತ ವಿಶ್ವವಿದ್ಯಾನಿಲಯದಲ್ಲಿ ಕುಲಪತಿಗಳಾಗಿ 10000ಕ್ಕೂ ಮೀರಿದ ವಿದ್ಯಾರ್ಥಿಗಳಿಗೆ ನಿರಂತರ ಸಚ್ಛಾಸ್ತ್ರ ಪಾಠ ಪ್ರವಚನಾದಿಗಳಿಗೆ ಅವಕಾಶ ಮಾಡಿಕೊಟ್ಟು ಮದ್ವಸಿದ್ಧಾಂತ ಕೋಟೆ ಸುಭದ್ರವಾಗಿ ಮಾಡಿದವರು.

ಈ ಕ್ಷೇತ್ರದಲ್ಲಿ ಕಾಣುವ ಮಹತ್ವದ ಬೃಂದಾವನಗಳೆಂದರೆ ಶ್ರೀ ಪದ್ಮನಾಭತೀರ್ಥರ ಮೃತ್ತಿಕಾ ಬೃಂದಾವನ ಹಾಗೂ ಶ್ರೀ ಶ್ರೀ ಪಾದರಾಯ ಮೂಲ ಬೃಂದಾವನಗಳು ಇದರ ಜೊತೆಗೆ ವ್ಯಾಸರಾಯ ಪ್ರತಿಷ್ಠಿತ ಹನುಮಂತ ದೇವರ ಮತ್ತು ಅಕ್ಷೋಭ್ಯತೀರ್ಥರು ಹೆಬ್ಬಂಡೆಯ ಮೇಲೆ ಪ್ರಕಟಗೊಳಿಸಿದ ಶ್ರೀ ಯೋಗಾನರಸಿಂಹ ದೇವರು. ಈ ದೇವರನ್ನು ಶ್ರೀ ಅಕ್ಷೋಭ್ಯತೀರ್ಥರು ಪವಿತ್ರ ಅಂಗಾರದಲ್ಲಿ ಬಂಡೆಗಲ್ಲಿನ ಮೇಲೆ ಬರೆದು ಆಹ್ವಾನಿಸಿ ಧ್ಯಾನಿಸಿ ಶ್ರೀ ವಿದ್ಯಾರಣ್ಯರೊಡನೆ 'ತತ್ವಮಸಿ' ಕುರಿತು ನಡೆಯುವ ವಾಕ್ಯಾರ್ಥದಲ್ಲಿ ಜಯವಾಗಲೆಂದು ಪ್ರಾರ್ಥಿಸಿ ಪೂಜಿಸಿದ ದೇವರು. ಶ್ರೀ ಯೋಗಪಟ್ಟಿಕಾ ಚತುರ್ಹಸ್ತ ನರಸಿಂಹ ದೇವಾಲಯದ ಹಿಂಭಾಗದಲ್ಲಿರುವ ಗುಹೆ ಶ್ರೀ ವ್ಯಾಸರಾಯರ ತಪಸ್ಸಿನ ಪುಣ್ಯತಾಣ. ಶ್ರೀ ವ್ಯಾಸರಾಯರು ಅಲ್ಲಿ ಒಮ್ಮೆ ಇದ್ದಾಗ ಅವರಿಗೆ ಒಂದು ಘಟಸರ್ಪವು ಸುತ್ತಿಕೊಂಡಿ ತಂತೆ. ಆಗ ಶ್ರೀಪಾದರಾಯರು ಅಲ್ಲಿಗೆ ಬಂದು ಆ ಹಾವಿನ ಜೊತೆ ಸರ್ಪಭಾಷೆ ಯಲ್ಲಿ ಮಾತನಾಡಿ ಸೂಕ್ತ ಹಾಗೂ ಸಮಂಜಸವಾದ ಉತ್ತರವನ್ನಿತ್ತು ಶ್ರೀ ವ್ಯಾಸರಾಯರನ್ನು ಬಿಡಿಸಿಕೊಂಡ ಸ್ಥಳ. ಆ ಗುಹೆಯನ್ನು ಯಾತ್ರಿಕರು ಇಂದಿಗೂ ಸಂದರ್ಶಿಸಬಹುದು.

ಶ್ರೀ ಪಾದಡರಾಯರಿಗೆ ಪರ್ಗಪುರದ ಸಮೀಪ ಭೀಮರಥಿತೀರದಲ್ಲಿ ಪಾಂಡವವಂಶಜ ನಾದ ಕ್ಷೇಮಕಾಂತ ಮಹಾರಾಜನಿಂದ ಭೂಸ್ಥಾಪಿಸತವಾಗಿದ್ದ ದೇವರ ಪೆಟ್ಟಿಗೆ ದೊರಕಿತಂತೆ. ಅದರಲ್ಲಿ 2 ಸಂಪುಟವಿತ್ತೆಂದೂ ಶ್ರೀಪಾದರಾಜರಿಗೆ ಒಂದನ್ನು ತೆರೆಯಲು ಸಾಧ್ಯವಾಯಿತೆಂದು ತಿಳಿದುಬರುತ್ತದೆ. ಅದರಲ್ಲಿ ಶ್ರೀ ರುಕ್ಮಿಣಿ ಸತ್ಯಭಾಮ ಸಮೇತ ಶ್ರೀ ರಂಗವಿಠಲಮೂರ್ತಿ ಹಾಗೂ ಜಾಂಬವತಿ ಪೂಜಿತ ಶ್ರೀಗೋಪಾಲಕೃಷ್ಣನ ಪ್ರತಿಮೆಗಳು ಇದ್ದುವಂತೆ. ಅವುಗಳನ್ನು ಶ್ರೀಪಾದರಾಯರು ಆನಂದಭರಿತರಾಗಿ ಪೂಜಿಸಿ ಮುಳುಬಾಗಿಲಿಗೆ ತಂದರಂತೆ. ಶ್ರೀ ವ್ಯಾಸರಾಯರನ್ನು ಪೂಜೆ ಮಾಡಲು ಹೇಳಿ ಪೂಜೆ ಮಾಡಿಸಿದಾಗ ಶ್ರೀ ಗೋಪಾಲಕೃಷ್ಣನು ನರ್ತನಮಾಡಿದನಂತೆ. ಅದಕ್ಕೆ ಸರಿಯಾಗಿ ಶ್ರೀ ವ್ಯಾಸರಾಜರು ತಾಳಹಾಕಿ ಹಾಡಿದರಂತೆ. ಆ ದೃಶ್ಯವನ್ನು ಶ್ರೀ ಶ್ರೀಪಾದರಾಜರು ಸ್ನಾನದ ಮನೆಯ ಕಿಟಕಿಯಿಂದ ನೋಡಿ ಆನಂದಭರಿತ ರಾದರಂತೆ. ಆಗಲೇ ಶ್ರೀ ವ್ಯಾಸರಾಯರಿಗೆ ಶ್ರೀ ಗೋಪಾಲಕೃಷ್ಣನನ್ನು ಕೊಟ್ಟು ಸಂಚಾರಕ್ಕೆ ಕಳುಹಿಸಿದರಂತೆ. ಈಗ ಶ್ರೀ ಮಠದಲ್ಲಿ ಶ್ರೀರಂಗವಿಠಲ ಹಾಗೂ ಶ್ರೀ ಗೋಪೀನಾಥ ದೇವರುಗಳನ್ನು ಕಾಣಬಹುದು. ಅಲ್ಲದೆ ಶ್ರೀ ವ್ಯಾಸರಾಯ ಪ್ರತಿಷ್ಠಿತ ಹನುಮಂತ ದೇವರು ಇದ್ದಾರೆ.

**ನರಸಿಂಹತೀರ್ಥ ಸರೋವರ :** ಇದ ಶ್ರೀ ಅಕ್ಷೋಭ್ಯ ತೀರ್ಥದಿಂದ ರಚಿಸಲ್ಪಟ್ಟ ಪ್ರಸಿದ್ಧ ತೀರ್ಥ. ಇಲ್ಲಿ ಒಮ್ಮೆ ಶ್ರೀಪಾದರಾಯರು ಮಠದಲ್ಲಿ ವಿಶೇಷ ಪೂಜಾದಿಗಳನ್ನು ನಡೆಸಿ

ನರಸಿಂಹತೀರ್ಥದ ಈಶಾನ್ಯ ಮೂಲೆಯಲ್ಲಿ ಜಾಹ್ನವಿಯನ್ನು ಪ್ರಾರ್ಥಿಸಿದರು. ಇದ್ದಕ್ಕಿದ್ದಂತೆ ಸರ್ವರೂ ಕಾಣುವಂತೆ ಶ್ವೇತವರ್ಣ ವಿಶಿಷ್ಟರಾದ ಸ್ವಚ್ಛೋದರವು ಈಶಾನ್ಯಮೂಲೆಯಿಂದ ಬುಳಬುಳನೆ ಹರಿದು ಬರಲಾರಂಭಿಸಿತು ಮತ್ತು ಸರೋವರವು ತುಂಬಿ ತುಳುಕಿತು. ಇಂದಿಗೂ ಅದಕ್ಕಾಗಿ ಭಾವುಕರು ನೃಸಿಂಹ ತೀರ್ಥದ ಈಶಾನ್ಯಭಾಗದಲ್ಲಿ ಸ್ನಾನಮಾಡಿ ಗಂಗಾಸ್ನಾನ ಮಾಡಿದೆವೆಂದು ತೃಪ್ತಿಪಟ್ಟುಕೊಳ್ಳುತ್ತಾರೆ. ಶ್ರೀಗಳವರ ನಿತ್ಯ ಪೂಜಾಭಿಷೇಕಗಳಿಗೆ ಗಂಗಾಸ್ನಾನ ಸನ್ನಿಧಾನ ಅಂದಿನಿಂದ ದೊರೆಯಿತು. ಇದು ಇಂದಿಗೂ ಸರ್ವರೋಗ, ಸರ್ವದೋಷ, ಸರ್ವ ಪಾಪಪರಿಹಾರ ಮಾಡುತ್ತಾ ಸದಾ ಜಲಸಂಪತ್ತಿನಿಂದ ಕಂಗೊಳಿಸುತ್ತಿರುವುದು. ಈ ಮಠದ ಇತರ ಮುಖ್ಯ ಕೇಂದ್ರಗಳೆಂದರೆ ಬೆಂಗಳೂರು, ಶ್ರೀರಂಗ, ಈರೋಡು, ಹೊಸೂರು, ನವಪಾಶಣ,, ಪೆನುಗೊಂಡ, ಶ್ರೀರಂಗಪಟ್ಟಣ ಹಾಗೂ ಪುಂಗನೂರುಗಳು.

ಪ್ರಸ್ತುತ ಪೀಠಾಧಿಪತಿಗಳಾದ ಶ್ರೀ ಶ್ರೀ ವಿಜ್ಞಾನನಿಧಿ ಶ್ರೀಪಾದಂಗಳವರ ನೇತೃತ್ವದಲ್ಲಿ ನವನಿರ್ಮಾಣ ಜೀರ್ಣೋದ್ಧಾರ ಕಾರ್ಯ ಆರಂಭಿಸಿದ್ದು ಶ್ರೀರಂಗವಿಠಲ ಮಹಾದ್ವಾರ, ಶ್ರೀದೈವರಾಜ ಸಭಾಂಗಣ, ಶ್ರೀ ಪದ್ಮನಾಭತೀರ್ಥ ಸಭಾಮಂದಿರ, ಶ್ರೀ ಅಕ್ಷೋಭ್ಯ ತೀರ್ಥ ಕಲ್ಯಾಣ ಮಂಟಪ, ಶ್ರೀ ಸ್ವರ್ಣವರ್ಣ ಪೂಜಾಮಂಟಪ, ಶ್ರೀ ಸತ್ಯನಿಧಿ ತೀರ್ಥ ವಸತಿ ಸಮುಚ್ಚಯಗಳು ಕಾರ್ಯಗತಗೊಳ್ಳುತ್ತಿವೆ. ದೂರವಾಣಿ : 42111

## 77. ಹಂಚಿಕಲ್ಲು ಗುಡ್ಡ :

ನರಸಿಂಹತೀರ್ಥದ ಬಳಿಯ ಗುಡ್ಡವು ಮಧ್ವಮತಾವಲಂಬಿಗಳ ಹಾಗೂ ವೈಷ್ಣವರ ದೃಷ್ಟಿಯಲ್ಲಿ ಮಹಾಕ್ಷೇತ್ರ. ಇದು ರಸ್ತೆಯಿಂದ ಮೂರು ಕಿ. ಮಿ. ದೂರವಿದೆ. ಅಲ್ಲಿಗೆ ತಲುಪಲು ಅಂತಹ ಉತ್ತಮ ಮಾರ್ಗವಿಲ್ಲ. ಪುರಂದರ ಭವನವೆಂಬ ಕಟ್ಟಡದ ಬಳಿ ಸಾಗಿ ವೀರಭದ್ರ ನಗರವೆಂಬ ಹಳ್ಳಿಯ ಮೂಲಕ ಹಾದು ಬೆಟ್ಟದ ಬುಡಕ್ಕೆ ತಲುಪಬಹುದು. ಅಲ್ಲಿಯವರೆಗೂ ವಾಹನಗಳು ಸಂಚರಿಸಿ ತಲುಪಬಹುದು. ಅಲ್ಲಿಂದ ಕಾಡುಗಲ್ಲಿನ ಮೆಟ್ಟಿಲು ಗಳನ್ನು ಹತ್ತಿ ಒಂದು ಮಟ್ಟವನ್ನು ತಲುಪಬಹುದು. ಆ ಬೆಟ್ಟದಲ್ಲಿ ಗುಹಾಂತರ ವೀರಭದ್ರನ ಗುಡಿ ಇದೆ. ಅಲ್ಲಿಂದ ಪ್ರಯಾಸಪಟ್ಟು ಮೆಟ್ಟಿಲು, ಬಂಡೆಗಳನ್ನು ದಾಟಿ ಮೇಲೇರಿದರೆ ಆ ಬೆಟ್ಟದ ಶಿಖರ ತಲುಪಬಹುದು. ಮೇಲೆ ಹತ್ತಿ ಒಂದೇ ಮಾರ್ಗದಲ್ಲಿ ಸಾಗಲು ಗುರುತು ಗಳನ್ನು ಮಾಡಿರುವುದಿಲ್ಲ. ಆ ಗುಡ್ಡ ಐತಿಹಾಸಿಕ ಪ್ರಸಿದ್ಧ ಸ್ಥಳ. ಇಲ್ಲಿಯೇ ವಿದ್ಯಾರಣ್ಯರಿಗೂ ರುದ್ರಾಂಶ ಸಂಭೂತರಾದ ಅಕ್ಷೋಭ್ಯ ತೀರ್ಥರಿಗೂ ವಾಕ್ಯಾರ್ಥ (ಹಸ್ತಿಯುದ್ಧ) ನಡೆದಿದ್ದು. ಈಸ್ಥಳದಲ್ಲಿ ಪ್ರಸಿದ್ಧವಾದ ದಿಗ್ಗಜಗಳಂತೆ ಇದ್ದ ವಿದ್ಯಾರಣ್ಯ ಮತ್ತು ಅಕ್ಷೋಭ್ಯತೀರ್ಥರ ನಡುವೆ ನಡೆಯಲಿರುವ ವಾಕ್ಯಾರ್ಥವನ್ನು ವೀಕ್ಷಿಸಲು ಪಂಡಿತೋತ್ತಮರು ಬಹು ಸಂಖ್ಯೆ ಯಲ್ಲಿ ಇದ್ದರು. ಅದನ್ನು ಸಮತೋಲನದಿಂದ ವೀಕ್ಷಿಸಿ, ತೀರ್ಪು ಕೊಡಲು ಶ್ರೀ ವೇದಾಂತ ದೇಶಿಕರು ನೇಮಿಸಲ್ಪಟ್ಟಿದ್ದರು. ವಾಕ್ಯಾರ್ಥ "ತತ್ವಮಸಿ" ಎಂಬ ವಿಷಯದಿಂದ ಪ್ರಾರಂಭ ಗೊಂಡಾಗ ಮೊದಲು ಅಕ್ಷೋಭ್ಯತೀರ್ಥರು ದ್ವೈತಸಿದ್ಧಾಂತದ ಮುಖ್ಯ ಪ್ರಮೇಯಗಳನ್ನು ವಿದ್ವತ್‌ಸಭೆಯಲ್ಲಿ ವಿವರಿಸಿದರು. ಶ್ರೀ ವಿದ್ಯಾರಣ್ಯರು ವೇದಾಗಮಗಳ ಸಹಾಯದಿಂದ ಈ ಪ್ರಮೇಯಗಳಿಗೆ ಸಮರ್ಥನೆ ಇಲ್ಲವೆಂಬುದನ್ನು ಸಾಧಿಸಲು ಪ್ರಾರಂಭಿಸಿದರು. ದೀರ್ಘವಾಗಿ ತತ್ವಮಸಿ ವಾಕ್ಯದ ಮೇಲೆ ವಾಕ್ಯಾರ್ಥವು ನಡೆದ ಕಾಲದಲ್ಲಿ ಅಕ್ಷೋಭ್ಯ

ತೀರ್ಥರು ಅದ್ವೈತಪರವಾದ ಅರ್ಥ ನಿರಾಕರಣೆ ಮಾಡಿದರು. ದ್ವೈತಪರ ಅರ್ಥರವನ್ನು ಹೇಳಿದರು. ಇದರ ವಾದವಿವಾದಗಳ ವರದಿಯನ್ನು ಸಮಕಾಲೀನ ವಿಶಿಷ್ಟಾದ್ವೈತ ಪಂಡಿತರಾದ ವೇದಾಂತದೇಶಿಕರಿಗೆ ಕಳುಹಿಸಿಕೊಡಲಾಯಿತು. ಅವರು ಶ್ಲೋಕರೂಪವಾಗಿ ಅಕ್ಷೋಭ್ಯ ತೀರ್ಥರ ಪರ ತೀರ್ಪಿತ್ತರು. ಈ ವಿಜಯದ ನೆನಪಿಗಾಗಿ ಹಂಚಿಕಲ್ಲು ಬೆಟ್ಟದ ಮೇಲೆ ಜಯಸ್ಥಂಭವೊಂದನ್ನು ನಿಲ್ಲಿಸಿ, ಅದರ ಮೇಲೆ ಶಾಸನವನ್ನು ಬರೆಸಿ ಶಂಖಚಕ್ರಗಳ ಚಿನ್ಹೆ ಗಳನ್ನು ಕೆತ್ತಿಸಿದ್ದಾರೆ. ಆದರೆ ಕಾಲಾನಂತರದಲ್ಲಿ ಇದು ಜೀರ್ಣ ವಾದುದರಿಂದ ಸ್ಥಳವನ್ನು 1956ರಲ್ಲಿ ಜೀರ್ಣೋದ್ಧಾರ ಮಾಡಲಾಗಿದೆ. ಇಲ್ಲಿ ಎರಡು ಗುಹೆಗಳನ್ನು ಕಾಣಬಹುದು. ದೊಡ್ಡದಾದ ಗುಹೆ ಅದರ ಮುಂದಿರುವ ಈಶ್ವರ ದೇವಾಲಯವೇ ಶ್ರೀ ಅಕ್ಷೋಭ್ಯ ತೀರ್ಥರ ಗುಡಿ. ಅದರ ಸಮೀಪದಲ್ಲಿ ಶ್ರೀ ವಿದ್ಯಾರಣ್ಯರ ಗುಹೆ ಇದೆ.

ಈ ಸ್ಥಳ ಇತಿಹಾಸ ಪ್ರಸಿದ್ಧವಾದ ವಾಕ್ಯಾರ್ಥ ನಡೆದ ಸ್ಥಳವಾಗಿ ಪ್ರಸಿದ್ಧಗೊಂಡಿದೆ.

## 78. ಪುರಂದರ ಭವನ :

ಮುಳುಬಾಗಿಲಿಗೂ ನರಸಿಂಹ ತೀರ್ಥಕ್ಕೂ ಮಧ್ಯೆ ಹಂಚಿಕಲ್ಲು ಬೆಟ್ಟಕ್ಕೆ ಹೋಗುವ ಮುಖ್ಯ ದಾರಿಯಲ್ಲಿ ಪುರಂದರ ಭವನವೆಂಬ ಇತ್ತೀಚಿನ ಕಟ್ಟಡ ಮತ್ತು ದೇವಸ್ಥಾನವಿದೆ. ಇದು ಪುರಂದರ ಆರಾಧನಾ ಸಮಿತಿಯ ಟ್ರಸ್ಟ್ ಬೆಂಗಳೂರು ಇವರಿಂದ ರಚಿತವಾಗಿ ಹರಿದಾಸ ಪೀಠವೆಂದು ಕರೆಯಲ್ಪಟ್ಟಿದೆ. ಇಲ್ಲಿ ರುಕ್ಮಿಣಿ ಸತ್ಯಭಾಮ ಸಮೇತನಾದ ಪಾಂಡುರಂಗ ದೇವರು, ಪಂಚಮುಖಿ ಆಂಜನೇಯ, ಬಲಮುರಿ ಗಣಪತಿ ಅನ್ನಪೂರ್ಣೇಶ್ವರಿ ಇವುಗಳ ಸ್ಥಾಪನೆಯಾಗಿದೆ. ಯಾತ್ರಿಕರು ಸಮಾರಂಭಗಳನ್ನು ನಡೆಸಲು ಛತ್ರಕೂಡ ಇರುವುದು. ಅಗತ್ಯವಾಗಿ ನೋಡಲೇ ಬೇಕಾದ ಸ್ಥಳ.

## 79. ಆವನಿ :

ಕೆಜಿಎಫ್ ಮುಳುಬಾಗಿಲು ರಸ್ತೆಯಲ್ಲಿ 12 ಕಿ.ಮೀ. ಪ್ರಯಾಣಿಸಿ ಒಳದಾರಿಯಲ್ಲಿ 4 ಕಿ.ಮಿ. ಮುಳುಬಾಗಿಲಿನಿಂದ 8 ಕಿ.ಮಿ. ಇದೆ. ಇದು ಆವಂತಿಕಾ ಕ್ಷೇತ್ರವೆಂದು ಹೆಸರು ಪಡೆದಿತ್ತು. ಇಲ್ಲಿ ದೇವಾಲಯಗಳ ಸಂಕೀರ್ಣವೇ ಇದೆ. ಲಕ್ಷ್ಮಣೇಶ್ವರ ಏಕಾಂತರಾಮ ಹಾಗೂ ಕಾಮಾಕ್ಷಿಯ ದೇವಾಲಯಗಳಿವೆ. ರಾಮಲಿಂಗೇಶ್ವರ ಅತ್ಯಂತ ದೊಡ್ಡ ಹಾಗೂ ಅಲಂಕೃತ ಕೆತ್ತನೆಯ ಗುಡಿ. ಬೆಟ್ಟದ ಮೇಲೆ ಸೀತಾಪಾರ್ವತಿ ಗುಡಿ, ಹೊರಳಗುಂಡು, ತೊಟ್ಟಿಲು ಗುಂಡು, ಮತ್ತು ಅಗ್ನಿತೀರ್ಥ ಇವುಗಳಿವೆ. ಇದು ಪೌರಾಣಿಕವಾಗಿ ವಾಲ್ಮೀಕಿ ಆಶ್ರಮವಿದ್ದ ಜಾಗ'

ಸೀತಾದೇವಿಯು ಲವಕುಶರಿಗೆ ಜನ್ಮವಿತ್ತುದು ಈ ಸ್ಥಳದಲ್ಲಿಯೇ. ಲವಕುಶರು ಯಜ್ಞಾಶ್ವವನ್ನು ಕಟ್ಟಿ ಹಾಕಿದ ಸ್ಥಳ, ರಾಮ ಮತ್ತು ಲವಕುಶರಿಗೆ ಯುದ್ಧ ನಡೆದ ಸ್ಥಳ. ದೊಡ್ಡ ಕಲ್ಲು ಬಂಡೆಯ ಮೇಲೆ ಕುಳಿತು ಸೀತೆ ರೋಧಿಸುತ್ತಿದ್ದ ಸ್ಥಳ ಇವುಗಳೂ ಇವೆ. ರಾಮ ಲಕ್ಷ್ಮಣ ಸುಗ್ರೀವ ಇವರ ಹೆಸರಿನಲ್ಲಿ ಶಿವಲಿಂಗಗಳು ಸ್ಥಾಪಿತವಾಗಿವೆ. ಈ ದೇವಾಲಯಗಳಲ್ಲದೆ ಪಾರ್ವತಿ, ವಿನಾಯಕ, ವೀರಭದ್ರ, ಸುಬ್ರಮಣ್ಯರ ಗುಡಿಗಳು

## 80. ಬೂದಿಕೋಟೆ :

ಬೆಂಗಳೂರು 93 ಕಿ.ಮಿ. ಕೋಲಾರದಿಂದ 15 ಕಿ.ಮಿ., ಬಂಗಾರುಪೇಟೆಗೆ 11 ಕಿ.ಮಿ. ಮಾರ್ಕಂಡೇಯ ನದಿಯ ಸಂಗಮ ಸ್ಥಳ. ಅವಶೇಷ ದೆಸೆಯಲ್ಲಿರುವ ಇದಕ್ಕೆ ವಿಭೂತಿಪುರ ವೆಂಬ ಹೆಸರಿತ್ತು. ಕೋಟೆಯಲ್ಲಿ ವೇಣುಗೋಪಾಲ ಸ್ವಾಮಿ ವೆಂಕಟೇಶ್ವರ ದೇವಾಲಯಗಳಿವೆ. ಇದು ರಾಘವೇಂದ್ರರ ಬೃಂದಾವನ ಸ್ಥಳವೂ ಆಗಿದೆ. ಮಾರ್ಕಂಡೇಯ ಅಣೆಕಟ್ಟಿನ ಸುಂದರ ಪ್ರವಾಸಿ ತಾಣ (4 ಕಿ.ಮಿ) ವಾಗಿದ್ದು ಭೇಟಿಕೊಡಲು ಸೂಕ್ತ ಸ್ಥಳ.

## 81. ನಂದಿ :

ಚಿಕ್ಕಬಳ್ಳಾಪುರ ತಾಲ್ಲೂಕು ಬೆಂಗಳೂರಿಗೆ 65ಕಿ.ಮಿ. ಗಿರಿಪಂಕ್ತಿಯಲ್ಲಿ ಈ ಬೆಟ್ಟವು 4850 ಅಡಿಗಳಿದ್ದು, ಬೆಟ್ಟದ ಕೆಳಗೆ ರಾಣಿ ರತ್ನಾವಳಿ ನಿರ್ಮಿತ (ನಂದಿ ಹಳ್ಳಿ) ದ್ರಾವಿಡ ಶೈಲಿಯ 320 x 250 ಅಡಿ ವಿಸ್ತಾರದ ಅತ್ಯಂತ ಸುಂದರವಾದ ದೇವಾಲಯ ಭೋಗ ನಂದೀಶ್ವರ (ಕ್ರಿ.ಶ. 1800 ) ಬೆಟ್ಟದ ಮೇಲೆ ಯೋಗನಂದೀಶ್ವರ ಗುಡಿಗಳಿವೆ. ಬೆಟ್ಟದ ಮೇಲೇರಲು ಡಾಂಬರು ರಸ್ತೆಯಿದ್ದು ಯಾತ್ರಿಕರಿಗೆ, ಪ್ರವಾಸಿಗರಿಗೆ ತುಂಬಾ ಅನುಕೂಲ ವಾಗಿದೆ. ಸರ್ಕಾರಿ ಬಸ್ಸುಗಳು ದಿನದ ನಿಯತಸಮಯದಲ್ಲಿ ಸಂಚರಿಸುತ್ತವೆ. ಬೆಟ್ಟವು ಹಿತಕರವಾದ ಹವೆಯನ್ನು ಹೊಂದಿದೆ. ಜನಪ್ರಿಯ ಗಿರಿಧಾಮವಾಗಿದೆ. ಬೆಟ್ಟದ ಮೇಲೆ ತಿಳಿನೀರಿನ ಅಮೃತಸರೋವರ ಹಾಗೂ ಅನೇಕ ಚಾರಿತ್ರಿಕ ಸ್ಮಾರಕ, ತಂಗಲು ಪ್ರವಾಸಿ ಮಂದಿರ ಗಳೂ ಇವೆ. ಬೆಟ್ಟವು ಅರ್ಕಾವತಿ, ಪಾಲಾರ್, ಪಿನಾಕಿನಿ, ಪಾಪಾಘ್ನಿ ನದಿಗಳ ಉಗಮಸ್ಥಳ.

## 82. ಕೈವಾರ :

ಬೆಂಗಳೂರಿನಿಂದ 79 ಕಿ.ಮಿ. ಚಿಂತಾಮಣಿಯಿಂದ 12 ಕಿ.ಮಿ.

ಮಹಾಭಾರತದಲ್ಲಿ ಬರುವ ಏಕಚಕ್ರನಗರ ಇದೇ ಎಂದು ಹೇಳುವರು. ಅರಗಿನ ಮನೆ ಯಿಂದ ತಪ್ಪಿಸಿಕೊಂಡು ಬಂದ ಪಾಂಡವರು ಇಲ್ಲಿ ಕೆಲಕಾಲ ತಂಗಿದ್ದರಂತೆ. ಇಲ್ಲಿಯ ಕೈವಲ್ಯ ಗಿರಿ ಎಂಬ ಬೆಟ್ಟದಲ್ಲಿ ಬಕಾಸುರನು ವಾಸವಾಗಿದ್ದನೆಂದು ಭೀಮ ಅವನನ್ನು ಸಂಹರಿಸಿದ ನೆಂದೂ ನಂತರ ಬೆಟ್ಟದ ಗುಹೆಯಲ್ಲಿ ಮುಚ್ಚಿದ್ದನೆಂದೂ ಸ್ಥಳಪುರಾಣ ಹೇಳುತ್ತದೆ. ಇಲ್ಲಿ ಆ ಗುಹೆಯನ್ನು ತೋರಿಸುತ್ತಾರೆ. ಮಳೆಯ ದಿನಗಳಲ್ಲಿ ಕೊರಕಲುಗಳಿಂದ ಕೆಂಪು ಅಥವಾ ಬಿಳಿ ಬಣ್ಣದ ರಾಡಿ ನೀರು ಇಲ್ಲಿಂದ ಬರುತ್ತದೆ. ಅದೇ ಬಕಾಸುರನ ಕೀವು ಮತ್ತು ರಕ್ತ ಎಂದು ಸ್ಥಳೀಕರ ನಂಬಿಕೆ. ಇಲ್ಲಿ ಭೀಮಾಂಜನೇಯರ ಚಿಕ್ಕ ಗುಹೆಗಳೂ, ನಕುಲೇಶ್ವರ ಸಹದೇವೇಶ್ವರರ ಚಿಕ್ಕ ಗುಡಿಗಳೂ ಇವೆ. ಬೆಟ್ಟದ ಮೇಲೆ ಬೆಳ್ಳಿಯ ಕೊಳ, ಬಕನ ಗುಂಡು ಹಾಗೂ ಪೈರುಕೊಳಗಳೆಂಬ ತಾಣಗಳೂ ಇವೆ.

ಅಮರನಾರಾಯಣ ಗುಡಿ ಇಲ್ಲಿಯ ಪ್ರಧಾನ ಗುಡಿ. ಇದು ವಿಜಯನಗರ ಶಿಲ್ಪದ ಪ್ರತೀಕ. ಪವಾಡ ಪುರುಷ ನಾರಾಯಣ ಯೋಗಿಗಳೆಂಬ ಪ್ರಸಿದ್ಧ ಸಂತರು (ಕೈವಾರ ತಾತ)

ಈ ಊರಿನಲ್ಲಿ ನೆಲೆಸಿದ್ದರು. ಅವರ ಕಾಲಜ್ಞಾನದಲ್ಲಿ ಹೇಳಿದ ವಿಷಯಗಳೂ ಇಂದೂ ನಿಜವಾಗುತ್ತಿವೆ. ಎಂದು ಜನ ಹೇಳುತ್ತಾರೆ. ಅವರ ಸಮಾಧಿಯು ಇಲ್ಲಿದೆ.

## 83. ಚಿಕ್ಕ ತಿರುಪತಿ :

ಮಾಲೂರು ತಾಲ್ಲೂಕು. ಇಲ್ಲಿ ಶ್ರೀನಿವಾಸದೇವರ ಭವ್ಯ ಗುಡಿ ಇದೆ. ತಿರುಪತಿಗೆ ಹೋಗಿ ಕಾಣಿಕೆ, ಪೂಜೆ ಸಲ್ಲಿಸಲಾಗದವರು ಇಲ್ಲಿಗೆ ಬಂದು ಹರಕೆ ಸಲ್ಲಿಸುವ ಸಂಪ್ರದಾಯ ವಿದೆ.

## 84. ಇತರ ಸ್ಥಳಗಳು :

**1. ಚಿಂತಾಮಣಿ :** ಕೋಲಾರದಿಂದ 32 ಕಿ.ಮಿ. ವೇಣುಗೋಪಾಲ ಸ್ವಾಮಿ ದೇವಾಲಯ, ರಾಘವೇಂದ್ರರ ಬೃಂದಾವನ.

**2. ಕೋನಕುಂಟ್ಲು :** ಚಿಂತಾಮಣಿ ತಾಲ್ಲೂಕು 35 ಕಿ.ಮಿ ವೆಂಕಟರಮಣನ ಗುಡಿ, ವೈಶಾಖದಲ್ಲಿ ರಥೋತ್ಸವ

**3. ಮುರುಡುಗುಂಟೆ :** ಚಿಂತಾಮಣಿಯಿಂದ 22 ಕಿ.ಮಿ.
ಅಪೂರ್ವವಾಸ್ತುಶಿಲ್ಪದಿಂದ ಕೂಡಿದ ಶ್ರೀ ವೆಂಕಟರಮಣಸ್ವಾಮಿ ಗುಡಿ.

**4. ಬೇತಮಂಗಲ :** ಕೆ. ಜಿ. ಎಫ್.ಗೆ 5 ಕಿ.ಮಿ. ಅರ್ಜುನ ಪ್ರತಿಷ್ಠೆಯ ಆಂಜನೇಯ (12 ಅಡಿ) ಪ್ರಕೃತಿ ನಿರ್ಮಿತ ದೊಡ್ಡ ಕೆರೆ ವಿಹಾರಸ್ಥಳ.

**5. ಬಂಗಾರು ಪೇಟೆ :** ಕೋಲಾರಕ್ಕೆ 15 ಕಿ.ಮಿ. ವಿಜಯೇಂದ್ರ, ಅರ್ಕೇಶ್ವರ ಹಾಗೂ ಕೈ ಮುಗಿದು ನಿಂತಿರುವ 3 ಅಡಿ ಎತ್ತರದ ಪ್ರಾಣದೇವರ ಗುಡಿಗಳು.

**6. ಟೇಕಲ್ :** ಕೋಲಾರಕ್ಕೆ 25. ಕಿ.ಮಿ. ಬೆಂಗಳೂರು-ಚೆನ್ನೈ ದಾರಿಯ ರೈಲು ನಿಲ್ದಾಣ. ವರದರಾಜ, ಆಂಜನೇಯ, ಶಿಂಗ ಪೆರುಮಾಳ್ ದೇವಾಲಯಗಳು ಬೆಟ್ಟದ ಮೇಲಿನ ಗುಹೆ ಯಲ್ಲಿ (150 x 70 ಅಡಿ) ಭೀಮ ಸಾಮು ಮಾಡುತ್ತಿದ್ದ ಭೀಮನ ಗರಡಿ ಎಂಬ ಸ್ಥಳ.

**7. ಮಾಲೂರು :** ಬೆಂಗಳೂರು – ಚೆನ್ನೈ ರೈಲ್ವೆದಾರಿಯ ಸ್ಥಳ. ರೈಲ್ವೆಸ್ಟೇಷನ್. ಶಂಕರನಾರಾಯಣ ದೇವಾಲಯ. ಲಿಂಗದಲ್ಲಿ ಶಿವ ವಿಷ್ಣು ಇಬ್ಬರ ಚಿನ್ಹೆಗಳು.

**8. ಗುಡಿಬಂಡೆ :** ಕೋಲಾರಕ್ಕೆ 95 ಕಿ.ಮಿ. ಬೆಂಗಳೂರಿಗೆ 93ಕಿ.ಮಿ. ಬೃಹತ್‌ಬಂಡೆಯ ತುದಿಯಲ್ಲಿ ಏಕಶಿಲೆಯಿಂದ ನಿರ್ಮಾಣವಾದ ಉದ್ಭವ ಅಹೋಬಲ ನರಸಿಂಹನ ಗುಡಿ.

**9. ಬಾಗೆಪಲ್ಲಿ :** ಕೋಲಾರದಿಂದ 110 ಕಿ.ಮಿ. ಬೆಂಗಳೂರು 120 ಕಿ.ಮಿ.
ಬೃಹತ್ ರಚನೆಯ ವೆಂಕಟರಮಣ ಸ್ವಾಮಿ. ಮಾಧವ ತೀರ್ಥರ ಮೃತ್ತಿಕಾ ಬೃಂದಾವನ.

**10. ವಕ್ಕಲೇರಿ :** ಕೋಲಾರಕ್ಕೆ 12 ಕಿ.ಮಿ. ಮಾರ್ಕಂಡೇಶ್ವರ

**11. ದೊಡ್ಡ ಬಳ್ಳಾಪುರ :** ವೆಂಕಟರಮಣ, ವಿಠಲ, ಗೋಪಾಲಕೃಷ್ಣರ ಗುಡಿಗಳು.

**12. ಹೋಳೂರು :** ಲಕ್ಷ್ಮಿನಾರಾಯಣ

**13. ಶಿವ್ವಘಟ್ಟ :** ಆಂಜನೇಯ, ವೇಣುಗೋಪಾಲ ಸ್ವಾಮಿ, ಅಕ್ಕಪಕ್ಕದಲ್ಲಿ ರುಕ್ಮಿಣಿ ಸತ್ಯಭಾಮೆಯರ ವಿಗ್ರಹಗಳು.

# ತುಮಕೂರು ಜಿಲ್ಲೆ

## 85. ದೇವರಾಯನ ದುರ್ಗ :

ಮೈಸೂರು 152 ಕಿ.ಮಿ. ತುಮಕೂರಿಗೆ 18 ಕಿ.ಮಿ. ಬೆಂಗಳೂರು 80ಕಿ.ಮಿ. ಊರ್ಡುಗೆರೆ ಮೂಲಕವೂ ಪ್ರಯಾಣಿಸಬಹುದು.

ಇದೊಂದು ತುಮಕೂರು ಜಿಲ್ಲೆಯ ಬೆಟ್ಟ. ಗಿರಿದುರ್ಗ, ಪವಿತ್ರ ಕ್ಷೇತ್ರ, ಸುಂದರ ತಾಣ. ಇದು 8 ದಿಕ್ಕಿನಲ್ಲೂ ಗಿರಿಪಂಕ್ತಿಗಳಿಂದ ಆವೃತವಾಗಿದೆ. ಇದನ್ನು ಕರಿಗಿರಿ ಕ್ಷೇತ್ರವೆನ್ನುತ್ತಾರೆ. ಬೆಟ್ಟವು (1242 ಮೀಟರ್) 2 ಹಂತಗಳಲ್ಲಿ ರಚಿತವಾಗಿದೆ. ಮೊದಲ ಬೆಟ್ಟದ ಸಮತಲ ಪ್ರದೇಶದಲ್ಲಿ ದೂರ್ವಾಸಮುನಿ ಪ್ರತಿಷ್ಟಿತ ಭೋಗಾ ನರಸಿಂಹ ಅಥವಾ ಲಕ್ಷ್ಮಿನರಸಿಂಹನ ದೇವಾಲಯ ಹಾಗೂ ಕಡಿದಾದ ಮತ್ತೊಂದು ಎತ್ತರದ ಶಿಖರ ಪ್ರದೇಶ ದಲ್ಲಿ ಯೋಗಾನರಸಿಂಹಸ್ವಾಮಿ ಗುಡಿಯೂ ಇದೆ. ಇದನ್ನು ಕುಂಭೀಸ್ಥಳ ಎನ್ನುತ್ತಾರೆ. ಈ ದೇವರಿಗೆ ಕುಂಭಿನರಸಿಂಹನೆಂದೂ ಹೆಸರು. ಇಲ್ಲಿನ ಗುಹೆಯೊಂದರಲ್ಲಿ ಪಾದತೀರ್ಥವೆಂಬ ನೀರಿನ ಹೊಂಡವಿದೆ. ಅಲ್ಲದೆ ರಾಮತೀರ್ಥ, ಧನುಶ್‌ತೀರ್ಥವೆಂಬ ದೊಣೆಗಳಿವೆ. ಮತ್ತಷ್ಟೂ ಮೇಲೆ ಹೋದರೆ ಚಿಕ್ಕ ಗರುಡನ ಗುಡಿ, ದೀವಿಗೆ ಗುಂಡು ಎಂಬ ಬಂಡೆ ಇದೆ. ಜಯಮಂಗಲಿ ಶಿಂಷಾ ನದಿಗಳ ಉಗಮಸ್ಥಾನವೂ ಇದೆ.

ಕೆಳ ಬೆಟ್ಟದ ಲಕ್ಷ್ಮೀನರಸಿಂಹ ದೇವಾಲಯದ ಪಕ್ಕದಲ್ಲಿ ಕೈ ಜೋಡಿಸಿ ನಿಂತಿರುವ ಸಂಜೀವರಾಯಸ್ವಾಮಿ ಗುಡಿ ಇರುವುದು. ತುಮಕೂರಿಗೆ ಹೋಗುವ ಬೆಟ್ಟದ ಕೆಳಗಣ ಪ್ರದೇಶದಲ್ಲಿ ನಾಮದ ಚಿಲುಮೆ ಎಂಬ ಪವಿತ್ರ ತೀರ್ಥವಿರುವುದು. ಈ ಪ್ರದೇಶವನ್ನೇ ಅರಣ್ಯ ಇಲಾಖೆಯವರು ಅಭಿವೃದ್ಧಿ ಪಡಿಸಿ ಚಿಗುರಿ ವನವನ್ನಾಗಿ ಪರಿವರ್ತಿಸಿದ್ದಾರೆ. ಇದು ಹೀಗೆ ಪ್ರವಾಸಿಗರ ಹಾಗೂ ಯಾತ್ರಾರ್ಥಿಗಳ ತಾಣಗಳೂ ಆಗಿದೆ. ಬಸ್ ಸೌಕರ್ಯ ತುಮಕೂರಿನ ಕಡೆಯಿಂದ ಇಲ್ಲ, ಬೆಂಗಳೂರಿನಿಂದ ಬಸ್ ಸೌಕರ್ಯ ಸ್ವಲ್ಪ ಮಟ್ಟಿಗೆ ಇದೆ.

## 86. ಹೊಳವನಹಳ್ಳಿ :

ಇದು ತುಮಕೂರು ಕಡೆಯಿಂದಲೂ, ಬೆಂಗಳೂರಿನ ಕಡೆಯಿಂದಲೂ ಉರ್ಡುಗೆರೆ, ದೇವರಾಯನ ದುರ್ಗದ ಮೂಲಕ ಕೊರಟಗೆರೆಯಿಂದ ಪ್ರಯಾಣಿಸಬಹುದು. ಇದು ಜಯ

## 87. ಕ್ಯಾಮೇನಹಳ್ಳಿ :

ಇಲ್ಲಿನ ಸಮೀಪದ (6½ ಕಿ. ಮೀ.) ಕ್ಯಾಮೇನ ಹಳ್ಳಿ ಪ್ರಾಣದೇವರ ಪುಣ್ಯಕ್ಷೇತ್ರ. ಇದು ಜನಮೇಜರಾಯನ ಪ್ರತಿಷ್ಠೆ. ಈ ವಿಗ್ರಹದಲ್ಲಿ ಮುಖವು ಎದುರಾಗಿದೆ. ಆದುದರಿಂದ ಇದನ್ನು ಎದುರುಮುಖದ ಪ್ರಾಣದೇವರೆಂದು ಕರೆಯುವರು. ಗದೆ ಹಿಡಿದಿರುವುದರಿಂದ ಹನುಮ ಭೀಮ ಮಧ್ವರ ಅವತಾರತ್ರಯ ಎನ್ನುವರು. ಮತ್ತು ಮಹಾಭಾರತದ ಅಕ್ಷಯಕುಮಾರನನ್ನು ಭೀಮ ತುಳಿದು ವಧಿಸುತ್ತಿರುವ ರೀತಿ ಇರುವುದರಿಂದ ಭೀಮನ ಅವತಾರವೂ ಇಲ್ಲಿದೆ, ಎಂದು ನಂಬಿಕೆ. ಈಚೆಗೆ ಈ ದೇವಾಲಯವು ಪುನರುಜ್ಜೀವನಗೊಳ್ಳುತ್ತಿದೆ. ಆದರೆ ಊಟ ವಸತಿಗೆ ಯಾವ ಅನುಕೂಲವೂ ಇಲ್ಲ. ಹೊಳನವನ ಹಳ್ಳಿಯವರೆಗೆ ಮಾತ್ರ ಸರ್ಕಾರಿ ಮತ್ತು ಖಾಸಗಿ ಬಸ್ಸುಗಳು ಒಂದೆರಡು ಇವೆ.

## 88. ಸೀಬಿ :

ಸಿರಾಕ್ಕೆ 28 ಕಿ.ಮಿ ತುಮಕೂರಿಗೆ 24 ಕಿ.ಮಿ

ಬೆಂಗಳೂರು ಪೂನಾ ರಾಷ್ಟ್ರೀಯ ಹೆದ್ದಾರಿಯ ಬದಿಯಲ್ಲಿ ತುಮಕೂರು ಸಿರಾಗಳ ನಡುವೆ ಇರುವ ಪುಣ್ಯಕ್ಷೇತ್ರ. ಇಲ್ಲಿನ ದೇವಾಲಯದಲ್ಲಿ ಸಾಲಿಗ್ರಾಮ ರೂಪದಲ್ಲಿ ಲೋಕಾಂಬಿಕ ಸಮೇತನಾಗಿ ನರಸಿಂಹ ದೇವರು ಇದ್ದಾರೆ. ಇದು ಬಹು ಪುರಾತನ ಕ್ಷೇತ್ರ ಪ್ರಾಣಭಿಕ್ಷೆ ಬೇಡಿದ ಪಾರಿವಾಳವನ್ನು ಶಿಬಿ ಚಕ್ರವರ್ತಿ ತನ್ನ ಶರೀರದ ಮಾಂಸಕೊಟ್ಟು ಕಾಪಾಡಿದ ಸ್ಥಳ. ಅದಕ್ಕಾಗಿಯೇ ಈ ಹೆಸರು. ದೇವಾಲಯದ ಗೋಡೆಯ ಮೇಲೆ ಬಲು ಅಪರೂಪವಾದ ವರ್ಣಚಿತ್ರಗಳಿವೆ. ದೇವಾಲಯದ ಮುಂದೆ ಗಜಾ ಕುಂಡ ಕಲ್ಯಾಣಿ ಇರುವುದು. ಮಾಘ ಮಾಸದಲ್ಲಿ ರಥೋತ್ಸವ.

## 89. ಅರಳಗುಪ್ಪೆ :

ತಿಪಟೂರಿಗೆ 8 ಕಿ.ಮಿ. ಕಿಬ್ಬನ ಹಳ್ಳಿ ಹೋಬಳಿ

ತಿಪಟೂರು ತಾಲ್ಲೂಕು ಬಾಣಸಂದ್ರ ರೈಲ್ವೆ ನಿಲ್ದಾಣದಿಂದ ಪಶ್ಚಿಮಕ್ಕೆ 7 ಕಿ.ಮಿ. ಪ್ರಾಚೀನವಾಸ್ತುಶಿಲ್ಪಕ್ಕೆ ಹೆಸರಾದ ಸ್ಥಳ. 2¼ ಅಡಿ ಎತ್ತರದ ಉಗ್ರ ನರಸಿಂಹ ದೇವರಗುಡಿ, ನೊಳಂಬ ಶಿಲ್ಪದ ನಟರಾಜ, ಗಜಲಕ್ಷ್ಮಿ, ಕಲ್ಲೇಶ್ವರ ಗುಡಿ ಇರುವುದರ ಜೊತೆಗೆ ಸುಂದರವಾದ ಗಂಗರಕಾಲದ ಚನ್ನಕೇಶವ ದೇವಾಲಯವಿದೆ. ಇಲ್ಲಿಯ ಗೋಡೆಗಳ ಮೇಲಿನ ಕೆತ್ತನೆ ಮನಮೋಹಕ. ಮಹಿಷಾಸುರಮರ್ದಿನಿ ವಿಗ್ರಹ ತುಂಬಾ ಸುಂದರವಾಗಿದೆ. ಇದರಂತಹ ವಿಗ್ರಹ ದಕ್ಷಿಣ ಇಂಡಿಯಾದಲ್ಲೇ ಇಲ್ಲವೆಂದು ಶಿಲ್ಪ ಶಾಸ್ತ್ರಜ್ಞರ ಅಭಿಪ್ರಾಯ.

## 90. ಕಡಬಾ :

ಹೆಬ್ಬಾರ್ ಪಂಚಗ್ರಾಮಗಳಲ್ಲಿ ಒಂದು. ರಾಮದೇವಾಲಯ, ಕೈಲಾಸೇಶ್ವರ ಮತ್ತು ಕೆರೆ ತೂಬಿನ ಬಳಿಯ ಹನುಮಂತ ದೇವಾಲಯ ಇಲ್ಲಿನ ದೇವಾಲಯಗಳು.

## 91. ನೊಣವಿನಕೆರೆ :

ಬೆಂಗಳೂರು 141 ಕಿ.ಮಿ. ತುಮಕೂರು 73 ಕಿ.ಮಿ ತಿಪಟೂರು 10 ಕಿ.ಮಿ. ಇಲ್ಲಿ ದ್ರಾವಿಡ ಶೈಲಿಯ ಬ್ಯಾಟರಾಯಸ್ವಾಮಿ ಗುಡಿ ಇದೆ. ಇಲ್ಲಿಯ ಗೋಪಾಲಸ್ವಾಮಿ ದೇವಾಲಯದಲ್ಲಿ 4 1/2 ಅಡಿ ಎತ್ತರದ ಶ್ರೀನಿವಾಸ ಸ್ವಾಮಿ ವಿಗ್ರಹವಿದೆ.

## 92. ಹುಳಿಯಾರು :

ಚಿಕ್ಕನಾಯಕನ ಹಳ್ಳಿಗೆ 24 ಕಿ.ಮಿ. ಇಲ್ಲಿ ರಂಗನಾಥಸ್ವಾಮಿ ದೇವಾಲಯವಿದೆ. ಇದರಲ್ಲಿಯ ಮೂಲವಿಗ್ರಹ ಅನಂತ ಶಯನನು 7 ಹೆಡೆ ಸರ್ಪದ ಮೇಲೆ ವಿಲಾಸಪೂರ್ಣನಾಗಿ ಒರಗಿ ವಿಶ್ರಮಿಸುತ್ತಿದ್ದಾನೆ. (5 ಅಡಿ) ಇದರ ನಾಭಿ ಕಮಲದಲ್ಲಿ ಬ್ರಹ್ಮ, ಶಿರದಲ್ಲಿ ಶ್ರೀದೇವಿ, ಪಾದದಲ್ಲಿ ಭೂದೇವಿ, ಇದ್ದಾರೆ. ಮಲ್ಲೇಶ್ವರ ದೇವಾಲಯ ಮತ್ತೊಂದು ಸಂದರ್ಶನೀಯ ಸ್ಥಳ.

## 93. ಇತರ :

**1. ಶೆಟ್ಟಿಕೆರೆ :** ಚಿಕ್ಕನಾಯಕನ ಹಳ್ಳಿಗೆ 8 ಕಿ.ಮಿ. ಯೋಗಮಾಧವ ದೇವಾಲಯವಿದೆ.

**2. ಚಿಕ್ಕನಾಯಕನ ಹಳ್ಳಿ :** ಶ್ರೀ ವೆಂಕಟರಮಣ ಸ್ವಾಮಿ ಗುಡಿ. ದೇವರು 6 ಅಡಿ ಎತ್ತರವಿದ್ದಾನೆ.

**3. ಮಧುಗಿರಿ :** ತುಮಕೂರಿನಿಂದ 43 ಕಿ.ಮಿ., ಬೆಂಗಳೂರಿನಿಂದ 107 ಕಿ. ಮಿ. ಬಹಳ ಕಡಿದಾದ ಬೆಟ್ಟ, ಹೆಬ್ಬಾಗಿಲುಗಳು ನೀರಿನ ಒರತೆಗಳು ಮೆಟ್ಟಿಲಿನ ಆಸರೆ ಬೆಟ್ಟಕ್ಕೆ ಕಡಿಮೆ, ಸ್ವಲ್ಪ ಜಾರಿದರೂ ಪ್ರಾಣಾಪಾಯ. ಭೀಮನ ದೋಣೆಯ ಬಳಿ ಸುಂದರ ಹನುಮಂತನ ವಿಗ್ರಹವಿದೆ.

**4. ಗೂಳೂರು :** ಬೃಹತ್ ಪ್ರಮಾಣದ ಗಣೇಶನನ್ನು ಇಲ್ಲಿ ಮಣ್ಣಿನಲ್ಲಿ ಪ್ರತಿವರ್ಷವೂ ರಚಿಸಿ ಪೂಜಿಸುತ್ತಾರೆ. ಮೂರ್ತಿಯ ವಿಸರ್ಜನೆ ಒಂದು ದೊಡ್ಡ ಸಮಾರಂಭ.

**5. ಕೈದಾಳ :** ತುಮಕೂರಿನಿಂದ 5 ಕಿ.ಮಿ. ಚೆನ್ನಕೇಶವ ದೇವಾಲಯವಿದೆ.

**6. ಬಯಲಾಂಜನೇಯಸ್ವಾಮಿ ಕ್ಷೇತ್ರ :** ತುಮಕೂರಿನಿಂದ ದೇವರಾಯನದುರ್ಗಕ್ಕೆ ಹೋಗುವ ಬೆಳಗುಂಬ ದಾರಿಯಲ್ಲಿ ಈ ಸ್ವಾಮಿ ನೆಲೆಗೊಂಡಿದ್ದಾನೆ. ಈ ದೇವರಿಗೆ ಜಗನ್ನಾಥಪುರೀಶ ಎಂಬ ಹೆಸರಿದೆ. ಇಲ್ಲಿರುವ ಅಶ್ವತ್ಥ ವೃಕ್ಷ 100 ವರ್ಷಗಳಿಗಿಂತಲೂ ಹಳೆಯದು. ಇಲ್ಲಿರುವ ಪ್ರಾಣದೇವರು ವ್ಯಾಸರಾಯರಿಂದ ಪ್ರತಿಷ್ಠಿತವಾದುದು. ಎದುರು ಮುಖ, ಧನುರ್ಧಾರಿಯಾದ ರಾಮನನ್ನು ಹೊತ್ತು ಗಧಾಧಾರಿಯಾಗಿ ಪಾದದಡಿಯಲ್ಲಿ ರಾಕ್ಷಸನನ್ನು ಮೆಟ್ಟಿ ಯುದ್ಧಕ್ಕೆ ಹೊರಟ ವೀರಭಂಗಿಯಲ್ಲಿ ಶ್ರೀ ಮಾರುತಿಯು ನಿಂತಿದ್ದಾನೆ. ಹನುಮ, ಭೀಮ ಮಧ್ವರುಗಳ ಅವತಾರ ವೈಖರಿ ಈ ಮೂರ್ತಿಯಲ್ಲಿ ನೆಲೆಗೊಂಡಿದೆ. ಈ ಮಾರುತಿಯನ್ನು ವಿದ್ಯಾರ್ಥಿ ಮಾರುತಿ ಎನ್ನುವರು. ಸ್ವಾಮಿಯವರಿಗೆ ಚೈತ್ರಮಾಸದ ಶ್ರೀರಾಮನವಮಿ ದಿನ ರಥೋತ್ಸವ.

**7. ಕಲ್ಲೂರು :** ಗುಬ್ಬಿ ತಾಲ್ಲೂಕು. ರಾಮ ಮತ್ತು ಆಂಜನೇಯಸ್ವಾಮಿ ದೇವಸ್ಥಾನಗಳು ಮತ್ತು ಅವರ ಜಾತ್ರೆ ಈ ಭಾಗದಲ್ಲಿ ತುಂಬಾ ಹೆಸರುವಾಸಿ.

# ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು

## 94. ಉಡುಪಿ :

ಭಾರತದಲ್ಲಿ ದ.ಕನ್ನಡ ಜಿಲ್ಲೆಗೆ ವಿಶಿಷ್ಟಸ್ಥಾನವಿದೆ. ತುಳುನಾಡು ಎಂತಲೂ ಇದನ್ನು ಕರೆಯುವರು. ಪರಶುರಾಮ ಕ್ಷೇತ್ರವೆಂತಲೂ ಪುರಾಣ ಪ್ರಸಿದ್ಧವಾದ ದಕ್ಷಿಣೋತ್ತರ ಜಿಲ್ಲೆಗಳಲ್ಲಿರುವ ಸಪ್ತಕ್ಷೇತ್ರಗಳು ಮೋಕ್ಷದಾಯಕವೆಂದೂ ಪರಿಗಣಿಸಲ್ಪಟ್ಟಿದೆ. ಅವುಗಳಲ್ಲಿ ಆರು ಸಂಖ್ಯೆಯ ಕ್ಷೇತ್ರಗಳು ದ.ಕನ್ನಡ ಜಿಲ್ಲೆಯಲ್ಲಿಯೇ ಇವೆ. ಅಲ್ಲದೆ ಇಲ್ಲಿ ಅವತರಿಸಿರುವ ಮಧ್ವಾಚಾರ್ಯರ ಸಂಪರ್ಕಕ್ಕೆ ಒಳಗಾದ ಕ್ಷೇತ್ರಗಳೆಂದೂ ಅವರ ಚರಿತ್ರೆಯಲ್ಲಿ ಉಲ್ಲೇಖಿಸ ಲ್ಪಟ್ಟಿವೆ. ಅವು ಸುಮಾರು 20ಕ್ಕೂ ಹೆಚ್ಚಿನ ಸಂಖ್ಯೆಯಲ್ಲಿದೆ.

ಉಡುಪಿ : ಉಡುಪಿ ಬೆಂಗಳೂರಿನಿಂದ 422 ಕಿ.ಮಿ ಎನ್.ಹೆಚ್. 17 ರಸ್ತೆ. ಮಂಗಳೂರು 58 ಕಿ.ಮಿ. ಕೊಂಕಣ ರೈಲು ಮಾರ್ಗದ ಇಂದ್ರಾಣಿ ರೈಲ್ವೆ ನಿಲ್ದಾಣದ ಹತ್ತಿರ. ಉಡುಪ ಎಂಬುದು ಉಡುಪಿಯಾಗಿ ಬದಲಾವಣೆಗೊಂಡಿದೆ. ಉಡುಪಿಯೆಂದರೆ ಚಂದ್ರ. ಚಂದ್ರನು ಈ ಸ್ಥಳದಲ್ಲಿ ತನಗೆ ಬಂದ ದಕ್ಷನ ಶಾಪಪರಿಹಾರಕ್ಕಾಗಿ ಶಿವನನ್ನು ಕುರಿತು ಉಗ್ರ ತಪಸ್ಸನ್ನಾಚರಿಸಿ ಶಿವನನ್ನು ಸಾಕ್ಷಾತ್ಕರಿಸಿಕೊಂಡ ಸ್ಥಳ. ಶಿವನು ಪ್ರತ್ಯಕ್ಷವಾಗಿದ್ದುದ ರಿಂದಲೇ ಇಲ್ಲಿ ಚಂದ್ರಮೌಳೀಶ್ವರ ದೇವಾಲಯ ಸ್ಥಾಪಿತವಾಗಿದೆ. ಉಡುಪಿಯನ್ನು ಮೊದಲು ಶಿವಬೆಳ್ಳಿ ಎನ್ನುತ್ತಿದ್ದರು. ಇದೇ ಶಿವಳ್ಳಿ. ವಾದಿರಾಜರು ಇದನ್ನು ಮಹೇಶರಜತ ಎಂದು ಕರೆದುದುಂಟು. ರಜತ ಪೀಠಪುರ, ರೂಪ್ಯ. ಪೀಠ ಈ ಹೆಸರುಗಳು ಇದಕ್ಕೆ ಇದ್ದುವು. ಪರಶು ರಾಮನು ಕೃತಯುಗದಲ್ಲಿ ಈ ಭೂಮಿಯ ಮೇಲಿನ ಕ್ಷತ್ರಿಯರನ್ನು ನಿಃಕ್ಷತ್ರಿಯ ಮಾಡುವ ಪ್ರತಿಜ್ಞೆ ಮಾಡಿ 21 ಸಲ ಭೂಪ್ರದಕ್ಷಿಣೆ ಮಾಡಿ ನಂತರ ಗೆದ್ದ ಭೂಮಿಯನ್ನು ಬ್ರಾಹ್ಮಣರಿಗೆ ದಾನ ಕೊಟ್ಟನು. ಹೀಗೆ ದಾನಕೊಟ್ಟ ಸ್ಥಳದಲ್ಲಿ ತಮಗೆ ವಾಸಿಸಲು ಅಧಿಕಾರವಿಲ್ಲವೆಂದು ಪರಶು ರಾಮರು ತಮ್ಮ ಶಕ್ತಿಯಿಂದ ಸಮುದ್ರವನ್ನೇ ಹಿಂದೆ ಸರಿಸಿ ತಮಗಾಗಿ ಸಮುದ್ರದಂಡೆಯಲ್ಲಿ ಸ್ಥಳ ನಿರ್ಮಾಣಮಾಡಿಕೊಂಡರು. ಆದುದರಿಂದ ಈ ಕ್ಷೇತ್ರವು ಪರಶುರಾಮ ಕ್ಷೇತ್ರವೆಂದು ಪ್ರಸಿದ್ಧಿ ಪಡೆಯಿತು. ಪರಶುರಾಮನು ತಾನು ಸಮುದ್ರದಿಂದ ಸೆಳೆದುಕೊಂಡಷ್ಟು ಭೂಭಾಗ ವನ್ನು ರಾಮ ಭೋಜನೆಂಬ ರಾಜನವಶಕ್ಕೆ ವಹಿಸಿದನಂತೆ. ಒಮ್ಮೆ ಈ ರಾಜ ಅಶ್ವಮೇಧ ಯಾಗ ಮಾಡಲು ಪರಶುರಾಮನನನ್ನು ಆಹ್ವಾನಿಸಿದನಂತೆ. ಅವರು ಕೂಡಲು ಬೆಳ್ಳಿಯ ಮಣೆಯೊಂದನ್ನು (ರಜತ ಪೀಠ) ಮಾಡಿಸಿದ್ದನಂತೆ. ಯಾಗವು ಮುಗಿದ ನಂತರ ಆ ಪೀಠವು ಪಾತಾಳಕ್ಕೆ ಇಳಿದು ಮರೆಯಾಯಿತಂತೆ. ಆ ಸ್ಥಳದಲ್ಲಿ ಲಿಂಗಾಕಾರದ ಶಿಲೆಯೊಂದು

ಆವಿರ್ಭೂತವಾಯಿತೆಂದೂ ಅದರಲ್ಲಿ ಪರಶುರಾಮನ ಸಾನಿಧ್ಯವಿದೆ ಎಂದೂ ಪ್ರತೀತಿ ಇದೆ. ಇದೇ ಇಂದಿನ ಅನಂತಾಸನ ಅಥವಾ ಅನಂತೇಶ್ವರ ದೇವರು. ಅನಂತಾಸನೇ ಶ್ರೀ ಪರಶು ರಾಮದೇವರು. ಆದರೆ ಅವರು ಲಿಂಗಾಕಾರದಲ್ಲಿರುವರು. ಇದೇ ಉಡುಪಿಯ ಪ್ರಾಚೀನ ದೈವ. ಅನಂತೇಶ್ವರನ ಗುಡಿಯೇ ಶಿವಬೆಳ್ಳಿಯ ಜೀವನಾಡಿ. ಇಲ್ಲಿಯೆ ಮಧ್ವಾಚಾರ್ಯರು ತಮ್ಮ ಪಾಠ ಪ್ರವಚನಗಳನ್ನೆಲ್ಲಾ ಈ ಗುಡಿಯಲ್ಲಿಯೇ ನಡೆಸುತ್ತಿದ್ದರು. ಕಡೆಗೆ ಅವರು ಮರೆಯಾದುದೂ ಈ ಗುಡಿಯ ಒಳಕಟ್ಟೆಯ ಮೇಲೆಯೇ. ಇಂದಿಗೂ ಪರ್ಯಾಯ ಸ್ವಾಮಿಗಳು ಮೊದಲು ಅನಂತೇಶ್ವರನ ದರ್ಶನಮಾಡಿ ಅನಂತರ ಕೃಷ್ಣಗುಡಿಗೆ ಬರಬೇಕೆಂಬ ಸಂಪ್ರದಾಯ ವಿದೆ.

ದ್ವಾಪರಯುಗದಲ್ಲಿ ಶ್ರೀಕೃಷ್ಣನ ಅವತಾರವಾಗಿದ್ದು ಶ್ರೀಕೃಷ್ಣನು ನಂದ ಗೋಕುಲದಲ್ಲಿ ಯಶೋಧೆಯ ಮಗನಾಗಿ ಬೆಳೆದನು. ಮುಂದೆ ದ್ವಾರಕೆಗೆ ಬಂದಾಗ ತಾಯಿ ಯಶೋಧೆಯು ಶ್ರೀಕೃಷ್ಣನ ಮೂರ್ತಿಯೊಂದನ್ನು ಮಾಡಿಸಿದ್ದು ಅದನ್ನು ನೋಡಿ ಆನಂದ ಪಡುತ್ತಿದ್ದಳು. ಯಶೋಧೆಯ ತರುವಾಯ ಇದು ರುಕ್ಮಿಣಿಯ ಕೈಗೆ ಬಂತು. ಅವಳು ಅದನ್ನು ಭಕ್ತಿಯಿಂದ ಪೂಜಿಸುತ್ತಿದ್ದಳು. ದ್ವಾಪರಾಂತ್ಯದಲ್ಲಿ ಶ್ರೀಕೃಷ್ಣನ ಆದೇಶದಂತೆ ಅರ್ಜುನನು ಅದನ್ನು ಉಸುಕಿನಲ್ಲಿ ಆಳವಾದ ಸ್ಥಳದಲ್ಲಿ ಹೂಳಿದನು. ಎಷ್ಟೋ ವರ್ಷಗಳು ಗತಿಸಿ ಉಸುಕು ಗಟ್ಟಿಯಾಗಿ ಕಲ್ಲಿನಂತೆ ಆಯಿತು. ಮತ್ತು ಇಡಿ ದ್ವಾರಕೆ ಸಮುದ್ರದಲ್ಲಿ ಮುಳುಗಿತು.

## 95. (ಮಲ್ಪೆ) ಒಡಭಾಂಡೇಶ್ವರ :

ಉಡುಪಿಯಿಂದ 4 ಕಿ.ಮಿ. ಭಾಂಡ ಮುನಿ ತಪಸ್ಸು ಮಾಡಿದ ಸ್ಥಳ. ಗೋಪಿಚಂದನದ ಉಂಡೆ ಒಡೆದದ್ದು. ಆದುದರಿಂದ ಇದು ಒಡ ಭಾಂಡೇಶ್ವರ.

ಕಲಿಯುಗ ಪ್ರಾಪ್ತವಾಗಿ 5000 ವರ್ಷಗಳು ಗತಿಸಿದನಂತರ ಶ್ರೀ ಮಧ್ವಾಚಾರ್ಯರು ಒಂದು ದಿನ ಒಡಭಾಂಡೇಶ್ವರ ಎಂಬ ಸ್ಥಳದಲ್ಲಿ ಒಂದು ಬಂಡೆಗಲ್ಲಿನ ಮೇಲೆ ಧ್ಯಾನಾಸಕ್ತರಾಗಿದ್ದರು. ದೂರದಲ್ಲಿ ಒಂದು ಹಡಗು ಸರಕುಗಳಿಂದ ಕೂಡಿದ್ದು ಬಿರುಗಾಳಿಗೆ ಸಿಕ್ಕಿ ಹೊಯ್ದಾಟದಲ್ಲಿದ್ದಾಗ ತಮ್ಮ ಕಾವಿ ಶಾಟೆಯನ್ನು ಬೀಸಿ ತಮ್ಮ ಯೋಗ ಬಲದಿಂದ ಆ ಹಡಗನ್ನು ದಂಡೆಗೆ ಮುಟ್ಟಿಸಿದರು. ಆ ಹಡಗಿನ ಯಜಮಾನನು ಆಚಾರ್ಯರ ದಿವ್ಯ ತೇಜಸ್ಸು ಹಾಗೂ ಶಕ್ತಿಗಳನ್ನು ಪ್ರತ್ಯಕ್ಷವಾಗಿ ಕಂಡು ಹಡಗಿನಲ್ಲಿದ್ದ ಬೇಕಾದ ವಸ್ತು ಗಳನ್ನು ತಮಗೆ ಕಾಣಿಕೆಯಾಗಿ ಅರ್ಪಿಸುವೆನೆಂದು ಹೇಳಿದನು. ಆಗ ಆಚಾರ್ಯರು ಗೋಪಿ ಚಂದನದ ಗಟ್ಟಿಯಾದ ಭಾರವಾದ ವಸ್ತುವನ್ನು ತಂದುಕೊಡಲು ಹೇಳಿದರು. ಅನಿವಾರ್ಯವಾಗಿ ಅದನ್ನು ಅವರು ಆಚಾರ್ಯರಿಗೆ ಕೊಡಲೇ ಬೇಕಾಯಿತು. ಕೆಲವು ಕಾಲಾನಂತರ ಆಚಾರ್ಯರು ಆ ಚಂದನದ ಉಂಡೆಯನ್ನು ವಿಧಿವತ್ತಾಗಿ ಜಲಾಧಿವಾಸ ಮಾಡಿ ಹೊರತೆಗೆದರು. ಸಮುದ್ರ ತೀರದಿಂದ ಆ ಗೋಪಿಚಂದನದ ಗೆಡ್ಡೆಯನ್ನು ಹೊತ್ತು ತರುತ್ತಿದ್ದಾಗ ಅದುಒಡೆದು ಅದರೊಳಗಿಂದ ಕೃಷ್ಣ ವಿಗ್ರಹವು ಹೊರಗೆ ಬಂದಿತೆಂದು ಹೇಳುವರು. ಅದು ಒಡೆದಿದ್ದು ಕೇಕುಣ್ಣಾಯದ ದೇಗುಲದ ಬಳಿ. ಆದುದರಿಂದ ಈ ಮಾರ್ಗಮಧ್ಯದ ದೇವಾಲಯವನ್ನು ಆದಿ ಉಡುಪಿ ಎಂದು ಇಂದಿಗೂ ವ್ಯವಹರಿಸುತ್ತಾರೆ. ಈ ಬಳಿಯ ಸಮುದ್ರಸ್ನಾನ ವಿಶೇಷ ಪುಣ್ಯಕರ. ಈ

ಗುಡಿಯ ಪಕ್ಕದಲ್ಲಿ ಸ್ವಪ್ನದರ್ಶನ ಆಂಜನೇಯನಿದ್ದಾನೆ. ಬೇಡಿದ ಭಕ್ತರಿಗೆ ಸ್ವಪ್ನದಲ್ಲಿ ದರ್ಶನ ಕೊಟ್ಟು ಅವರ ಅಭೀಷ್ಟಗಳನ್ನು ನೆರವೇರಿಸುವನು. ಇಲ್ಲಿ ಮಧ್ವಾಚಾರ್ಯ ಸ್ಥಾಪನೆಯ ಬಲರಾಮನ ಗುಡಿಯೂ ಇದೆ. ಇವರ ಪ್ರತಿರೂಪದಂತೆಯೇ ಉಡುಪಿ ಶ್ರೀಕೃಷ್ಣ ಮಠದ ರಚನೆಯಾಗಿದೆ ಎಂಬುದು ತಿಳಿದವರ ಅಭಿಪ್ರಾಯ. ಕ್ರಿ.ಶ. 1297ರಲ್ಲಿ ಹೇವಿಲಂಬಿನಾಮ ಸಂವತ್ಸರ ಮಾಘ ಶುದ್ಧತೃತೀಯಾ ದಿನ ಆ ಕೃಷ್ಣ ಮೂರ್ತಿಯ ಪ್ರತಿಮೆಯನ್ನು ಪೂರ್ವಾಭಿಮುಖವಾಗಿ ಶ್ರೀ ಮಧ್ವಾಚಾರ್ಯರು ಪ್ರತಿಸ್ಥಾಪಿಸಿದರು. ಆದರೆ ಕನಕದಾಸರ ಭಕ್ತಿಗೆ ಮೆಚ್ಚಿ ಆತನಿಗೆ ದರ್ಶನ ಕೊಡಬೇಕೆಂದು ಮೂರ್ತಿಯು ಪಶ್ಚಿಮಾಭಿಮುಖವಾಗಿ ತಿರುಗಿ ದರ್ಶನಕೊಟ್ಟಿತು. ಹೀಗೆ ದರ್ಶನ ಕೊಟ್ಟ ಕಿಂಡಿಗೆ ಕನಕನ ಕಿಂಡಿ ಎನ್ನುವರು. ಮಧ್ವಾಚಾರ್ಯರು ಕೃಷ್ಣ ವಿಗ್ರಹವನ್ನು ಪ್ರತಿಷ್ಠೆಮಾಡಿದ ನಂತರವೇ ಊರಿಗೆ ಉಡುಪು ಅಥವಾ ಉಡುಪಿ ಎಂಬ ಹೆಸರು ಪ್ರಚಲಿತವಾಯಿತು. ಅಂದಿನಿಂದ ಸ್ಥಾಪಿತವಾದ ಎಂಟುಮಠಗಳ ಯತಿಗಳು ಪರ್ಯಾಯವಾಗಿ ಎರಡು ತಿಂಗಳಿಗೊಮ್ಮೆ ಶ್ರೀಕೃಷ್ಣನನ್ನು ಪೂಜಿಸಲು ಪ್ರಾರಂಭಿಸಿದರು. ಆಮೇಲೆ ವಾದಿರಾಜರ ಕಾಲದಲ್ಲಿ ಈ ಪರ್ಯಾಯ ಎಂಟು ಮಠಗಳ ನಡುವೆ 2 ವರ್ಷಕ್ಕೆ ಒಮ್ಮೆ ಎಂದಾಯಿತು. ಈ ಪರ್ಯಾಯ ಈಗಲೂ ಪ್ರತಿ ಸರಿ ಸಂಖ್ಯೆಯ ವರ್ಷದ ಜನವರಿ ಮೂರನೆ ವಾರ ಬರುತ್ತದೆ.

ಈ ಕೃಷ್ಣದೇವಾಲಯ, ಚಂದ್ರಮೌಳೇಶ್ವರ, ಅನಂತೇಶ್ವರ ದೇವಾಲಯಗಳ ದರ್ಶನದ ಜೊತೆಗೆ, ಮಧ್ವ ಸರೋವರದ ಸ್ನಾನ ಪುಣ್ಯ ಪ್ರದ. ಈ ಸರೋವರದ ಸುತ್ತಲೂ ಪಾವಟಿಗೆ ಗಳಿದ್ದು ಮಧ್ಯ ಮಂಟಪಕ್ಕೆ ಹೋಗಲು ಕಲ್ಲಿನ ಸೇತುವೆ ಇದೆ. ಉತ್ಸವ ಕಾಲದಲ್ಲಿ ತೆಪ್ಪೋತ್ಸವವು ಇಲ್ಲಿಯೇ ನಡೆಯುವುದು. ಸರೋವರದ ನೈರುತ್ಯಭಾಗದಲ್ಲಿ ಭಾಗೀರಥಿಯ ಗುಡಿಯಿದೆ. ಮಧ್ವ ಸರೋವರವು ಪುಣ್ಯಪ್ರದ ತೀರ್ಥವಾಗಿದ್ದು ಕೃತಯುಗದಲ್ಲಿ ವಿರಜಾ ತೀರ್ಥವೆಂದು ತ್ರೇತಾ ದ್ವಾಪರ ಯುಗದಲ್ಲಿ ಅನಂತ ಸರಸ್ಸೆಂದು ಮಧ್ವಾಚಾರ್ಯರ ತರುವಾಯ ಮಧ್ವ ಸರಸ್ಸು ಅಥವಾ ಮಧ್ವ ಸರೋವರವೆಂದೂ ಪ್ರಖ್ಯಾತವಾಗಿದೆ. ಶ್ರೀ ಮಧ್ವಾಚಾರ್ಯರ ಕಾಲ ದಿಂದಲೂ 12 ವರ್ಷಗಳಿಗೊಮ್ಮೆ ಮಧ್ವ ಸರೋವರಕ್ಕೆ ಭಾಗೀರಥಿ ಬರುವುದು ಪ್ರಸಿದ್ಧ ವಾಗಿದೆ. ಶ್ರೀ ಕೃಷ್ಣನ ಅಭಿಶೇಖಕ್ಕೆ ಈ ಸರಸ್ಸಿನ ಉದಕವನ್ನೇ ಉಪಯೋಗಿಸುತ್ತಾರೆ.

ಶ್ರೀಕೃಷ್ಣ ದೇವರ ಪೂಜೆಯನ್ನು ಪರ್ಯಾಯವಾಗಿ ಮಾಡುವ ಮಠಗಳು ಹಾಗೂ ಮೂಲ ಯತಿಗಳು, ಮತ್ತು ಅವರು ಆರಾಧಿಸುವ ಆರಾಧ್ಯ ದೈವಗಳ ಪಟ್ಟಿ ಇಂತಿವೆ.

| ಮೂಲಮಠಗಳು | ಮೂಲ ಯತಿಗಳು | ಆರಾಧ್ಯ ದೇವತೆ |
|---|---|---|
| 1. ಫಲಿಮಾರು | ಹೃಷಿಕೇಶ ತೀರ್ಥರು | ಶ್ರೀರಾಮ |
| 2. ಅದಮಾರು | ಶ್ರೀ ನರಹರಿ ತೀರ್ಥರು | ಶ್ರೀ ಕಾಳಿಮರ್ದನ ಕೃಷ್ಣ ದ್ವಂದ್ವ |
| 3. ಕೃಷ್ಣಾಪುರ | ಶ್ರೀ ಜನಾರ್ದನ ತೀರ್ಥರು | ದ್ವಿಬುಜ ಕಾಳಿಂಗ ಮರ್ದನ ದ್ವಂದ್ವ |
| 4. ಪುತ್ತಿಗೆ | ಶ್ರೀ ಉಪೇಂದ್ರ ತೀರ್ಥರು | ಶ್ರೀ ವಿಠಲ |
| 5. ಶಿರೂರು | ಶ್ರೀ ವಾಮನ ತೀರ್ಥರು | ಶ್ರೀ ವಿಠಲ ದ್ವಂದ್ವ |

| | | | |
|---|---|---|---|
| 6. | ಸೋದೆ | ಶ್ರೀ ವಿಷ್ಣುತೀರ್ಥರು | ಶ್ರಿ ಭೂವರಹ |
| 7. | ಕಾಣೆಯೂರು | ಶ್ರೀ ರಾಮತೀರ್ಥರು | ಶ್ರೀ ನೃಸಿಂಹ ದ್ವಂದ್ವ |
| 8. | ಪೇಜಾವರ | ಶ್ರೀ ಅಧೋಕ್ಷಜ ತೀರ್ಥರು | ಶ್ರಿ ವಿಠಲ |

## ಸಂದರ್ಶನ ಸ್ಥಳಗಳು

1) ಶ್ರೀ ಕೃಷ್ಣ : ಬಲಗೈಯಲ್ಲಿ ದಂಡ, ಎಡಗೈಯಲ್ಲಿ ಕಡೆಯುವ ಹಗ್ಗ ಹಿಡಿದಿರುವ 1¼ ಅಡಿ ಎತ್ತರದ ಅತ್ಯಂತ ಸುಂದರ ಮೂರ್ತಿ - ಬೆಳ್ಳಿ ತಗಡಿನಿಂದ ಹೊದಿಸಲ್ಪಟ್ಟ ಗಾಯತ್ರಿ ಯಂತ್ರ ಭದ್ರವಾದ ನವಗ್ರಹ ಕಿಟಕಿ ಮೂಲಕ ಈ ದೇವರ ದರ್ಶನ ಕೃಷ್ಣದೇವರ ಎದುರಿನಲ್ಲಿರುವ ಸದಾ ಉರಿಯುತ್ತಿರುವ ನಂದಾದೀಪ ಆಚಾರ್ಯರು ಹೊತ್ತಿಸಿದ ನಂದಾದೀಪ. ಇಂದೂ ಕೃಷ್ಣದೇವರ ಗರ್ಭಗುಡಿಯಲ್ಲಿ ಉರಿಯುತ್ತಿದೆ.

2) ಏಕಾಂತ ಸೇವಾ ಮಂಟಪ, ತೊಟ್ಟಿಲು ಸೇವಾ ಕಾರ್ಯದ ಸ್ಥಳ ಶಯನೋತ್ಸವ ಗೃಹ.

3) ಶ್ರೀಗಳವರ ಸರ್ವಜ್ಞ ಪೀಠ.

4) ಮುಖ್ಯ ಪ್ರಾಣದೇವರ ಗುಡಿ (ಉತ್ತರಕ್ಕೆ)

5) ಗರುಡ ದೇವರ ಗುಡಿ (ದಕ್ಷಿಣಕ್ಕೆ)

6) ಭಗವತ್ಪಾದಾಚಾರ್ಯರ ಮೂರ್ತಿ ಗುಡಿಯ ಎಡಭಾಗದಲ್ಲಿ ಒಳಗೆ (ಶ್ರೀವಾದಿರಾಜ ಸ್ವಾಮಿಗಳ ಸ್ಥಾಪನೆ)

7) ಚಂದ್ರಮೌಳೀಶ್ವರ ಗುಡಿ (ಎದುರು ತಗ್ಗಾದ ಸ್ಥಳದಲ್ಲಿ)

8) ಅನಂತೇಶ್ವರ ದೇವಾಲಯ — 9ನೇ ಶತಮಾನದ ಗಜಪೃಷ್ಠಕಾರದ ದೇವಾಲಯ ಆಚಾರ್ಯರು ಅಂತರ್ಧಾನವಾದ ಜಗುಲಿ ಸ್ಥಳವಿದೆ.

9) ಮಧ್ವ ಸರೋವರ - ಭಾಗೀರತಿ ಗುಡಿ

**ಮುಖ್ಯ ಉತ್ಸವಗಳು :**

ಶ್ರೀಕೃಷ್ಣಜಯಂತಿ

ಲಕ್ಷ ದೀಪೋತ್ಸವ

ಪರ್ಯಾಯ ಮಹೋತ್ಸವ

ಮಧ್ವ ನವಮಿ

ಹನುಮ ಜಯಂತಿ

ವಸತಿಗೆ ಇಂದ್ರಪ್ರಸ್ಥ ಲಾಡ್ಜ್ - ವಿಚಾರಿಸುವುದು Phone 22222

## 96. ಬೆಳ್ಳೆ (ಪಾಜಕ) ಮೂಡು ಮಠ :

ಉಡುಪಿಯಿಂದ 8ಕಿ.ಮಿ. ಮಂಗಳೂರು ಉಡುಪಿ ರಾಜಮಾರ್ಗದಲ್ಲಿ ಕಟ್ಪಾಡಿ ಬಳಿ ತಿರುರಸ್ತೆಯಲ್ಲಿ 4ಕಿ.ಮಿ.

ಇದು ಮಧ್ವಾಚಾರ್ಯರ ಅವತಾರ ಭೂಮಿ, ಇಲ್ಲಿ ಅವರ ಬಾಲಲೀಲೆಗಳನ್ನು ನೆನಪಿಸುವ ಅನೇಕ ಕುರುಹುಗಳು ಇವೆ. ಇವರ ಪೂರ್ವಾಶ್ರಮದ ಮನೆ, ಅಕ್ಷರಾಭ್ಯಾಸದ ಶಿಲೆ, ವಾಸು

ದೇವ ತೀರ್ಥ, (ದಂಡ ತೀರ್ಥ) ಹಾಲು ಮೊಸರು ಪಾತ್ರೆಗಳ ಮೇಲೆ ಚಿಕ್ಕವಯಸ್ಸಿನಲ್ಲಿಯೇ ಆಚಾರ್ಯರು ಮುಚ್ಚಿಟ್ಟ ಭಾರಿ ತೂಕ ಪ್ರಮಾಣದ ಬಂಡೆ ಮುಚ್ಚಲಗಳು, ಇವುಗಳನ್ನು ನೋಡಬಹುದು. ಅಲ್ಲದೇ ಹೊಸ ಮತವನ್ನೂ ಪ್ರಚಾರ ಮಾಡುವೆನೆಂದು ತನ್ನ ತಂದೆಗೆ ನಂಬುಗೆ ಬರುವಂತೆ ಒಣಕೋಲನ್ನು ಚಿಗುರಿಸಿದ ಸ್ಥಳ. ತಂದೆಯ ಸಾಲಗಾರನೊಬ್ಬನಿಗೆ ಹುಣಸೇ ಬೀಜಗಳನ್ನಿತ್ತು ಆತನ ಮನಸ್ಸಿಗೆ ಅಪೂರ್ವ ತೃಪ್ತಿಯನ್ನಿತ್ತ ಸ್ಥಳ ಇವುಗಳೂ ಇವೆ.

Phone : 08252 - 59013

## 97. ಕುಂಜಾರು (ವಿಮಾನಗಿರಿ)

ಇದು ಕುರ್ಕಾಲು ಹಳ್ಳಿಯ ಭಾಗ. ಪಾಜಕಕ್ಕೆ ಹೋಗುವ ಮೊದಲೇ ಪರಶುರಾಮ ಗಿರಿ (200 ಅಡಿ), ಕುಂಜಾರು ಗಿರಿ(300 ಅಡಿ), ಇವು ಸಿಗುತ್ತವೆ. ಪರಶುರಾಮಗಿರಿಯಲ್ಲಿ ಪರಶುರಾಮನ ಗುಡಿಯೂ ಕುಂಜಾರು ಗಿರಿಯಲ್ಲಿ ಮಹಿಷಾಸುರ ಮರ್ದಿನಿಯಾದ ದುರ್ಗಿಯ, (ಕಂಸನು ಕೊಲ್ಲಬೇಕೆಂದು ಬಂಡೆ ಕಲ್ಲಿನ ಮೇಲೆ ಅಪ್ಪಳಿಸಿದ ಹೆಣ್ಣುಶಿಶು ಇವಳೇ) ಗುಡಿಯೂ ಇದೆ. ಇದು ಕುಂಜಾರು ಗಿರಿಗೆ ಮೇಲೆ ಹೋಗಲು ಮೆಟ್ಟಿಲುಗಳೂ ಮತ್ತು ವಾಹನ ರಸ್ತೆಯೂ ಇದೆ. ಇದು ಕ್ಷೇತ್ರದ ಸುತ್ತಲೂ ವೀಕ್ಷಿಸುವ ಮತ್ತೊಂದು ಸ್ಥಳ. ತಾಯಿ ಕರೆ ಕೇಳಿ ದುರ್ಗಬೆಟ್ಟದಿಂದ ನೆಗೆದು ತಾಯಿಯ ಬಳಿ ಬಂದು ನಿಂತ ಜಾಗದಲ್ಲಿರುವ ಅವರ ಪಾವನ ಪಾದಗಳ ಚಿನ್ಹೆ, ಸರ್ಪರೂಪದ ಮಣಿ ಮಂತನನ್ನೂ ತಮ್ಮ ಪಾದಗಳಿಂದ ಜಜ್ಜಿ ಕೊಂದ ಸ್ಥಳ. ಇವುಗಳನ್ನು ನೋಡಬಹುದು. ಆಚಾರ್ಯರ ಪಾದದ ಚಿನ್ಹೆ ಇರುವೆಡೆ ಶ್ರೀ ವಾದಿರಾಜರು ಪ್ರತಿಷ್ಟಾಪಿಸಿದ ಶ್ರೀ ಮದ್ವಾಚಾರ್ಯರುಳ್ಳ ಗುಡಿಯು ಕಂಗೊಳಿಸುತ್ತಿದೆ. ಇದು ಈಗ ಕಾಣೆಯೂರು ಮಠದ ಆಡಳಿತದಲ್ಲಿದೆ. ದುರ್ಗಾ ಬೆಟ್ಟದ ನಾಲ್ಕು ಬದಿಗಳಲ್ಲಿ ಎಂದರೆ ಮೂಡು ಬದಿಯಲ್ಲಿ ಪರಶುತೀರ್ಥ, ತೆಂಕುಬದಿಯಲ್ಲಿ ಧನುಷ್ ತೀರ್ಥ, ಪಡು ಬದಿಯಲ್ಲಿ ಗದಾತೀರ್ಥ, ಬಡಗು ಬದಿಯಲ್ಲಿ ಬಾಣ ತೀರ್ಥಗಳೆಂಬ ನಾಲ್ಕು ಪುಣ್ಯ ತೀರ್ಥಗಳಿವೆ. ಅವುಗಳ ಸ್ನಾನವು ಸಕಲ ಪಾಪಪರಿಹಾರಕವೆಂದು ಪ್ರಸಿದ್ಧ ವಾಗಿದೆ. ಶ್ರೀ ಹರಿಗೆ ಸಮ್ಮತವಾದ ಸನ್ಮತವೊಂದನ್ನು ಪ್ರಚಾರಮಾಡಿ ಜಗತ್ತಿನ ಸಜ್ಜನರನ್ನೂ ಉದ್ಧಾರಮಾಡಿದ ಶ್ರೀ ಮದ್ವಾಚಾರ್ಯರ ಅವತಾರ ಭೂಮಿಯಾದ ಈ ಪುಣ್ಯ ಪ್ರದೇಶವನ್ನು ಸಂದರ್ಶಿಸುವುದು ಜನ್ಮ ಸಾಫಲ್ಯಕ್ಕೆ ಸಾಧಕವಾಗಿದೆ. ಗಂಗಾದಿ ಜಪತೀರ್ಥಗಳಿಗೆ ಉಗಮಸ್ಥಾನ ಹಿಮಾಲಯಾ. ಆದರೆ ಹಿರಿಯ ಚೇತನವಾದ ಮದ್ವರ ಜನ್ಮ ಭೂಮಿ ಪಾಜಕ ಹಿಮಾಲಯಕ್ಕಿಂತಲೂ ಮಿಗಿಲು. ಸತ್ಯಲೋಕಾದಿಪತಿಗಳೂ ಶುದ್ಧ ಭಾಗವತ ದರ್ಮರತರೂ ಆದ ಸಾಕ್ಷಾತ್ ವಾಯುದೇವರು ಅವತರಿಸಿದ ಭೂಮಿ ಎಂದಮೇಲೆ ಪಾಜಕಕ್ಷೇತ್ರವು ತುಂಬಾ ಪಾವನ.

## 98. ಬನ್ನಂಜೆ :

ಉಡುಪಿಯಿಂದ ಮಲ್ಪೆಗೆ ಹೋಗುವ ದಾರಿಯಲ್ಲಿದೆ. ಇಲ್ಲಿಯ ರುದ್ರದೇವಾಲಯಕ್ಕೆ (ಮಹಾಲಿಂಗೇಶ್ವರ) ಆಚಾರ್ಯರು ಸಂದರ್ಶನ ಮಾಡಿದ ಸ್ಥಳ ತಾಳೆ ಕುಡೆ ದೇವಾಲಯವೆಂದು ಇದನ್ನು ಕರೆಯುತ್ತಿದ್ದರು.

## 99. ಹೂವಿನ ಕೆರೆ :

ಕೋಟೇಶ್ವರದಿಂದ 5 ಕಿ.ಮಿ. ಕುಂದಾಪುರ ತಾಲ್ಲೂಕು. ಇದು ವಾದಿರಾಜರ ಅವತಾರ ಭೂಮಿ. ಉಡುಪಿ ಜಿಲ್ಲೆಯ ಕುಂಭಾಸಿ ಬಳಿ ಹೂವಿನ ಕೆರೆ ಎಂಬ ಗ್ರಾಮವಿದೆ. ರಾಮಭಟ್ಟ, ಗೌರಿ ದೇವಿಯರೆಂಬ ದಂಪತಿಗಳು ವಾಗೀಶತೀರ್ಥರ ಬಳಿಗೆ ಬಂದು ಮಗನಿಗಾಗಿ ಬೇಡಿದರು. ಬೇಡಿಕೆ ಈಡೇರಲು ಅವರಿಗೆ ಪ್ರಥಮತಃ ಪುತ್ರ ಸಂತಾನವಾಗುವುದು ಅವನು ಮಾತ್ರ ನಮ್ಮವ ನಾಗುವನು ಎಂಬ ಆಶೀರ್ವಾದ ಮಾಡಿದರು. ಸಾಧನ ದ್ವಾದಶಿ ದಿನ ದನಗಳ ಹಿಂಡೊಂದು ಹಿಂದಿನ ಗದ್ದೆಗೆ ನುಗ್ಗಿತು. ಅದನ್ನೋಡಿಸಲು ಗೌರಮ್ಮ ಹೊರಗೆ ಬಂದಳು. ಪ್ರಸವವೇದನೆ ಪ್ರಾರಂಭ ವಾದೊಡನೆ ಮರದಡಿಯಲ್ಲಿ ವಿಶ್ರಮಿಸಿಕೊಂಡಳು. ವಿಶ್ರಮಿಸಿಕೊಂಡು ಮನೆಗೆ ಬರಬೇಕೆನ್ನು ವಷ್ಟರಲ್ಲಿ ಪ್ರಸವವಾಯಿತು. ಹೀಗೆ ಕಾಡಿನಲ್ಲಿ ಜನನವಾಯಿತಲ್ಲಾ ಎಂಬ ವ್ಯಾಕುಲ, ಅವಳಿಗೆ ತಲೆದೋರಿತು. ವಾಧೀಶ ತೀರ್ಥರಿಗೆ ಇದು ತಿಳಿದು ಸಂತೋಷಪಟ್ಟು, ಮಗುವನ್ನು ಚಿನ್ನದ ಹರಿವಾಣದಲ್ಲಿಟ್ಟು ಪ್ರೋಕ್ಷಿಸಿದರು. ಸುಸ್ನಾತಳಾದ ಅದಿತಿಯ ಗರ್ಭ ದಲ್ಲಿ ವಾಮನನುದಿಸಿದಂತೆ ಗೌರಿದೇವಿಯ ಉದರದಲ್ಲಿ ಭೂವರ ನುದಿಸಿದನು. ಭೂವರ ನೆಂದು ನಾಮಕರಣ ಮಾಡಿದರು. ಭೂವರಾಹ ಮೂರ್ತಿಗೆ ಅಭಿಶೇಖವಾದ ಕ್ಷೀರವೇ ಶಿಶು ವಿಗೆ ಆಹಾರವಾಯಿತು. ಹೀಗೆ ವಾದಿರಾಜರು ಹೂವಿನಕೆರೆಯಲ್ಲಿ ಕ್ರಿ.ಶ.1480ರಲ್ಲಿ ಅವತಾರ ಮಾಡಿದರು. ಈ ಸ್ಥಳಕ್ಕೆ ಗೌರಿಗದ್ದೆ ಎಂಬ ಹೆಸರೂ ಇದೆ. ಜನನ ಸ್ಥಳವೆಂದು ತೋರಿಸಲು ಶಿಲಾಮಂಟಪ ವೊಂದು ಅಲ್ಲಿ ಈಗ ನಿರ್ಮಾಣವಾಗಿದೆ. ಭಟ್ಟರ ಮನೆ ಈಗ ಸ್ವಾದಿ ಮಠಕ್ಕೆ ಸೇರಿದೆ. ಈಗಲೂ ವಾದಿರಾಜರ ಆರಾಧನೆಯ ಕಾಲದಲ್ಲಿ ಗೌರಿಗದ್ದೆಯಲ್ಲಿ ಬೆಳೆದ ಅಕ್ಕಿಯನ್ನು ನಿವೇದನೆಗಾಗಿ ಉಪಯೋಗಿಸಲ್ಪಡುತ್ತಿದೆ. (ನೈವೇದ್ಯ)

## 100. ಕಾಪು :

ಉಡುಪಿ-ಮಂಗಳೂರು ಹೆದ್ದಾರಿಯಲ್ಲಿ ಉಡುಪಿಯಿಂದ 12 ಕಿ.ಮಿ. ಶ್ರೀಮದ್ವಾಚಾರ್ಯರು ಪೂರ್ವಾಶ್ರಮದಲ್ಲಿ ಗುರುಕುಲ ವಾಸದಲ್ಲಿದ್ದಾಗ ನಿರ್ಮಿಸಿದ ದಂಡತೀರ್ಥವಿದೆ.

## 101. ಕೊಡವೂರು :

ಉಡುಪಿಯಿಂದ 6 ಕಿ.ಮಿ. ಆಚಾರ್ಯರು 3 ವರ್ಷದ ಬಾಲಕನಾಗಿದ್ದಾಗ ಇಲ್ಲಿಯ ಶಂಕರನಾರಾಯಣ ದೇವಾಲಯಕ್ಕೆ ಸಂದರ್ಶನ ಮಾಡಿದ ಸ್ಥಳ. ಕ್ರೊಡಾಶ್ರಮವೆಂದೂ ಪುರಾಣದಲ್ಲಿ ಹೇಳಿದ ಸ್ಥಳ. ಇಲ್ಲಿ ಗಣಪತಿಯ ದೇವಾಲಯವೂ ಉಂಟು.

## 102. ನಿಡಂಬೂರು :

ಉಡುಪಿಯ ಉತ್ತರಕ್ಕೆ 2ಕಿ.ಮಿ. ಇಲ್ಲಿ ವಾದಿರಾಜರು ಸ್ಥಾಪಿಸಿದ ಪ್ರಾಣದೇವರ ಗುಡಿ ಇದೆ. ಪರ್ಯಾಯಕ್ಕೆ ಕೂಡುವ ಮುನ್ನ ಪ್ರತಿಯೊಬ್ಬ ಉಡುಪಿ ಅಷ್ಟಮಠದ ಯತಿಗಳು ಈ ಪ್ರಾಣದೇವರ ಪೂಜೆ ಮಾಡಿದ ನಂತರವೇ ಪರ್ಯಾಯಕ್ಕೆ ಕೂಡುತ್ತಾರೆ.

## 103. ನಂದಿ ಕೂರು :

ಉಡುಪಿಯಿಂದ 25 ಕಿ.ಮಿ. ಇದು ಅಚ್ಯುತ ಪ್ರೇಕ್ಷಾಚಾರ್ಯರ ಜನ್ಮಸ್ಥಳ. ಇಲ್ಲಿ ಮಹಿಷಾಸುರ ಮರ್ದಿನಿಯ ದೇವಸ್ಥಾನವಿದೆ.

## 104. ಪೆರಡೂರು :

ಉಡುಪಿಯಿಂದ 19ಕಿ.ಮಿ. ಉಡುಪಿ - ಸೋಮೇಶ್ವರ - ಸಾಗರ ಮಾರ್ಗ. ಇಲ್ಲಿ ಸುಪ್ರಸಿದ್ಧ ಅನಂತ ಪದ್ಮನಾಭ ದೇವಾಲಯವಿದೆ. ದೇವರು ಅನಂತ ದೇವ ಸುಮಾರು 14ನೆಯ ಶತಮಾನದಷ್ಟು ಹಿಂದಿನದು. ವಿಜಯನಗರ ಶಿಲ್ಪದ ಮಾದರಿಯಂತೆ ಇದೆ. ಕೊಲ್ಲೂರು ಮೂಕಾಂಬಿಕಾ ಕ್ಷೇತ್ರವನ್ನು ಬಿಟ್ಟರೆ ಇಷ್ಟು ಮಹತ್ವದ ದೇವಾಲಯ ಬೇರೊಂದಿಲ್ಲ. ಪ್ರತಿ ತಿಂಗಳು ಸಂಕ್ರಮಣದ ದಿನದಂದು ನಡೆಯುವ ಉತ್ಸವಕ್ಕೆ ಸಾವಿರಾರು ಜನ ಸೇರುತ್ತಾರೆ.

## 105. ಕ್ರೊಡ ಶಂಕರನಾರಾಯಣ :

ಕುಂದಾಪುರಕ್ಕೆ 28 ಕಿ.ಮಿ.

ಕುಂದಾಪುರದಿಂದ ಹುಲಿಕಲ್ ಮೂಲಕ ಸಾಗರ ಶಿವಮೊಗ್ಗಗಳಿಗೆ ಬರುವಾಗ ದಾರಿಯಲ್ಲಿ ಈ ಕ್ಷೇತ್ರವಿದೆ. ಶುಕ್ತಿಮತಿ ನದಿ ತೀರದಲ್ಲಿದೆ. (ವರಾಹಿ) ಹರಿಹರರು ಏಕಧಾರಿ ಗಳಾಗಿ ದರ್ಶನ ಕೊಟ್ಟಸ್ಥಳ. ಹರಿಹರರಲ್ಲಿ ಭೇಧ ಕಲ್ಪಿಸಿ ಜಗಳ ಮಾಡುತ್ತಿದ್ದ ಖರ ರಟ್ಟರೆಂಬ ಅಸುರರ ಸಂಹಾರದ ಸ್ಥಳ. ಕ್ರೊಡನೆಂಬ ಮುನಿಗೆ ಅನುಗ್ರಹ ಮಾಡಲು ಹರಿಹರರು ಏಕಕಾಲ ದಲ್ಲಿ ಲಿಂಗರೂಪದಲ್ಲಿ ಪ್ರತ್ಯಕ್ಷರಾಗಿದ್ದ ಕ್ಷೇತ್ರ. ಇಲ್ಲಿ ಒಂದೇ ಲಿಂಗದಲ್ಲಿ ಬಲ ಭಾಗವನ್ನು ನಾರಾಯಣ, ಎಡಭಾಗವನ್ನು ಶಂಕರ ಎಂದು ಕರೆಯುವರು. ವಿಷ್ಣುವಿನ ಭಾಗವು ದಪ್ಪ ವಾಗಿಯೂ ಶಿವನಿರುವ ಭಾಗ ಕೃಶವಾಗಿಯೂ ಇರುವುದು. ಇದು ಹರಿಯ ಉತ್ತಮತ್ವಕ್ಕೆ ಪ್ರತ್ಯಕ್ಷ ದರ್ಶನ. ಶಂಕರನಾರಾಯಣನು ಒಂದೇ ಲಿಂಗದಲ್ಲಿದ್ದರೂ ಇಬ್ಬರಿಗೂ ಭೇದವಿರು ವುದು.

ಇಲ್ಲಿ ಉಮೇಶ ರಮೇಶರು ಒಂದೇ ಕಡೆ ಇದ್ದಾರೆ. ವಾದಿರಾಜರು ಈ ಕ್ಷೇತ್ರ ಸಂದರ್ಶನ ಮಾಡಿದ್ದರೆಂದು ಹೇಳಲಾಗಿದೆ. ದೇವಾಲಯದ ಪ್ರಾಕಾರದಲ್ಲಿ ಕೃಷ್ಣ-ಪಾರ್ಥೇಶ್ವರ, ಆಂಜನೇಯರ ಗುಡಿಗಳೂ ಇವೆ. ದೇವಾಲಯದಲ್ಲಿ ನೋಡಬೇಕಾದ ಅಪರೂಪದ ವಸ್ತು ವೆಂದರೆ 60 ಮಣ ಭಾರದ ಗಂಟೆ. ಈ ಗಂಟೆಯ ಶಬ್ದ 8 ಕಿ.ಮಿ. ದೂರವೂ ಕೇಳಬಹುದು.

ಕ್ರೋಡಮುನಿಯು ತಪಸ್ಸು ಮಾಡಿದ ಆಶ್ರಮ, ಸಮೀಪದಲ್ಲಿರುವ ಕ್ರೋಡಗಿರಿ ಎಂಬ ಬೆಟ್ಟದ ಮೇಲಿದೆ.

## 106. ಮರವಂತೆ :

ಕುಂದಾಪುರದಿಂದ 7 ಕಿ.ಮಿ.

ಸೌಪರ್ಣಿಕಾನದಿಯು ಇಲ್ಲಿ ದಕ್ಷಿಣಾಭಿಮುಖಿವಾಗಿ ಹರಿದು ಪಂಚ ಗಂಗಾವಳಿಯೊಂದಿಗೆ ಸಮುದ್ರ ಸೇರುವ ಸ್ಥಳ. ದಡದಲ್ಲಿ ವರಹಸ್ವಾಮಿ, ನರಸಿಂಹ, ಜನಾರ್ಧನರ ಗುಡಿಗಳಿವೆ. ಪ್ರಪಂಚದ ಅತಿ ಸುಂದರ ಕಡಲ ತೀರದಲ್ಲಿ ಇದೂ ಒಂದು. ನೋಟ ಅತ್ಯಂತ ರಮ್ಯ.

## 107. ಕುಂಬಾಸಿ :

ಕುಂದಾಪುರಕ್ಕೆ 5 ಕಿ.ಮಿ., ಹೂವಿನ ಕೆರೆಗೆ 3 ಕಿ.ಮಿ. ಉಡುಪಿ – ಕುಂದಾಪುರ ರಸ್ತೆ.

ಉಡುಪಿಯಿಂದ 30 ಕಿ.ಮಿ. ಇದಕ್ಕೆ ಗಜಪುರವೆಂಬ ಹೆಸರೂ ಇತ್ತು. ಕುಂಭನೆಂಬ ರಾಕ್ಷಸನಿಗೆ ಅಸಿ (ಖಡ್ಗ) ಯಾದ ಊರು. ಹಿಂದೆ ದ್ವಾಪರಯುಗದಲ್ಲಿ ಕುಂಭನೆಂಬ ಅಸುರನನ್ನು ಶ್ರೀಮಹಾಗಣಪತಿಯ ಅನುಗ್ರಹದಿಂದ ಭೀಮಸೇನನು ಇಲ್ಲಿ ಸಂಹರಿಸಿದ್ದರಿಂದ ಈ ಕ್ಷೇತ್ರ ಕುಂಭಾಸಿ ಕ್ಷೇತ್ರವೆಂಬುದಾಗಿ ಹೆಸರು ಪಡೆಯಿತು. ಹರಿಹರ ಸನ್ನಿಧಾನ ಹಾಗೂ ಆನೆಗುಡ್ಡೆ ಗಣಪತಿ. ನೋಡಲು ಭವ್ಯವಾಗಿರುವುದು. ಈ ದೇವಾಲಯ ಒಂದು ಸರೋವರದ ನಡುವೆ ನಿರ್ಮಿಸಲ್ಪಟ್ಟಿದೆ. ದೇವಾಲಯದ ಸುತ್ತಿನಲ್ಲಿ ಅತಿಚಿಕ್ಕ ಬಾವಿ ಯೊಂದಿದ್ದು ಅತ್ಯಂತ ಸ್ಪಟಿಕ ಶುದ್ಧ ಪಾರದರ್ಶಕ ಜಲವನ್ನು ಹೊಂದಿದೆ. ಇದಲ್ಲದೆ, ಪ್ರಸಿದ್ಧಿಯುಳ್ಳ ಎರಡು ಜಲಕುಂಡಗಳಿವೆ. ಈ ಹಿಂದೆ ಗೌತಮ ಋಷಿಗಳು ಇಲ್ಲಿಗೆ ಬಂದು ಗಂಗೆಯನ್ನು ತರಿಸಿ ಇಲ್ಲಿ ನೆಲೆಸುವಂತೆ ಮಾಡಿದ್ದರಂತೆ. ಅದಕ್ಕಾಗಿಯೇ ಈಕ್ಷೇತ್ರವು ಗೌತಮ ಕ್ಷೇತ್ರವೆಂದೂ ಕೂಡ ಪ್ರಸಿದ್ಧಿಯಾಗಿದೆ. ಇಲ್ಲಿಯ ಆನೆ ಗುಡ್ಡೆ ಗಣಪತಿಯು ಬೆಳೆಯುತ್ತಲೇ ಇದ್ದು ಭಕ್ತರಿಗೆ ಅಭಿಷ್ಟಪ್ರದನಾಗಿದ್ದಾನೆ. ಇಲ್ಲಿ ವರದರಾಜ ತೀರ್ಥರ (ಸೋದೆಮಠ)ಹಾಗೂ ವಿದ್ಯಾನಿಧಿ ತೀರ್ಥರ (ಕೃಷ್ಣಪುರದ ಮಠ) ಬೃಂದಾವನಗಳಿವೆ. ಭೂತರಾಜರ ಸನ್ನಿಧಿಯೂ ಇದೆ. ಶ್ರೀ ವಾದಿರಾಜರ ಪೂರ್ವಾಶ್ರಮದ ತಂದೆ ತಾಯಿಗಳಿಗೆ ಶ್ರೀ ವಾಗೀಶತೀರ್ಥರು ಫಲ ಮಂತ್ರಾಕ್ಷತೆ ನೀಡಿದ ಹಾಗೂ ಶ್ರೀವಾದಿರಾಜರಿಗೆ ಉಪನಯನವಾದ ಪವಿತ್ರ ಸ್ಥಳವೂ ಇದಾಗಿದೆ. ಇಲ್ಲಿ ಕೃಷ್ಣಾಪುರದ ವಿದ್ಯಾಧರ ತೀರ್ಥರು ಪ್ರತಿಷ್ಠಾಪಿಸಿದ ಪ್ರಾಣದೇವರುಳ್ಳ ಶ್ರೀ ಕೃಷ್ಣಾಪುರ ಮಠವಿದೆ. ಯಮ ಗುಹಾಲಯ ಎಂಬ ಹೆಸರಿನ ಗುಹೆಯೊಂದಿದ್ದು ಅದು ಈ ಕ್ಷೇತ್ರಕ್ಕೆ ಮುಖ್ಯ ಸ್ಥಾನೀಯವಾಗಿದೆ.

## 108. ಕೋಟೇಶ್ವರ :

ಕುಂಭಾಸಿಯಿಂದ 2 ಕಿ.ಮಿ. ಉಡುಪಿ ಕುಂದಾಪುರ ರಸ್ತೆ.

ಇದು ತುಳುನಾಡಿನ ಸಪ್ತಕ್ಷೇತ್ರಗಳಲ್ಲಿ ಒಂದು. ಇಲ್ಲಿ ಮಹಾಲಿಂಗೇಶ್ವರ ದೇವಾಲಯ ವಿದೆ. ಅದರ ಪಕ್ಕದಲ್ಲಿ ವಿಶಾಲವಾದ ಪುಷ್ಕರಿಣಿ ಇದೆ. ಇಲ್ಲಿ ಪರಮೇಶ್ವರನು ಕೋಟಿಲಿಂಗ ರೂಪಧರಿಸಿದ್ದಾನೆ. ತನ್ನನ್ನು ಕುರಿತು ತಪಸ್ಸು ಮಾಡುತ್ತಿದ್ದ ಕೋಟಿ ಸಂಖ್ಯಾತರಾದ ಮುನಿ ಗಳಿಗೆ ಕೋಟಿಲಿಂಗಗಳಾಗಿ ಈಶ್ವರ ದರ್ಶನ ಕೊಟ್ಟ ಸ್ಥಳ. ಈಗಲೂ ದೇವಾಲಯದ ಗರ್ಭ

ಗುಡಿಯಲ್ಲಿರುವ ಬಾವಿಯಲ್ಲಿ ಕೋಟಿಲಿಂಗಗಳಿವೆ ಎನ್ನುತ್ತಾರೆ. ಮೂಲೆಗಣಪತಿ, ಆದಿ ಗಣಪತಿ, ಕಪ್ಪುಶಿಲೆಯ ವೇಣುಗೋಪಾಲ ಸ್ವಾಮಿ ವಿಗ್ರಹಗಳಿವೆ. ಆದಿ ಗಣಪತಿಯ ಸೊಂಡಿಲ ವಿನ್ಯಾಸ ಬಲುವಿಶಿಷ್ಟವಾಗಿದ್ದು ಜನರ ಆಕರ್ಷಣೆಗೆ ಒಳಗಾಗಿದೆ.

## 109. ತೆಕ್ಕಟ್ಟೆ :

ಮಂಗಳೂರು-ಹೊನ್ನಾವರ ರಾಷ್ಟ್ರೀಯ ಹೆದ್ದಾರಿಯ ಬದಿಯಲ್ಲಿರುವ ಕ್ಷೇತ್ರ. ಇಲ್ಲಿ ರಾಘವೇಂದ್ರರ ಬೃಂದಾವನವಿದೆ.

## 110. ಉದ್ಯಾವರ :

ಉಡುಪಿಯಿಂದ 5 ಕಿ.ಮಿ. ಉದ್ಯಾವರ ನದಿಯ ದಡದಲ್ಲಿದೆ. ಸಮುದ್ರ ದಂಡೆಯ ಊರು. ಇಲ್ಲಿ ಸೋದೆ ಮಠದ ಶಾಖೆ ಇದೆ. ಅಣ್ಣಯ್ಯಚಾರ್ಯರ ಮಠವೆಂಬ ಇನ್ನೊಂದು ಮದ್ವಮಠವಿದೆ. ಸಮುದ್ರ ದಂಡೆಯ ಊರು. ಇಲ್ಲಿ ಅನಂತೇಶ್ವರ ಹಾಗೂ ಸುಬ್ರಮಣ್ಯನಂತೆ ಮುಖವಿರುವ ಬಲರಾಮರ ದೇವಸ್ಥಾನವಿದೆ.

## 111. ಕೋಟ :

ನರಸಿಂಹ ದೇವರ ಗುಡಿ ಇರುವುದು.

## 112. ಬ್ರಹ್ಮಾವರ :

ಉಡುಪಿಯಿಂದ 13 ಕಿ.ಮಿ. ಎಣ್ಣೆ ಹೊಳೆ- ಸುವರ್ಣನದಿಗಳ ಸಂಗಮ ಸ್ಥಳ. ಗಜಗೌರಿ, ಮಹಾಲಿಂಗೇಶ್ವರ, ಜನಾರ್ದನ, ಗೋಪಿನಾಥ ಮತ್ತು ಚತುರ್ಭುಜವುಳ್ಳ ಕೈಗಳಲ್ಲಿ ಅಂಕುಶವನ್ನೂ ಪಾಶ ಪದ್ಮಗಳನ್ನೂ ಹಿಡಿದಿರುವ ಗಜಗೌರಿ ಪ್ರತಿಮೆಗಳಿವೆ.

## 113. ಕೊಲ್ಲೂರು ಮೂಕಾಂಬಿಕಾಪುರ ಶ್ರೀಕ್ಷೇತ್ರ :

ಕೊಲ್ಲೂರು ಕುಂದಾಪುರಕ್ಕೆ 48 ಕಿ.ಮಿ.

ಉಡುಪಿಯಿಂದ ಸುಮಾರು 80 ಕಿ.ಮಿ. ಮಂಗಳೂರಿನಿಂದ ಸುಮಾರು 140 ಕಿ.ಮಿ. ಇಲ್ಲಿಗೆ ಮಂಗಳೂರಿನಿಂದ ಉಡುಪಿ, ಕುಂದಾಪುರ (42ಕಿ.ಮಿ) ಮಾರ್ಗವಾಗಿ ನೇರ ಬಸ್ ಸೌಕರ್ಯವಿದೆ. ತಮಿಳು ನಾಡು ಮತ್ತು ಕೇರಳಗಳಿಂದಲೂ ಬಸ್ ಸೌಕರ್ಯವಿದೆ.

ಇಂಥ ರಮ್ಯವಾದ ಕಾಡುಗಳ ನಡುವೆ ಪರಶುರಾಮ ದೇವರು ಮೂಕಾಂಬಿಕಾಮಾತೆಯ ಸಿದ್ಧಪೀಠವನ್ನು ಸ್ಥಾಪಿಸಿದ್ದಾರೆ. ಇವಳನ್ನು ಶ್ರೀ ವಾದಿರಾಜರು ಕಾತ್ಯಾಯಿನಿ ಎಂದು ಕರೆದಿದ್ದಾರೆ. ಇಲ್ಲಿ ಸ್ವರ್ಣ ರೇಖೆಯಿಂದ ಕೂಡಿದ ಸದಾಶಿವನ ಲಿಂಗವಿದೆ. ಕೋಲ ಋಷಿಯ ಪ್ರಾರ್ಥನೆ ಯಂತೆ ಉಮೆಯು ತನ್ನ ಪತ್ನಿ ಶಂಕರನೊಡಗೂಡಿ ಲಿಂಗರೂಪದಲ್ಲಿ ಪ್ರತ್ಯಕ್ಷವಾಗಿ ಮೂಕಾಸುರನನ್ನು ಕೊಂದ ಕಾರಣ ಈ ಸ್ಥಳಕ್ಕೆ ಕೋಲಪುರ ಅಥವಾ ಕೊಲ್ಲೂರು ಎಂದು ಹೆಸರಾಯಿತು. ಕೊಲ್ಲೂರು ಪ್ರಸಿದ್ಧವಾದ ಶಕ್ತಿ ಹಾಗೂ ಸಿದ್ಧಕ್ಷೇತ್ರ, ಇಲ್ಲಿ ದೇವಿ, ಲಕ್ಷ್ಮಿ

ಸರಸ್ವತಿ, ಶಕ್ತಿಯ ಮೂಲ. ತನ್ನ ವಿಶೇಷ ಕಟಾಕ್ಷ ದಿಂದ ಭಕ್ತರ ಕಾಮನೆಗಳನ್ನು ಪೂರೈಸುವ ಈ ದೇವಿಯು ತನ್ನ ಹೆಸರಿಗೆ ಅನ್ವರ್ಥವಾಗಿ ಶತ್ರುಗಳನ್ನು ಮೂಕರಾಗುವಂತೆ ಮಾಡಿದ್ದಾಳೆ. ಶ್ರೀದೇವಿಯು ನಾರಾಯಣನ ಏಕಾಂತ ಭಕ್ತ ರಲ್ಲಿರುವ ಹೆಚ್ಚಿನ ಪ್ರೀತಿ ಅನುಗ್ರಹಭಾವದಿಂದ ಇಂಥ ಕೆಲಸವನ್ನು ಮಾಡಿರುತ್ತಾಳೆ. ಇಲ್ಲಿಯ ಮತ್ತೊಂದು ಶಿಲ್ಪ ಪಂಚಮುಖ ಗಣೇಶ.

## 114. ಭದ್ರಗಿರಿ :

ಉಡುಪಿಯಿಂದ 8 ಕಿ.ಮಿ. ಎಣ್ಣೆ ಹೊಳೆ ಸ್ವರ್ಣ ನದಿಗಳ ಸಂಗಮ ಸ್ಥಳವಾಗಿದೆ. ಇಲ್ಲಿ ವೀರವಿಠಲನ ಮಂದಿರವಿದೆ. ಈ ದೇವಾಲಯವನ್ನು ಇತ್ತೀಚೆಗೆ ಬೆಂಗಳೂರಿನ ದಾಸ ಕೀರ್ತನ ಮಂಡಲಿಯವರು ಪುನರುದ್ಧಾರಗೊಳಿಸಿದ್ದಾರೆ.

## 115. ಸಾಲಿಗ್ರಾಮ :

ಉಡುಪಿಯಿಂದ 24 ಕಿ.ಮಿ. ಕುಂದಾಪುರದ ರಸ್ತೆಯಲ್ಲಿ. ಯೋಗಾನರಸಿಂಹ ದೇವರ ದೇವಾಲಯವಿದೆ. ಇದು ಸಾವಿರ ವರ್ಷಗಳಷ್ಟು ಹಳೆಯದು.

## 116. ದಂಡ ತೀರ್ಥ :

ಇದು ಉಡುಪಿಗೆ 10 ಕಿ.ಮಿ. ದೂರವಿದೆ. ಇಲ್ಲಿ ಶ್ರೀಮದ್ವಾಚಾರ್ಯರು ತನ್ನ ಬಾಲ್ಯದ ಗುರುಗಳಿಗೆ ದಕ್ಷಿಣಾರೂಪವಾಗಿ ದಂಡದಿಂದ ಸಮೃದ್ಧವಾದ ಜಲಾಶಯವನ್ನು ನಿರ್ಮಿಸಿದರು. ಅವರ ಹೊಲಗಳಿಗೆ ನೀರು ಹರಿಯುವಂತೆ ಮಾಡಿದುದರಿಂದ ಪ್ರಸಿದ್ಧಿಗೊಂಡಿದೆ. ಈ ತೀರ್ಥ ವಿರುವ ಸ್ಥಳದಲ್ಲಿ ಈಗ ಶ್ರೀಕೃಷ್ಣಪುರದ ಮಠಕ್ಕೆ ಸೇರಿದ, ಶ್ರೀ ವಿದ್ಯಾದೀಶ ತೀರ್ಥರು ಪ್ರತಿಷ್ಠಾಪಿಸಿದ ಪ್ರಾಣದೇವರು ಇದೆ. ಕೃಷ್ಣಾಪುರ ಮಠವೂ ಇಲ್ಲಿದೆ. ಪರ್ಯಾಯ ಪೀಠವನ್ನೂ ಆರೋಹಣ ಮಾಡುವ ಯತಿಗಳು ದಂಡತೀರ್ಥ ಮಠಕ್ಕೆ ಶಾಸ್ತ್ರೋಕ್ತವಾಗಿ ಸಂದರ್ಶನ ವನ್ನಿತ್ತು ಬರುವ ರೂಢಿ ಇದೆ.

## 117. ಉಂಡಾರು (ಇನ್ನಂಜೆ) :

ಉಡುಪಿ ತಾಲ್ಲೂಕಿನಲ್ಲಿದೆ. ಇಲ್ಲಿ ಬಾಲಕನೊಬ್ಬನ ಮುಗ್ಧ ಭಕ್ತಿಗೆ ಒಲಿದು ನೈವೇದ್ಯ ವನ್ನು ಭುಜಿಸಿದ ಶ್ರೀ ವಿಷ್ಣುಮೂರ್ತಿ ದೇವರ ಸನ್ನಿಧಿ. ವಿಶ್ವನಿಧಿ ತೀರ್ಥರ ಹಾಗೂ ಶ್ರೀ ವಿಶ್ವಾಧೀಶ ತೀರ್ಥರ ವೃಂದಾವನಗಳಿವೆ. (ಕುಕ್ಕೆ ಸುಬ್ರಮಣ್ಯ ಮಠ).

## 118. ಎಲ್ಲೂರು :

ಎಲ್ಲಾಪುರ ಎಂಬುದು ಇದರ ಪೂರ್ವದ ಹೆಸರು.

ಉಡುಪಿಯಿಂದ 25 ಕಿ.ಮಿ. ಉಡುಪಿ ಮಂಗಳೂರು ರಸ್ತೆಯಲ್ಲಿ ಉಚ್ಚಿಲಾ ಎಂಬ ಊರಿನಿಂದ 5 ಕಿ.ಮಿ. ದಕ್ಷ ಪ್ರಜಾಪತಿಯ ಯಜ್ಞವನ್ನು ಧ್ವಂಸಗೊಳಿಸಿದ, ಕಾಶಿ ಕ್ಷೇತ್ರದಿಂದ ಬಂದ ವಿಶ್ವೇಶ್ವರ ಎಂಬ ಹೆಸರಿನ ರುದ್ರದೇವರು ಇಲ್ಲಿ ನೆಲೆಸಿದ್ದಾರೆ ಎಂದು ಸ್ಥಳಪುರಾಣ

ಹೇಳುತ್ತದೆ. ನಂದೀಶ್ವರ ಎಂಬ ಹೆಸರೂ ಈ ದೇವರಿಗೆ ಇದೆ. ವಿಷ್ಣುದೇವಸ್ಥಾನಗಳಲ್ಲಿ ವಿಷ್ಣುವಾಹನವಾದ ಗರುಡನ ಸಂಕೇತವಾಗಿ ಗರುಡಗಂಬವೂ, ಶಿವದೇವಸ್ಥಾನಗಳಲ್ಲಿ ಶಿವನ ವಾಹನವಾದ ನಂದೀಶ್ವರನ ಸಂಕೇತವಾದ ವೃಷಭವೂ ಇರುವುದು. ಶ್ರೀವಾದಿರಾಜರು ಶಿವಲಿಂಗದ ದರ್ಶನ ವನ್ನು ಮಾಡುವಾಗ ಕ್ಷಣಕಾಲ ಮುಂದಿದ್ದ ಎತ್ತರವಾದ ನಂದಿಯು ಅಡ್ಡಿಯಾಗಲು ಅವರು ಅದನ್ನು ಕುರಿತು ಶ್ಲೋಕ ರಚಿಸಲು ಅದು ತಕ್ಷಣ ಬಾಗಿ ಕುಳಿತು ಶಿವನ ದರ್ಶನಕ್ಕೆ ಅವಕಾಶ ಮಾಡಿಕೊಟ್ಟಿತೆಂದು ಐತಿಹ್ಯವಿದೆ.

## 119. ನಡ್ಯಂತಾಡಿ (ಮದ್ಯವಾಟ ಮಠ) :

ಬಂಟವಾಳದಿಂದ 18 ಕಿ.ಮಿ. ದೂರದಲ್ಲಿ ಮದ್ವ ಎಂಬ ಸ್ಥಳವಿದೆ. ಇಲ್ಲಿಗೆ 3 ಕಿ.ಮಿ. ಉತ್ತರಕ್ಕೆ ಮಠವಿದೆ. ಇಲ್ಲಿಗೆ ಬೆಂಗಳೂರಿನಿಂದ ಚಾರ್ಮುಡಿಗೆ ಹೋಗುವ ಬಸ್ ದಾರಿಯಲ್ಲಿ ಕಾವಳ ಕಟ್ಟೆ ಎಂಬಲ್ಲಿ ಇಳಿದು 4 ಕಿ.ಮಿ. ನಡೆದು ಹೋಗಬೇಕು.

ಶ್ರೀ ಮದ್ವಾಚಾರ್ಯರು ಸುಬ್ರಮಣ್ಯ-ಉಡುಪಿಗಳಿಗೆ ಹೋಗುವಾಗ ಮಧ್ಯದಲ್ಲಿ ಮಾಧ್ಯಾಹ್ನಿಕ ಕೃತ್ಯಕ್ಕೆ ಉಕ್ತವಾಗಿದ್ದ ಸ್ಥಳವು ಮದ್ಯವಾಟ ಮಠ, ನಡ್ಯಂತಾಡಿ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ. ಶ್ರೀ ಮದ್ವಾಚಾರ್ಯರು ವಿಶ್ರಮಿಸಿಕೊಂಡಿದ್ದ ಮಂಟಪವೂ ಗೌತಮಕುಂಡ, ಗದಾ ತೀರ್ಥಗಳೂ ಇವೆ. ಇಲ್ಲಿ ಶಾಂತವಾತಾವರಣವಿದ್ದು ಆಚಾರ್ಯರು ಇಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದರೆಂದು ತೀರ್ಥಪ್ರಬಂಧದಲ್ಲಿ ವರ್ಣಿಸಿದೆ.,

ಮದ್ವಾಚಾರ್ಯರಿಗೆ ವೇದವ್ಯಾಸರು ತಮ್ಮ ನಿತ್ಯ–ಸನ್ನಿಧಾನ ಯುಕ್ತವಾದ 8 ವ್ಯಾಸಮುಷ್ಟಿ ಗಳನ್ನು ಅನುಗ್ರಹಿಸಿದರಷ್ಟೆ. ಅವುಗಳಲ್ಲಿ ಒಂದನ್ನು ಆಚಾರ್ಯರು ಈ ಮಠದಲ್ಲಿ ಸ್ಥಾಪಿಸಿದರು. ಪ್ರಕೃತ ಈ ವ್ಯಾಸಮುಷ್ಟಿಯು ಈಗ ಸೋದೆಮಠದಲ್ಲಿದೆ.

## 120. ಕಡ್ತಿಲಾ (ಸೇತುಶಿಲಾ) :

ಮಂಗಳೂರಿನಿಂದ 18 ಕಿ.ಮಿ.

ಶ್ರೀ ಮದ್ವಾಚಾರ್ಯರು ತಮ್ಮ ಗ್ರಂಥಗಳನ್ನು ಸ್ಥಾಪಿಸಿ ಭೂಗತಗಳನ್ನಾಗಿ ಮಾಡಿದ ಸ್ಥಳ ಸೇತುಶಿಲಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

ಈ ಕ್ಷೇತ್ರದಲ್ಲಿ ಆಚಾರ್ಯರು ಗೋಪಾಲಕೃಷ್ಣ ದೇವರನ್ನು ಸ್ಥಾಪಿಸಿ ಪೂಜಿಸಿದರು. ಇಲ್ಲಿ ಉಡುಪಿಯ ಅಷ್ಟಮಠದ ಯತಿಗಳು ಮಾತ್ರ ಪೀಠವನ್ನು ಮುಟ್ಟಿ ಪೂಜಾದಿಗಳನ್ನು ನೆರವೇರಿಸುವ ಅವಕಾಶವಿದೆ. ಇತರ ದಿನಗಳಲ್ಲಿ ಬ್ರಹ್ಮಚಾರಿಗಳು ದೂರದಲ್ಲಿಯೇ ಪೂಜೆ ನಡೆಸುವರು. ಕುಮಾರ ಪರ್ವತದಲ್ಲಿ ಆಚಾರ್ಯರ ಪೂರ್ವಾಶ್ರಮದ ತಮ್ಮಂದಿರಾಗಿದ್ದ ಶ್ರೀ ವಿಷ್ಣು ತೀರ್ಥರು ತಪೋನಿರತರಾಗಿದ್ದು ಸತ್ಸಿದ್ಧಾಂತವು ಖಿಲವಾದಾಗ ಇವರು ಪರ್ವತದಿಂದ ಇಳಿದುಬಂದು ಮದ್ವಾಚಾರ್ಯರು ಭೂಗತ ಮಾಡಿದ್ದ (ತಾಮ್ರದ ತಗಡಿನ ಮೇಲೆ ಬರೆಸಿದ್ದ) ಶಾಸ್ತ್ರಗ್ರಂಥಗಳನ್ನು ಹೊರತೆಗೆದು ಪುನಃ ಪ್ರಸಾರ ಮಾಡುವರು ಎಂಬ ವಿಚಾರವಿದೆ.

## 121. ಮದ್ವ :

ಮಂಗಳೂರಿನಿಂದ 40 ಕಿ.ಮಿ. ಮದ್ವಾಚಾರ್ಯರು ತಮ್ಮ ಪ್ರಯಾಣಕಾಲದಲ್ಲಿ ತಂಗಿದ್ದ ಸ್ಥಳ.

## 122. ಉಜಿರೆ :

ಉಚ್ಚಭೂತಿ ಎಂಬ ಶಬ್ದದಿಂದ ಉಲ್ಲೇಖಿಸಲ್ಪಡುವ ಇಲ್ಲಿಯ ಜನಾರ್ದನ ದೇವಾಲಯದಲ್ಲಿಯೇ ಶ್ರೀಮದ್ವಾಚಾರ್ಯರ 'ಕರ್ಮನಿರ್ಣಯ' ಗ್ರಂಥದ ಹಿನ್ನೆಲೆಯಲ್ಲಿ ವಾಕ್ಯಾರ್ಥ ನಡೆದಿದ್ದು.

## 123. ಕೊಕ್ಕಡ :

ಮಂಗಳೂರಿನಿಂದ 80 ಕಿ.ಮಿ. ವೈದ್ಯನಾಥನೇ ನಾಥನಾಗಿ ಉಳ್ಳ ಕ್ಷೇತ್ರ. ಇಡವಾಡಿತ್ತಾಯ ಎಂಬ ಭಕ್ತರ ಶ್ರೇಯಸ್ಸಿಗಾಗಿ ಆಚಾರ್ಯರು 'ಶ್ರೀ ಕೃಷ್ಣ ಮಹಾರ್ಣವ' ರೂಪ ತಾಳಿದ್ದ ಸ್ಥಳ. ಇಲ್ಲಿ ನೀಲಕಂಠೇಶ್ವರ ದೇವಾಲಯವಿದೆ.

## 124. ಕಟೀಲ್ :

ಮಂಗಳೂರಿನಿಂದ 27 ಕಿ.ಮಿ

ಇದು ಉಡುಪಿ ಮಂಗಳೂರು ಹೆದ್ದಾರಿಯ ಬದಿಯಲ್ಲಿ ಇದೆ. ಇದೊಂದು ನಿಶಾಂತ ರಮಣೀಯ ಸ್ಥಳ. ಇಲ್ಲಿ ಹರಿಯುವ ನಂದಿನಿ ನದಿಯು ಗುಡಿಯ ಹಿಂದೆ ಒಡೆದು ಗುಡಿಯ ಮುಂದೆ ಮತ್ತೆ ಕೂಡಿಕೊಂಡು ಹರಿದು ಹೋಗುತ್ತದೆ. ಈ ರೀತಿ ಬಂಡೆಗಳ ಮೇಲೆ ಹರಿಯುವಾಗ ಇದರ ಮೊರೆತವನ್ನು ಸುತ್ತಮುತ್ತಲೂ ಕೇಳಬಹುದು. ದ್ವೀಪದಂತೆ ಇರುವ ನಡುವಿನ ಬೋರು ಬಂಡೆಯ ಮೇಲೆ ಈ ಗುಡಿ ನಿಂತಿದೆ. ಇದಕ್ಕಾಗಿ ಇದನ್ನು 'ದ್ವೀಪದೇವಸ್ಥಾನ'ವೆನ್ನುವರು. ಗುಡಿಯೊಳಗೆ ಬರಲು ನದಿಯ ಮೇಲೆ ಸುಭದ್ರವಾದ ಕಾಲುದಾರಿಯನ್ನು ಮಾಡಿಸಿದ್ದಾರೆ. ಇಲ್ಲಿರುವ ದುರ್ಗಾಪರಮೇಶ್ವರಿ ಒಂದು 'ಶಕ್ತಿದೇವತೆ'. ಗರ್ಭಗುಡಿಯ ಒಳಗೆ ಲಿಂಗಾಕಾರದ ಪ್ರತೀಕವಿದೆ. ಇದನ್ನು ಮೂಲಸ್ಥಾನ ಎನ್ನುವರು. ಅದರ ಹಿಂಭಾಗದಲ್ಲಿ ಶಂಖಚಕ್ರ ಧಾರಿಣಿಯಾಗಿ ವರದಾಭಯ ಮುದ್ರೆಗಳಲ್ಲಿರುವ ಚತುರ್ಭುಜೆಯಾದ ದೇವಿಯ ಲೋಹಮಯ ಬಿಂಬವಿದೆ. ಇಲ್ಲಿ ಪೂಜೆ ಮಾಡುವವರು ವೈಷ್ಣವರು.

ಸ್ಥಳ ಮಹಾತ್ಮೆಯಂತೆ ಜಾಬಾಲಿ ಋಷಿಯು ತಪಸ್ಸುಮಾಡಿ ಕಾಮಧೇನುವಿನ ಮಗಳಾದ ನಂದಿನಿಯನ್ನು ಪಡೆದ. ನದಿಯ ಪರಿಸರದಲ್ಲಿ ಲೋಕಕಂಟಕನಾಗಿ ಮೆರೆಯುತ್ತಾ ಇದ್ದ ಅರುಣನೆಂಬ ರಾಕ್ಷಸನನ್ನು ಕಟಿ ಪ್ರದೇಶದಿಂದ ಉದ್ಭವಿಸಿದ ಆದಿಶಕ್ತಿ ನಂದಿನಿಯು ದುಂಬಿಯ ರೂಪತಾಳಿ ಹಾರಿಬಂದು ಆ ರಾಕ್ಷಸನನ್ನು ಕಚ್ಚಿ ಕಚ್ಚಿ ಸಂಹರಿಸಿದಳಂತೆ. ಇದಕ್ಕಾಗಿಯೇ ಮುಂದೆ ಈ ಸ್ಥಳವು ಕಟಿಲ್ ಎಂದಾಯಿತು. ಈ ಊರಿನ ವಿಶೇಷವೆಂದರೆ ಪೂಜೆಗೆ ತಂದ ಎಳನೀರನ್ನು (ಸಿಯಾಳ) ಕುಡಿಯಬಾರದೆಂಬುದು. ಅದು ನಿಶಿದ್ಧ. ಇಲ್ಲಿ

ಎಳನೀರಿನ ಅಭಿಷೇಕ ವಿಶಿಷ್ಟ ಸಂಪ್ರದಾಯ. ಸೌರಮಾನ ಪಂಚಾಂಗದ ಶುಕ್ರವಾರ ಇಲ್ಲಿ ಪವಿತ್ರವಾದ ದಿನ. ರೆಂಜಾಳ ಗೋಪಾಲಕೃಷ್ಣ ಶೆಣೈರವರು ಇಲ್ಲಿನ ದೇವಾಲಯದ ಕಂಬಗಳ ಮೇಲೆ ಸುಂದರ ಶಿಲ್ಪಗಳನ್ನು ಕೆತ್ತಿರುವರು.

## 125. ಕುಕ್ಕೆ ಸುಬ್ರಮಣ್ಯ :

ಪುತ್ತೂರಿನಿಂದ 33 ಕಿ.ಮಿ.

ಮೈಸೂರು-ಮಂಗಳೂರು ಹೆದ್ದಾರಿಯ ಸುಳ್ಯದಿಂದ 45 ಕಿ.ಮಿ. ಮಂಗಳೂರು ಕಡೆಯಿಂದ 55 ಕಿ.ಮಿ. ಹಿಂದೆ ಇದನ್ನು ಕುಕ್ಕೆಪಟ್ಟಣ, ಪುಷ್ಪಗಿರಿ ಎಂದು ಕರೆಯುತ್ತಿದ್ದರು.

ಪರಶುರಾಮ ಕ್ಷೇತ್ರವೆಂದೂ ಸ್ಕಂದ ಕ್ಷೇತ್ರವೆಂದೂ ಹೆಸರಿದೆ. ಸ್ಕಂಧ ಪುರಾಣದಲ್ಲಿ ಈ ಕ್ಷೇತ್ರದ ಮಹತ್ವ ಹೇಳಿದೆ. ಮತ್ತೊಂದು ವಿವರಣೆಯಂತೆ ಗರುಡನ ಭಾದೆಗಾಗಿ ವಾಸುಕಿಯು ತಪಸ್ಸು ಮಾಡಿ ಮಹೇಶ್ವರನನ್ನು ಒಲಿಸಿಕೊಂಡು ಆತನ ವರಪ್ರಸಾದದಿಂದ ಸುಬ್ರಣ್ಯನನ್ನು ಸುಬ್ರಹ್ಮಣ್ಯಾಂಶವನ್ನು ಪಡೆದು ಭಕ್ತಾಭಿಷ್ಟಪ್ರದನಾಗಿ ಇರುವ ಕ್ಷೇತ್ರ.

ಪರಶುರಾಮಕ್ಷೇತ್ರವೆಂದೂ, ಪುರಾಣಪ್ರಸಿದ್ಧವಾದ ದಕ್ಷಿಣೋತ್ತರ ಜಿಲ್ಲೆಗಳಲ್ಲಿ ಕಾಣ ಬರುವ ಸಪ್ತಕ್ಷೇತ್ರಗಳಲ್ಲಿ ಕುಮಾರಾದ್ರಿ ಎಂದು ಉಲ್ಲೇಖಿತವಾದ ಸ್ಥಳ. ಕುಮಾರಪರ್ವತ, ಶೇಷಪರ್ವತಗಳ ನಡುವೆ ಇರುವ ಪ್ರದೇಶ, ಶ್ರೀ ಸುಬ್ರಮಣ್ಯ ಕ್ಷೇತ್ರ. ಇಲ್ಲಿರುವ ಮಧ್ವ ಸಂಪ್ರದಾಯದ ಮಠಕ್ಕೆ ಎರಡು ವಿಶೇಷಗಳಿವೆ. ಒಂದು ಅದು ಆಚಾರ್ಯರ ಪೂರ್ವದಲ್ಲಿಯೇ ಇದ್ದ ಮಠ. ಅಲ್ಲಿಯ ಭಟ್ಟಾಚಾರ್ಯ ಸಂಪ್ರದಾಯದ ನರಸಿಂಹ ತೀರ್ಥರನ್ನೂ ಮಧ್ವಾಚಾರ್ಯರು ವಾದದಲ್ಲಿ ಗೆದ್ದು ಮಠವನ್ನು ಪಡೆದರು. ಇನ್ನೊಂದು, ಪಡೆದ ಮಠಕ್ಕೆ ತಮ್ಮ ತಮ್ಮಂದಿರಾದ ಶ್ರೀ ವಿಷ್ಣುತೀರ್ಥರನ್ನು ನಿಯಮಿಸಿದ್ದು, ಈ ವಿಷ್ಣುತೀರ್ಥರೇ ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಸೋದೆ ಮಠಕ್ಕೆ ಮೂಲಯತಿಗಳು. ಆಚಾರ್ಯರು ಇವರಿಗೆ ಕೊಟ್ಟ ಭೂವರಾಹದೇವರ ಪ್ರತಿಮೆ ಈ ಮಠದ ಉಪಾಸ್ಯ ದೇವತೆ. ಈ ಪ್ರತಿಮೆಯ ಜೊತೆಗೆ ಮಧ್ವಾಚಾರ್ಯರು ಬದರಿಕಾಶ್ರಮದಿಂದ ತಂದ ನರಸಿಂಹ ದೇವರ ಅಬೇದ್ಯ ಸಂಪುಟವನ್ನು ಇವರ ಕೈಯಲ್ಲಿ ಕೊಟ್ಟರು. ಶ್ರೀ ವಿಷ್ಣುತೀರ್ಥರ ಗುರುಭಕ್ತಿ ಇಂದ್ರಿಯ ನಿಗ್ರಹ, ಉಗ್ರತಪಸ್ಸು, ಶಾಸ್ತ್ರಾಧ್ಯಯನ, ಈ ಹಲವಾರು ಗುಣಗಳು ಸುಮದ್ವವಿಜಯದಲ್ಲೂ, ಮತ್ತಿತರ ಗ್ರಂಥಗಳಲ್ಲೂ ವರ್ಣಿತವಾಗಿದೆ.

ಇವರು ತಾವು ಅರ್ಚಿಸುತ್ತಿದ್ದ ನರಸಿಂಹ ದೇವರ ಸಂಪುಟ ಸಹಿತ ಸಹ್ಯಾಚಲಕ್ಕೆ ತೆರಳಿ ಅಲ್ಲಿ ಇಂದಿಗೂ ತಪೋನಿರತರಾಗಿದ್ದಾರೆ. ಅವರ ಶಿಷ್ಯರಾದ ಅನಿರುದ್ಧತೀರ್ಥರು ತಮಗೆ ಅರ್ಚಿಸಲು ದೇವರ ಸಂಪುಟ ಬೇಕೆಂದು ಗುರುಗಳನ್ನು ಪ್ರಾರ್ಥಿಸಲು ಅವರು ಅದನ್ನು ಮರುದಿನ ಕಳುಹಿಸಿಕೊಡುತ್ತೇವೆಂದು ಸ್ವಪ್ನದಲ್ಲಿ ಸೂಚಿಸಿದರು. ಅದರಂತೆ ದರ್ಪಣಸಮೇತ ತೇಲಿ ಬಂದ ಸಂಪುಟವನ್ನು ಅನಿರುದ್ಧ ತೀರ್ಥರು ಸ್ವೀಕರಿಸಿದರು. ಈ ಸಂಪುಟ ತೇಲಿಬಂದ ಹಳ್ಳವನ್ನು ದರ್ಪಣತೀರ್ಥರೆಂದು ಕರೆಯುತ್ತಾರೆ. ಇಂದಿಗೂ ಭಕ್ತಾದಿಗಳು ಈ ತೀರ್ಥದಲ್ಲಿ ಸ್ನಾನ ಮಾಡಿ ದೇವರ ದರ್ಶನಕ್ಕೆ ಬರುವರು.

ಶ್ರೀ ಮಠದ ಪರಮಾಶ್ಚರ್ಯಗಳಲ್ಲಿ ಒಂದಾದ ಈ ನರಸಿಂಹದೇವರ ಸಂಪುಟದ ಬಗ್ಗೆ ವಿವರಿಸುತ್ತಾ ಇದು ಅತ್ಯಂತ ಕುತೂಹಲಕಾರಿ ಕರಂಡಕ. ತ್ರಿಕಾಲಜ್ಞಾನಿಗಳಾದ ಶ್ರೀ ವಾದಿರಾಜ

ಸ್ವಾಮಿಗಳು ತಮ್ಮ ಪ್ರವಾಸದ ಕಥನ 'ತೀರ್ಥಪ್ರಬಂಧ'ದಲ್ಲಿ ಶ್ರೀ ಸುಬ್ರಮಣ್ಯ ಮಠದ ಬಗ್ಗೆ ಬರೆಯುತ್ತಾ ನರಸಿಂಹ ಸಂಪುಟ ಕುರಿತು ಹೀಗೆ ಹೇಳುತ್ತಾರೆ "ತೆರೆಯಲಸಾಧ್ಯವಾದ ಪ್ರಯತ್ನ ಪಟ್ಟರೂ ಭೇದಿಸಲಾಗದ, ಮಿರಿಮಿರಿಮಿಂಚುವ ಈ ಸಂಪುಟವು ಅಸ್ಖಲಿತವಾದುದು. ಭಗವದ್ರೂಪಗಳಿರುವ ಈ ಸಂಪುಟವು ಸದಾ ಭಗವಂತನ ಸಾನಿಧ್ಯವಿರುವ, ಅಸುರರಿಂದ ಭೇದಿಸಲಸಾಧ್ಯವಾದ, ಆಚಾರ್ಯ ಮಧ್ವರ ಹೃದಯ ಸಂಪುಟದಂತಿದ್ದು ಪೂಜಿಸಲ್ಪಡುತ್ತಿದೆ" ಸಂಪುಟದ ಮೂಲದ್ರವ್ಯ ಯಾವುದೆಂದೇ ಹೇಳಲಾಗುವುದಿಲ್ಲ. ಎಣ್ಣೆ ಕೆಂಪಿನ ಕಂದುಬಣ್ಣದ ಬೊಗಸೆಗಾತ್ರದ ಗುಂಡು ಸಂಪುಟ ಚೊಚಕವಿರುವ ಮುಚ್ಚಳ ಹೊಂದಿದೆ. ಆದರೆ ತೆರೆಯ ಲಾಗುವುದಿಲ್ಲ.

ಶಿಷ್ಯ ಪರಂಪರೆಯ ತಿಳುವಳಿಕೆಯಂತೆ ಆಚಾರ್ಯಮಧ್ವರು ಈ ಸಂಪುಟದಲ್ಲಿ 5 ವ್ಯಾಸಮುಷ್ಠಿಕೆಗಳು, ಹನ್ನೆರಡು ಕ್ಷೇತ್ರ ಲಕ್ಷ್ಮಿನಾರಾಯಣ ಸಾಲಿಗ್ರಾಮ, ಒಂದು ಲಕ್ಷ್ಮೀ ನರಸಿಂಹ ಸಾಲಿಗ್ರಾಮ ಇವುಗಳನ್ನು ಇರಿಸಿ ಅಬೇದ್ಯವಾಗಿರಿಸಿದ್ದಾರೆ.

ಇಂತಹ ಕ್ಷೇತ್ರದ ಪಾವನಮೂರ್ತಿ ಸುಬ್ರಮಣ್ಯ. ಶ್ರೀ ವಾದಿರಾಜರು ಸ್ವಾಮಿಯನ್ನು ಸುಂದರವಾಗಿ 6 ಶ್ಲೋಕಗಳಲ್ಲಿ ವರ್ಣಿಸಿದ್ದಾರೆ. ಈ ಕ್ಷೇತ್ರದಲ್ಲಿ ಪೂಜೆಮಾಡುವುದಲ್ಲದೆ ಬ್ರಾಹ್ಮಣರ ಊಟವಾದ ಮೇಲೆ ಅವರು ಊಟ ಮಾಡಿದ ಎಲೆಯ ಮೇಲೆ ಉರುಳು ಸೇವೆ ಮಾಡುವ ಪದ್ಧತಿ ಇದೆ. ಆದರಿಂದ ಕುಷ್ಟರೋಗಿಗಳೂ ಸಹ ಪರಿಶುದ್ಧರಾಗಿ ಗುಣಮುಖರಾಗು ತ್ತಿದ್ದಾರೆ.

ಅಲ್ಲಿ ಆಚಾರ್ಯ ಮಧ್ವರು ಸ್ವೀಕರಿಸಿದ ವಿಷ್ಣುಪ್ರತೀಕವಾದ ಶ್ರೀ ಲಕ್ಷ್ಮಿನರಸಿಂಹ ವಿಗ್ರಹವಿದೆ. ಇದು ಅತ್ಯಂತ ಪ್ರಾಚೀನವೂ, ಕಲಾಪೂರ್ಣವೂ, ಸುಂದರವೂ ಆಗಿದೆ. ಅಬೇದ್ಯ ನರಸಿಂಹ ದೇವರ ಸಂಪುಟ, ಹಾಗೂ ರುಕ್ಮಿಣಿ ಸತ್ಯಭಾಮಾ ಸಮೇತ ಬೆಳ್ಳಿಪೀಠದ ಮೇಲಿನ ಶ್ರೀ ವಿಠಲ ದೇವರು, ವ್ಯಾಸ ಸಂಪುಟ, ಶ್ರೀಮಠದ ಉಪಾಸ್ಯ ದೇವತಾವಿಗ್ರಹಗಳಾಗಿವೆ. ಇಲ್ಲಿ ಮಧ್ಯನರಸಿಂಹ, ಕುಕ್ಕೆ ಲಿಂಗ, ಭೈರವ, ಉಮಾಮಹೇಶ್ವರ, ಸೋಮನಾಥ ಮಂದಿರಗಳು ಕೂಡ ಇವೆ.

ವೈಶಾಖ ಶುದ್ಧ ದ್ವಾದಶಿಯಿಂದ ವೈಶಾಖ ಬಹುಳ ಪ್ರತಿಪದೆಯವರೆಗೆ ಶ್ರೀ ಮಠದಲ್ಲಿ ಶ್ರೀ ನೃಸಿಂಹ ಜಯಂತ್ಯುತ್ಸವವು ಅತ್ಯಂತ ವಿಜೃಂಭಣೆಯಿಂದ ಜರುಗುತ್ತದೆ.

ಶ್ರೀ ಮಠದ ಗುಡಿಯ ಪಕ್ಕದಲ್ಲಿರುವ ಪ್ರಾಣದೇವರು, ಮಠದಿಂದ ಕುಮಾರ ಧಾರಾ ನದಿಗೆ ಹೋಗುವ ದಾರಿಯಲ್ಲಿ ಬಲಭಾಗಕ್ಕೆ ಇರುವ ವನದುರ್ಗ ದೇವಾಲಯ, ಕುಮಾರಾ ಧಾರಾ ನದಿಯ ಪಂಚಮಿ ತೀರ್ಥ ಎಂಬ ಭಾಗದಲ್ಲಿರುವ ಶ್ರೀ ಮಠದ ಯತಿಪರಂಪರೆಯ ವೃಂದಾವನಗಳು, ಅವುಗಳಲ್ಲಿ ಅತ್ಯಂತ ಮಹತ್ವದ ಶ್ರೀ ಅನಿರುದ್ಧತೀರ್ಥರ ಬೃಂದಾವನ ಇವು ಇತರ ಮುಖ್ಯ ಪ್ರೇಕ್ಷಣೀಯ ಹಾಗೂ ಪೂಜಾಸ್ಥಳಗಳು.

## 126. ಆದಿ ಸುಬ್ರಮಣ್ಯ :

ಸುಬ್ರಮಣ್ಯ ದೇವಸ್ಥಾನದ ಸಮೀಪ ಆದಿಸುಬ್ರಮಣ್ಯವಿದೆ. ಇಲ್ಲಿ ಕುಮಾರಸ್ವಾಮಿಗೆ ವಿಷ್ಣು ಸರ್ವೋತ್ತಮ ಸಮ್ಮತವಾಗಿ ಕಂಡುಬಂದು ಏಕಾಂತದಲ್ಲಿ ಶ್ರೀ ಹರಿಯ ಅರ್ಚನೆಗಾಗಿ ಮಯೂರವಾಹನನಾಗಿ ಈ ಗುಹೆಯಲ್ಲಿ ವಾಸಿಸುತ್ತಿದ್ದಾನೆ. ಎಂದು ವಾದಿರಾಜರು ವಿವರಿಸಿದ್ದಾರೆ.

## 127. ಕಾಯಂಬಾಡಿ :

ಶ್ರೀ ಸುಬ್ರಮಣ್ಯ ಮಠದಿಂದ 15 ಕಿ.ಮಿ. ಕುಮಾರಧಾರಾ ನದಿಯ ದಂಡೆಯಲ್ಲಿ ಈ ಸ್ಥಳವಿದೆ. ಇಲ್ಲಿ ಸುಬ್ರಮಣ್ಯಮಠದ 17ನೆಯ ಯತಿಗಳಾದ ಶ್ರೀ ವೇದಪೂಜ್ಯರ ಕಾಲದ ಒಂದು ಮಠವಿದೆ. ಅಲ್ಲಿಯೇ ಅವರ ಬೃಂದಾವನವೂ ಇದೆ. ಅಲ್ಲಿಯ ಉಪಾಸ್ಯ ದೇವತಾ ವಿಗ್ರಹ ಪಾಂಡುರಂಗ ವಿಠಲ ಪ್ರತಿಮೆ ಹಾಗೂ ವ್ಯಾಸಸಂಪುಟ.

## 128. ಧರ್ಮಸ್ಥಳ :

ಬೆಳ್ತಂಗಡಿಗೆ 16 ಕಿ.ಮಿ ಮೈಸೂರು 271 ಕಿ.ಮಿ. ಬೆಂಗಳೂರಿಗೆ 365 ಕಿ.ಮಿ.

ಮಂಗಳೂರಿಗೆ 75 ಕಿ.ಮಿ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಮೂರು ಪವಿತ್ರ ಕ್ಷೇತ್ರಗಳೆಂದರೆ ಉಡುಪಿ, ಕೊಲ್ಲೂರು, ಧರ್ಮಸ್ಥಳ. ನೇತ್ರಾವತಿ ದಡದಲ್ಲಿರುವ ಈ ಪುಣ್ಯ ಕ್ಷೇತ್ರ, ಅವುಗಳಲ್ಲಿ ಒಂದು. ಇದು ಪ್ರಸಿದ್ಧವಾಗಿರುವುದು ಮಂಜುನಾಥನ ಗುಡಿಯಿಂದ. ಇದು ಸೋದೆ ಮಠದ ವಾದಿರಾಜರ ಕಾಲಕ್ಕೆ ಆಯಿತೆಂದು ಐತಿಹ್ಯವಿದೆ. ಆದರೆ ಅದಕ್ಕೆ ಮೊದಲೇ ಕುಡುಮ ಎಂಬ ಹೆಸರು ಆ ಸ್ಥಳಕ್ಕೆ ಇತ್ತು. ಆ ಕಾಲದಲ್ಲಿ ಕುಡುಮ ದೈವಗಳು ಆ ಸ್ಥಳಕ್ಕೊಂದು ವೈಶಿಷ್ಟ್ಯವನ್ನು ಒದಗಿಸಿಕೊಟ್ಟಿದ್ದುವು. ಇದು ತುಂಬಾ ಪುರಾತನವಾದ ಕ್ಷೇತ್ರ ಎನ್ನುವುದು ನಿರ್ವಿವಾದ. ಆದರೆ ಅದಕ್ಕೆ ಒಂದು ಸ್ಥಳ ಪುರಾಣವಿಲ್ಲ. ಅದರ ಇತಿಹಾಸ ವನ್ನು ಸ್ಪಷ್ಟವಾಗಿ ನಿರ್ದೇಶಿಸುವುದು ಕಷ್ಟ. ಉಪ್ಪಿನಂಗಡಿ ತಾಲ್ಲೂಕಿನ ಈ ಸ್ಥಳಕ್ಕೆ ಮಲ್ಲ ಮಾರಡಿ ಎನ್ನುವ ಹೆಸರಿದ್ದಿತು. ಹೀಗೆ ಕುಡುಮ ದೈವಗಳು ನೆಲ್ಯಾಡಿ ಬೀಡಿನಲ್ಲಿ ನೆಲೆಸಿ ಆಬೀಡಿನ ಹೆಗ್ಗಡೆಯಿಂದ ಸ್ಥಳದ ದಾನ ಧರ್ಮಗಳನ್ನು ನಡೆಸುತ್ತಿದ್ದಾಗ ಒಂದು ಬಾರಿ ಉಡುಪಿ ಸೋದೆ ಮಠದ ವಾದಿರಾಜರು ಅಲ್ಲಿಗೆ ಬಂದರಂತೆ. ಆದರೆ ಊರಿನಲ್ಲೆಲ್ಲಿಯೂ ದೇವಾಲಯವಿರದೆ ದೈವಗಳ ಗುಡಿಗಳು ಇದ್ದುದರಿಂದ ಅವರು ಇಂಥ ಸ್ಥಳದಲ್ಲಿ ಊಟ ಮಾಡುವುದು ತಕ್ಕುದಲ್ಲವೆಂದು ನಿಶ್ಚಯಿಸಿ ಉಪವಾಸದಿಂದಲೇ ಇದ್ದರು. ವಾದಿರಾಜ ರಂಥವರು ತನ್ನ ಮನೆಯಲ್ಲಿ ಅನ್ನಾಹಾರವಿಲ್ಲದೆ ಇರುವುದು ನೋಡಿ ಹೆಗ್ಗಡೆಗೆ ದಿಕ್ಕು ತೋಚದೆ ತಾನೂ ಉಪವಾಸವಿದ್ದು ಮಲಗಿದ. ಆದರೆ ಆ ರಾತ್ರಿ ಧರ್ಮದೇವತೆಗಳು ಆತನ ಕನಸಿನಲ್ಲಿ ಕಾಣಿಸಿಕೊಂಡು ತಾವು ಶಿವಲಿಂಗವನ್ನು ಆ ಸ್ಥಳಕ್ಕೆ ತರಿಸಿಕೊಡುವುದಾಗಿಯೂ ಆ ರಾತ್ರಿಯೇ ಗುಡಿಯನ್ನು ಕಟ್ಟಲು ಆರಂಭಿಸಬೇಕೆಂದು ತಿಳಿಸಿದರು. ಹೆಗ್ಗಡೆ ಎದ್ದು ಆ ರಾತ್ರಿಯೇ ಸಣ್ಣದೊಂದು ಗುಡಿಯನ್ನು ಕಟ್ಟಿಸಿದ. ಬೆಳಕು ಹರಿಯುವುದರೊಳಗೆ ಮಂಗಳೂರಿನ ಕದರಿ ಮಂಜುನಾಥನ ಗುಡಿಯಿಂದ ಲಿಂಗವನ್ನು ದೈವಗಳು ಅಣ್ಣಪ್ಪ ಭೂತನ ಮೂಲಕ ತರಿಸಿಟ್ಟವು. ಬೆಳಗಾದನಂತರ ಇದನ್ನೆಲ್ಲಾ ತಿಳಿದ ವಾದಿರಾಜರು ಶಾಸ್ತ್ರೋಕ್ತವಾಗಿ ಶಿವಲಿಂಗದ ಪ್ರತಿಷ್ಠೆಯನ್ನು ನೆರವೇರಿಸಿ, ಪೂಜೆ ನಡೆಸಿ ಅನಂತರ ಊಟಮಾಡಿದರು. ಕುಡುಮ ವನ್ನು ಧರ್ಮಸ್ಥಳವೆಂದು ಕರೆದರು. ಈಗಲೂ ಧರ್ಮಸ್ಥಳಕ್ಕೂ ಸೋದೆ ಮಠಕ್ಕೂ ತುಂಬಾ ನಂಟು. ಸೋದೆ ಮಠದ ಸ್ವಾಮಿಗಳು ಉಡುಪಿ ಕೃಷ್ಣಮಠದಲ್ಲಿ ಪರ್ಯಾಯ ವಹಿಸಿಕೊಳ್ಳ ಬೇಕಾದಾಗ, ಪೂರ್ವ ಭಾವಿಯಾಗಿ ಧರ್ಮಸ್ಥಳಕ್ಕೆ ಬಂದು ಅಲ್ಲಿ ಮಂಜುನಾಥನನ್ನು ಗರ್ಭಗುಡಿ ಯಲ್ಲಿ ತಾವೇ ಪೂಜೆಮಾಡಿ ಹೋಗುವ ಸಂಪ್ರದಾಯವು ಇಂದಿನವರೆಗೂ ನಡೆದು ಬಂದಿದೆ.

ಮಾಧ್ವರು ವಿಷ್ಣುಸರ್ವೋತ್ತಮನೆನ್ನುವ ನಿಲುವನ್ನು ಪಡೆದರಾದರೂ ಶಿವಾರ್ಚನ ವಿರೋಧಿಗಳಲ್ಲ. ಮಂಜುನಾಥನ ಗುಡಿಯಲ್ಲಿರುವ ಅರ್ಚಕರು ಮಾಧ್ವರೇ. ಮಂಜುನಾಥನ ಗರ್ಭಗುಡಿಯಲ್ಲಿ ಲಿಂಗದ ಬಳಿ ವಿಷ್ಣು ಪ್ರತೀಕವಾದ ನೃಸಿಂಹ ಸಾಲಿಗ್ರಾಮವನ್ನು ವಾದಿರಾಜರು ಇಟ್ಟಿರೆಂದು ಪ್ರತೀತಿ ಇದೆ. ಈ ಸಾಲಿಗ್ರಾಮವನ್ನು ಇಂದಿಗೂ ಅಲ್ಲಿ ಕಾಣಬಹುದು.

ಧರ್ಮಸ್ಥಳದ ದೇವರಿಗೆ ಮಂಜುನಾಥನೆಂದು ಹೆಸರು. ಮಂಜಿನಂತೆ ಮಂಜುಳ. ಅದಕ್ಕಾಗಿ ಈ ಹೆಸರು. ಮಂಜುನಾಥನ ದೇವಾಲಯದಲ್ಲಿ ಎರಡು ಗರ್ಭಗುಡಿಗಳಿವೆ. ಒಂದರಲ್ಲಿ ಮಂಜುನಾಥನ ಶಿವಲಿಂಗವೊಂದೇ ಇರುವುದು. ಇನ್ನೊಂದರಲ್ಲಿ ನಾಲ್ಕುದೈವಗಳ ಲೋಹ ಮೂರ್ತಿಗಳಿವೆ. ಇವಲ್ಲದೆ ಒಂದು ಉತ್ಸವ ಮೂರ್ತಿಯೂ ಇದೆ. ಈ ಗರ್ಭಗುಡಿಯನ್ನು ಅಮ್ಮನವರ ಗುಡಿ ಎಂದು ಕರೆಯುತ್ತಾರೆ. ಇಲ್ಲಿ ಅಮ್ಮನವರೆಂದರ ಕನ್ಯಾಕುಮಾರಿ ದೈವ. ಅಂತೂ ಈ ಮಂಜುನಾಥನ ಹೆಸರಿನಲ್ಲಿ ಧರ್ಮಸ್ಥಳ ಎನ್ನುವ ಹೆಸರಿನ ಸಾರ್ಥಕತೆಗಾಗಿ ಇಲ್ಲಿ ನಿತ್ಯ ಅನ್ನದಾನ, ಔಷಧ ದಾನ, ವಿದ್ಯಾದಾನ ನಡೆಯುತ್ತಿದೆ. ಭಯ, ಕಾಯಿಲೆ ನಿವಾರಣೆ ಇವುಗಳೂ ಸಹ ಆಗುತ್ತಿವೆ. ಮಂಜುನಾಥನ ಮುಂದುಗಡೆ ಮಂಟಪದಲ್ಲಿ ನ್ಯಾಯ ನಿರ್ವಹಣೆ ಕೂಡ ನಡೆಯುತ್ತದೆ. ಜನರಿಗೆ ಧರ್ಮಸ್ಥಳದಲ್ಲಿ ನಡೆಯುವ ನ್ಯಾಯವಿಚಾರಣೆ ವಿಚಾರವಾಗಿ ತುಂಬಾ ನಂಬಿಕೆ ಇದೆ.

## 129. ಕದ್ರಿ :

ಮಂಗಳೂರಿಗೆ 3 ಕಿ.ಮಿ. ಕದ್ರಿ ಮಠದಲ್ಲಿರುವ ಮಂಜುನಾಥ ದೇವರು ಮೂಲ. ಇಲ್ಲಿರುವ ಶಿಲೆಯು ವಿಚಿತ್ರರೂಪದಲ್ಲಿದೆ. ಲಿಂಗದ ಆಕಾರವಾಗಿಲ್ಲದ ಶಿಲೆಯಮುಂದೆ ಲೋಹದಲ್ಲಿ ಮಾಡಿಟ್ಟ ಮುಖವಾಡವಿಟ್ಟು ಅಲಂಕಾರ ಮಾಡುತ್ತಾರೆ. ಇಲ್ಲಿಂದಲೇ ಕುಮಕ್ಕೆ ದೈವಗಳು ಶಿವಲಿಂಗವನ್ನು ಒಯ್ದಿದ್ದು. ಮತ್ತು ಧರ್ಮಸ್ಥಳದಲ್ಲಿ ಮಂಜುನಾಥನ ಸ್ಥಾಪನೆಯಾಗಿದ್ದು.

## 130. ಹಿರೇಕೊಳ :

ಮಂಗಳೂರಿಗೆ ದಕ್ಷಿಣದಲ್ಲಿ 19 ಕಿ.ಮಿ. ಇಲ್ಲಿ ನರಸಿಂಹ ಪರ್ವತವೆಂಬುದಿದೆ. ಇಲ್ಲಿ ಎರಡು ದೇವಾಲಯಗಳಿವೆ. ನರಸಿಂಹ ಹಾಗೂ ಶಾರದಾಂಬ. ಉಗ್ರರೂಪಿ ನರಸಿಂಹ. ಹಂಪೆಯಲ್ಲಿರುವ ಉಗ್ರ ನರಸಿಂಹನಂತೆ ಚಿಕ್ಕ ಪ್ರಮಾಣದಲ್ಲಿದ್ದಾನೆ.

## 131. ಹೆಬ್ರಿ :

ಕಾರ್ಕಳದಿಂದ 33 ಕಿ.ಮಿ. ದೂರದಲ್ಲಿದೆ. ಆಗುಂಬೆ-ಉಡುಪಿ ರಸ್ತೆಯಲ್ಲಿರುವ ಸ್ಥಳ. ಬಹಳ ಹಳೆಯದಾದ ದೇವಾಲಯದಲ್ಲಿ ಅನಂತ ಪದ್ಮನಾಭ ಮೂರ್ತಿ ಇದೆ. ಕಲ್ಯಾಣಿಯೂ ಇದಕ್ಕೆ ಹೊಂದಿಕೊಂಡಂತೆ ಇದೆ.

## 132. ಪಾಣೆ ಮಂಗಳೂರು :

ಪಾಣೆ ಮಂಗಳೂರು ಬಂಟ್ವಾಳದಿಂದ ದಕ್ಷಿಣಕ್ಕೆ 6 ಕಿ.ಮಿ. ನೇತ್ರಾವತಿದಡದಲ್ಲಿದೆ. ಇನ್ನೂರು ವರ್ಷ ಹಳೆಯದಾದ, ಈಗ ಜೀರ್ಣೋದ್ಧಾರಗೊಂಡ ವೀರವಿಠಲ, (1977) ವೆಂಕಟರಮಣಸ್ವಾಮಿಯ ಗುಡಿಗಳಿವೆ. ಲಕ್ಷದೀಪೋತ್ಸವ ಪ್ರತಿವರ್ಷ ನಡೆಯುವುದು.

## 133. ಪುಂಡಿ ಬೈಲು :

ಕುಮಾರಧಾರಾ ನೇತ್ರಾವತಿ ನದಿಗಳ ಸಂಗಮಸ್ಥಳದಲ್ಲಿ ಕಟಿ ಶಿವಾಲಯವೆಂಬ ಪುಣ್ಯ ಕ್ಷೇತ್ರವಿದೆ. ಇಂತಹ ಕ್ಷೇತ್ರಕ್ಕೆ ಒಮ್ಮೆ ವಾದಿರಾಜರು ಬಂದರು. ಅಲ್ಲಿ ಸುತ್ತಲೂ ಇರುವ ಸಾವಿರಾರು ಲಿಂಗಗಳಿಗೆ ಏಕಾದಶ ರುದ್ರಾಭಿಶೇಖ ಮಾಡಬೇಕೆಂಬ ಅಭಿಲಾಷೆಯು ವಾದಿರಾಜ ರಿಗೆ ಉಂಟಾಯಿತು. ಎತ್ತರದಲ್ಲಿ ಮಾತ್ರವಲ್ಲ ದೂರದಲ್ಲೂ ಇರುವ ಲಿಂಗಗಳಿಗೆ ಸಾಕಾಗು ವಷ್ಟು ಅಗ್ರೋದಕವನ್ನು ಸಾಗಿಸುವುದು ಕಷ್ಟಸಾಧ್ಯವಾಗಿ ತೋರಿತು. ಆದುದರಿಂದ ಶ್ರೀ ವಾದಿರಾಜರು ದಂಡದಿಂದ ರೇಖೆಯನ್ನು ಬರೆದು ಈ ದಿವ್ಯ ತೀರ್ಥವನ್ನು ನಿರ್ಮಾಣ ಮಾಡಿದರು. ಈಗ ಇದು ಪುಂಡಿ ಬೈಲು ಎಂದು ಕರೆಸಿಕೊಂಡಿದೆ. ಇದು ವಾದಿರಾಜಮಠಕ್ಕೆ ಸೇರಿದೆ.

## 134. ಚಿಂತಾಮಣಿ ನರಸಿಂಹ ಕ್ಷೇತ್ರ :

ಮಂಗಳೂರಿನಿಂದ ಬೆಂಗಳೂರಿಗೆ ಹೋಗುವ ದಾರಿಯಲ್ಲಿ ಉಪ್ಪಿನಂಗಡಿ ಸಿಗುವುದು. ಉಪ್ಪಿನ ಅಂಗಡಿಯಿಂದ 10 ಕಿ.ಮಿ. ಕಡೆಶ್ವಾಲ್ಯ (ಕಡೇ ಶಿವಾಲಯ) ಸಿಗುವುದು. ಅದರಿಂದ ಸ್ವಲ್ಪ ದೂರದಲ್ಲಿ ಈ ಕ್ಷೇತ್ರವಿದೆ. ಒಮ್ಮೆ 64 ಸಾವಿರ ಯೋಗಿನಿ ಎಂಬ ಹೆಸರಿನ ದುಷ್ಟ ಪಿಶಾಚಿಗಳು ಶ್ರೀ ನರಸಿಂಹ ದತ್ತ ವರವನ್ನು ಪಡೆದು ತಪಸ್ಸು ಮಾಡುತ್ತಿದ್ದ ರುದ್ರ ದೇವರ ರಕ್ತವನ್ನು ಪಾನ ಮಾಡಲು ನುಗ್ಗಿ ಬಂದುವಂತೆ. ಆಗ ರುದ್ರ ದೇವರು ಕುರಿಯ ರೂಪಧರಿಸಿ ಕುರಿಗಳ ಹಿಂಡಿ ನಲ್ಲಿ ಅಡಗಿಕೊಂಡರಂತೆ ಮತ್ತು ರಕ್ಷಣೆಗಾಗಿ ಶ್ರೀ ಹರಿಯನ್ನು ಪ್ರಾರ್ಥಿಸಿ ಕೊಂಡರಂತೆ. ಆಗ ಪಾತಾಳ ಲೋಕದಿಂದ ಎದ್ದು ಬಂದ ಶ್ರೀ ನರಸಿಂಹದೇವರು ಮೇಶ ರೂಪದ ರುದ್ರ ದೇವರನ್ನೇ ವಾಹನವನ್ನಾಗಿ ಮಾಡಿಕೊಂಡು ತನ್ನ ಚಕ್ರದಿಂದ ಅವರನ್ನೆಲ್ಲಾ ಸಂಹರಿಸಿ ರುದ್ರ ದೇವರನ್ನು ರಕ್ಷಿಸಿ ಅನುಗ್ರಹಿಸಿದರೆಂದು ಸ್ಥಳ ಪುರಾಣ ಹೇಳುತ್ತದೆ. ಈ ಪೌರಾಣಿಕ ಹಿನ್ನೆಲೆಯ ಕ್ಷೇತ್ರ ಇದು ಇಲ್ಲಿರುವ ದೇವಾಲಯ ಚಿಂತಾಮಣಿ ನರಸಿಂಹ ದೇವಾಲಯ. ಇದೊಂದು ಅಗತ್ಯವಾಗಿ ಸಂದರ್ಶಿಸುವ ಪುಣ್ಯಸ್ಥಳ.

## 135. ಕೋಡಿಪಾಡಿ :

ಪುತ್ತೂರಿನ ಬಳಿ ಮಂಗಳೂರಿನಿಂದ 50 ಕಿ.ಮಿ. ಬೆಂಗಳೂರಿನಿಂದ 340 ಕಿ.ಮಿ.

ಕುಂಜಾರಿನಂತೆ ಕೋಡಿಪಾಡಿಯ ಜನಾರ್ಧನ ದೇವಾಲಯವೂ ಪ್ರಸಿದ್ಧ ಪವಿತ್ರ ಸ್ಥಳ. ಮದ್ವಾಚಾರ್ಯರು ತಮ್ಮ ಕ್ಷೇತ್ರದರ್ಶನ ಕಾಲದಲ್ಲಿ ಇದನ್ನು ಪೂಜಿಸಿದ್ದರು. ಮತ್ತು ಇಲ್ಲಿ

ತಮ್ಮ ಚಾತುರ್ಮಾಸ ವ್ರತವನ್ನು ಕೈಗೊಂಡಿದ್ದರು. ಈ ದೇವಾಲಯದ ದಡದಲ್ಲಿ ಕುಂಡಿಕೆಯೊಂದಿದ್ದು ಅದರಲ್ಲಿ ಕಾಶಿಯಿಂದ ಗಂಗಾ ದೇವಿಯು ಬಂದು ನೆಲೆಸಿದ್ದಾಳೆಂದು ಹೇಳುವರು. ಪರ್ಯಾಯ ಪೀಠವನ್ನು ಏರುವ ಮುನ್ನ ಉಡುಪಿಯ ಯತಿವರರು ಈ ಕ್ಷೇತ್ರದ ದರ್ಶನ ಮಾಡುವ ಪರಿಪಾಠವಿದೆ.

## 136. ಇರ್ಕಿಮಠ :

ಮಂಗಳೂರಿನಿಂದ 63ಕಿ.ಮಿ ಮಧ್ವಾಚಾರ್ಯರು ದೇವಕಾರ್ಯಕ್ಕೆ ತೀರ್ಥವಿಲ್ಲದುದಾಗ ಬರಿದಾದ ಕೆರೆಯಲ್ಲಿ ದಂಡ ಊರಿ ಅದು ಪಾವನ ಜಲದಿಂದ ತುಂಬಿ ತುಳುಕಿಸಿದ ಸ್ಥಳ. ಇದೂ ದಂಡ ತೀರ್ಥ. ಉಡುಪಿ ಅಷ್ಟ ಮಠದ ಪರ್ಯಾಯವನ್ನೇರುವ ಯತಿವರ್ಯರು ಅದಕ್ಕೆ ಮುನ್ನ ಇಲ್ಲಿಗೆ ಬರುವ ವಿಶಿಷ್ಟ ಸಂಪ್ರದಾಯವಿದೆ. ಈ ದಂಡತೀರ್ಥದ ಬದಿಯಲ್ಲಿ ಕೃಷ್ಣ ದೇವರು, ಪ್ರಾಣದೇವರು, ಗರುಡದೇವರು ಸ್ಥಾಪಿಸಲ್ಪಟ್ಟಿದೆ. ಇದು ಅಷ್ಟಮಠದ ಯತಿಗಳಿಗೆ ಆಚಾರ್ಯರು ಬೇರೆ ಬೇರೆ ದೇವರುಗಳನ್ನು ದಯಪಾಲಿಸಿದ ಹಾಗೆ, ಇಲ್ಲಿ ಕೆಲವು ಗೃಹಸ್ಥರಿಗೆ ಬೇರೆ ಬೇರೆ ದೇವರುಗಳನ್ನು ದಯಪಾಲಿಸಿ ಪೂಜೆ ಮಾಡಿಕೊಂಡಿರಿ ಎಂದು ಹರಸಿದ ಸ್ಥಳವೂ ಆಗಿದೆ.

## 137. ಕಾಂತಾವರ :

ಉಡುಪಿಯಿಂದ 50 ಕಿ.ಮಿ. ಮೂಡಬಿದರೆ ದಿಕ್ಕಿಗೆ ಹೋಗಿ ಒಳಮಾರ್ಗ ತುಳಿದು ಈಸ್ಥಳ ಸೇರಬೇಕು.

ಇಲ್ಲಿನ ನರಸಿಂಹದೇವಾಲಯದ ಸುತ್ತ ಒಬ್ಬ ವಟುವಿನ ಹೆಗಲ ಮೇಲೆ ಕುಳಿತು ಪ್ರದಕ್ಷಿಣೆ ಬರುವ ಮೂಲಕ ಶ್ರೀ ಮಧ್ವಾಚಾರ್ಯರು ತಮ್ಮ 'ಲಘಿಮಾ' ಸಿದ್ಧಿಯನ್ನು ಪ್ರದರ್ಶಿಸಿದ ಸ್ಥಳ. ಇಲ್ಲಿ ಕಾಂತೇಶ್ವರ ದೇವಾಲಯವೂ ಇದೆ. ಇದು 9ನೆಯ ಶತಮಾನಕ್ಕೆ ಸೇರಿದ 3 ಅಂತಸ್ತು ಗಳುಳ್ಳ ಶಿಲ್ಪ ದೇವಾಲಯ. ಇವರಲ್ಲಿ ಕೇರಳ ಶಿಲ್ಪದ ಪ್ರಭಾವವಿದೆ. ಅನೇಕ ಬಾರಿ ಜೀರ್ಣೋದ್ಧಾರವಾಗಿದೆ. ದೇವಾಲಯದಲ್ಲಿ ಅಲಂಕಾರಾರ್ಥವಾಗಿ ಯಾಳಿ, ಯೋಗಾನರಸಿಂಹ (3 ಅಡಿ), ಮಹಾವಿಷ್ಣು, ಗೋಪಾಲಕೃಷ್ಣ, ಮದನ ಕೈ, ವಿಗ್ರಹಗಳನ್ನು ಸಾಲಾಗಿ ಜೋಡಿಸಿ ಇಡಲಾಗಿದೆ. ದೇವರು ಲಿಂಗ ರೂಪದಲ್ಲಿದ್ದು ಕಾಂತೇಶ್ವರ, ಕಾಂತಾ ವರೇಶ್ವರ ಎಂಬ ಹೆಸರಿನಲ್ಲಿ ಆರಾಧಿಸಲ್ಪಡುತ್ತಿದೆ. ಈ ಸ್ಥಳವು ನಿಸರ್ಗ ರಮಣೀಯತೆಯ ಪ್ರದೇಶವಾಗಿದ್ದು ಕಣ್ಣಿದ್ದವರಿಗೆ ಕಾಂತಾವರ ಎಂಬ ಹೆಸರು ಅನ್ವರ್ಥವಾಗಿದೆ.

## 138. ಎರ್ಮಾಳು :

ಪಡುಬಿದ್ರಿಯಿಂದ ಉತ್ತರಕ್ಕಿರುವ ಕ್ಷೇತ್ರ. ಇಲ್ಲಿರುವ ದೇವರು ಜನಾರ್ಧನ. ಶ್ರೀ ಮಧ್ವಾಚಾರ್ಯರು ದೋಣಿಯೊಂದರಿಂದ ರಕ್ಷಿಸಿ ತಂದ 3 ಮೂರ್ತಿಗಳಲ್ಲಿ ಇದೊಂದೆಂದು ಹೇಳುವರು.

# ಚಿಕ್ಕಮಗಳೂರು ಜಿಲ್ಲೆ

## 139. ಅಂಬುತೀರ್ಥ :

ಕಳಸಕ್ಕೆ ಹತ್ತಿರ ಮೂಡಿಗೆರೆಗೆ 60 ಕಿ.ಮಿ. ಭದ್ರಾನದಿಯ ದಂಡೆಯ ಬಳಿ ಇದೆ. ಬಾಳೆಹೊನ್ನೂರಿನ ಬಳಿ ಕಳಸಕ್ಕೆ ಹತ್ತಿರದಲ್ಲೇ ಪಶ್ಚಿಮಕ್ಕೆ ಭದ್ರಾನದಿಯ ದಂಡೆಯ ಮೇಲೆ ಈ ಪುಣ್ಯ ಸ್ಥಳವಿದೆ. ಇಲ್ಲಿ ಹರಿಯುವ ಭದ್ರಾನದಿ ಬಲದಂಡಯ ಬಂಡೆಗಳ ನಡುವೆ ಆಳವಾಗಿ ಹರಿಯುವ ಕಡೆ ಒಂದು ದೊಡ್ಡ ಚಕ್ರಾಕಾರದ ಕಲ್ಲು ಇದೆ. ಇದನ್ನು ಮದ್ವಾಚಾರ್ಯರ ಬಂಡೆ, ಮಾಧವ ಬಂಡೆ ಎನ್ನುವ ಹೆಸರಿನಿಂದ ಕರೆಯುವರು. ಇದನ್ನು ಭೀಮನಕಲ್ಲು ಎಂದೂ ಹೇಳುವರು. ಈ ಕಲ್ಲನ್ನು ನೇರವಾಗಿ ಮತ್ತೊಂದು ಕಲ್ಲಿನ ಮೇಲೆ ಕೂರಿಸಲಾಗಿದೆ. ಈ ಕಲ್ಲಿನ ಐತಿಹ್ಯ ಚಿಕ್ಕಮಗಳೂರು ಜಿಲ್ಲೆಯ ಒಂದು ಶಾಸನ (81) ದಲ್ಲಿ ದಾಖಲಾಗಿದೆ. ಎಪಿಗ್ರಾಫಿಕಾ ಕರ್ನಾಟಕದ V.P. 27ರಲ್ಲೂ ಇದು ದಾಖಲಾಗಿರುವುದನ್ನು ಕಾಣಬಹುದು. ಇದರ ಪ್ರಕಾರ ತೀರ್ಥ ಒಂದಕ್ಕಾಗಿ ಸಾವಿರಾರು ಜನರು ಬಹಳ ಪ್ರಯಾಸದಿಂದ ಕಲ್ಲನ್ನು ಹೊತ್ತು ತರುತ್ತಿದ್ದುದನ್ನು ಕಂಡ ಆಚಾರ್ಯರು ಹನುಮಂತ ಗಂಧ ಮಾಗಧ ಪರ್ವತವನ್ನು ಎತ್ತಿದ ರೀತಿ ಈ ಭಾರೀ ಗಾತ್ರದ ಕಲ್ಲನ್ನು "ತಮ್ಮ ಪವಿತ್ರವಾದ ಕರಕಮಲದಿಂದ ಭದ್ರಾನದಿಯ ಬಳಿಗೆ ಒಯ್ದರು ಮತ್ತು ಉಚಿತ ಸ್ಥಳದಲ್ಲಿ ಇರಿಸಿದರು." ಇದರ ಉದ್ದ 6.1 ಮಿ. ಅಗಲ 3.6 ಮಿ. ಮತ್ತು ಎತ್ತರ 10.98 ಮೀ. ಇದು 50 ಟನ್ ಭಾರವಿದೆ. ಈ ಮಹತ್ವ ಬಂಡೆಯಮೇಲೆ ಮದ್ವಾಚಾರ್ಯರ ರೇಖಾಚಿತ್ರವಿದೆ. ದಂಡ ಕಮಂಡಲುಗಳು ಚಿತ್ರ ಹಾಗೂ ದೇವನಾಗರಿ ಲಿಪಿಯಲ್ಲಿ 'ಶ್ರೀ ಮದ್ವಾಚಾರ್ಯ ಕರಹಸ್ತೇನ ಅನೀಯ ಸ್ಥಾಪಿತ ಶಿಲೆ' ಎಂದು ಶಾಸನ ಬರೆದಿದೆ. ಈ ರೀತಿ ಶ್ರೀಮದ್ವಾಚಾರ್ಯರು ಎತ್ತಿ ತಂದಿರಿಸಿದ ಈ ಶಿಲೆಯು ಅವರ ಮಹಾತ್ಮಕ್ಕೆ ದ್ಯೋತಕವಾಗಿದೆ.

## 140. ಗಂಗಾ ಮೂಲ :

ಚಿಕ್ಕಮಗಳೂರಿನಿಂದ 128 ಕಿ.ಮಿ. ತುಂಗಾ ಮತ್ತು ನೇತ್ರಾವತಿ ನದಿಗಳ ಉಗಮಸ್ಥಾನ. ಆದರೆ ಅಲ್ಲಿ ಹೋಗಿಬರಲು ಅಂತಹ ಉತ್ತಮ ರಸ್ತೆ ಇಲ್ಲ.

## 141. ಹೊರನಾಡು :

ಕಳಸದಿಂದ 7 ಕಿ.ಮಿ. ದೂರದಲ್ಲಿ ಈ ಪುಣ್ಯಕ್ಷೇತ್ರವಿದೆ. ಇದು ಪುರಾತನವಾದ ದೇವಾಲಯ. ಇಲ್ಲಿಯ ದೇವತೆ ಅನ್ನಪೂರ್ಣೇಶ್ವರಿ. ಈ ದೇವಾಲಯ ಶಿಥಿಲವಾಗಿದ್ದುದರಿಂದ

ಈ ದೇವಸ್ಥಾನದ ಆಡಳಿತಗಾರರು ಬೇರೆ ಬೇರೆ ರಾಜ್ಯದ ಶಿಲ್ಪಿಗಳನ್ನು ಕರೆಸಿ ತಾವರೆ ಹೂವಿನ ಮೇಲೆ ಎದ್ದು ನಿಂತಿರುವಂತೆ ಕಲ್ಲಿನಲ್ಲಿ ದೇವಸ್ಥಾನ ರಚನೆಮಾಡಿದ್ದಾರೆ. ಇಲ್ಲಿಯ ಅಧಿದೇವತೆ ಅನ್ನಪೂರ್ಣೇಶ್ವರಿಯ ತಲೆಯ ಮೇಲೆ ನಾಗೇಂದ್ರನು ತನ್ನ ಏಳು ಹೆಡೆಗಳನ್ನು ಬಿಚ್ಚಿ ನಿಂತಿರು ವಂತೆ ಕಲ್ಲಿನ ಸುಂದರ ಕೆತ್ತನೆ ಇದೆ. ಇದರ ಜೊತೆಗೆ ಇದು ಸೊಬಗಿನ ತಾಣ. ದೇವಾಲಯದ ಅಧಿಕಾರಿಗಳ ಸಹಿತ ಎಲ್ಲಾ ನೌಕರವರ್ಗದವರು ಯಾತ್ರಿಕರಿಗೆ ಆದರದ ಸ್ವಾಗತ ನೀಡಿ ಅವರ ಯೋಗಕ್ಷೇಮದ ಹೊಣೆ ಸಂಪೂರ್ಣ ಹೊತ್ತಿರುವಂತಿದೆ. ಎಲ್ಲಿಯೂ ಕಾಣಲಾಗದ ಅವರ ನಡೆ ನುಡಿಗಳು ಇತರ ಕ್ಷೇತ್ರಗಳಿಗೆ ಉತ್ತಮ ಮಾದರಿ.

## 142. ಚಿಕ್ಕಮಗಳೂರು :

ಬೆಂಗಳೂರಿನಿಂದ 240 ಕಿ.ಮಿ. ಚಂದ್ರ ದ್ರೋಣ ಪರ್ವತವೆಂದು ಕರೆಯಲ್ಪಟ್ಟ ಬಾಬಾ ಬುಡನ್‌ಗಿರಿ ಇದೆ. ಇಲ್ಲಿ ದತ್ತಾತ್ರೇಯ ಪೀಠವಿದೆ. ಬೆಟ್ಟದ ಮೇಲೆ ಹೋಗಲು ಸುಸಜ್ಜಿತ ರಸ್ತೆ ಇದೆ. ಪರ್ವತ ಪ್ರದೇಶವಂತೆ ಸುಂದರವಾಗಿದ್ದು ಅಮೂಲ್ಯ ಗಿಡಮೂಲಿಕೆಗಳಿಗೆ ಹೆಸರು ವಾಸಿಯಾಗಿದೆ.

## 143. ಹಿರೇಮಗಳೂರು :

ಚಿಕ್ಕಮಗಳೂರಿಗೆ 2 ಕಿ.ಮಿ. ಇದಕ್ಕೆ ಭಾರ್ಗವಪುರಿ ಎಂದು ಹೆಸರಿತ್ತು. 12ನೆಯ ಶತಮಾನದಲ್ಲಿ ಇದು ಪಿರಿಯ ಮುಗುಳಿ ಎಂಬ ಅಗ್ರಹಾರವಾಗಿತ್ತು. ಪರಶುರಾಮನ ವಾಸ ಸ್ಥಳ. ಜನಮೇಜಯ ಸರ್ಪಯಾಗ ಮಾಡಿದ್ದ ಸರ್ಪಸಿದ್ಧರು ತಪಸ್ಸು ಮಾಡಿದ್ದ ಸ್ಥಳವಾಗಿದೆ. ಇಲ್ಲಿ ಪರಶುರಾಮರನ್ನು ರಾಮಚಂದ್ರ ಸೋಲಿಸಿದ್ದ ಎಂದು ಹೇಳುವರು. ಊರಿನ ದೊಡ್ಡ ಗುಡಿ ಕೋದಂಡರಾಮ. ಹೊಯಿಸಳ ಶೈಲಿಯದು. 8-9ನೆಯ ಶತಮಾನದ್ದು. ಇಲ್ಲಿ ಸೀತಾ ಲಕ್ಷ್ಮಣ ಸಮೇತ ರಾಮನ ವಿಗ್ರಹವಿದೆ. ಆದರೆ ಸೀತಾದೇವಿಯು ರಾಮನ ಎಡಕ್ಕೆ ಇರದೆ ಬಲಭಾಗ ದಲ್ಲಿದ್ದಾಳೆ. ಇದು ಇಲ್ಲಿಯ ವಿಶೇಷ. ಉತ್ಸವಮೂರ್ತಿ ಜನಾರ್ಧನ ಶ್ರೀದೇವಿ ಭೂದೇವಿ ಯರೊಡನೆ ಇದ್ದಾರೆ. ಪ್ರಾಕಾರದಲ್ಲಿ ಯೋಗಾನರಸಿಂಹ, ಪ್ರಭಾವಳಿಯಲ್ಲಿ ಹತ್ತು ಅವತಾರ ಗಳ ಚಿತ್ರಣವಿದೆ. ಇಲ್ಲಿಯ ಮಾಧವಮೂರ್ತಿ 4½ ಅಡಿಯದು. ಜನಮೇಜಯ ರಾಯನು ಸರ್ಪಯಾಗಮಾಡಿದ ಸ್ಥಳವೂ ಇದೆ. ಜನಮೇಜಯ ರಾಯನು ಸರ್ಪಯಾಗ ಮಾಡಲು ರಚಿಸಿದ [illegible]ಗದ ಯೂಪಸ್ತಂಭ ಈಶ್ವರನ ಗುಡಿಯ ಮುಂದೆ ಇದೆ. ಈ ಸ್ತಂಭದ ಮೇಲೆ (9 ಅಡಿ) 2-3ನೆಯ ಶತಮಾನದ ಅಸ್ಪಷ್ಟ ಶಾಸನವಿದೆ.

## 144. ದೇವನೂರು :

ಕಡೂರಿನಿಂದ ಅರಸೀಕೆರೆಗೆ ಹೋಗುವ ಮಾರ್ಗ. ಕಡೂರಿನಿಂದ 21 ಕಿ.ಮಿ. ಕಡೂರು ತಾಲ್ಲೂಕಿಗೆ ಸೇರಿದ ಈ ಸ್ಥಳದಲ್ಲಿ ಲಕ್ಷ್ಮೀನಾರಾಯಣ ದೇವಾಲಯವಿದೆ. ಇದು ಲಕ್ಷ್ಮೀಶ ಕವಿಯು ಜೈಮಿನಿ ಭಾರತವನ್ನು ಹಾಗೂ ರುದ್ರಭಟ್ಟ ಜಗನ್ನಾಥ ವಿಜಯವನ್ನು ಬರೆದ ಸ್ಥಳ. ಲಕ್ಷ್ಮೀನಾರಾಯಣ ದೇವಾಲಯದ ಪ್ರಾಕಾರದ ಬಳಿಯ ಮಂಟಪ ಲಕ್ಷ್ಮೀಶನ ಜನ್ಮಸ್ಥಳವೆಂದು ತೋರಿಸುತ್ತಾರೆ.

## 145. ಸಖರಾಯ ಪಟ್ಟಣ (ಸಕ್ರೆ ಪಟ್ಟಣ) :

ಚಿಕ್ಕಮಗಳೂರಿನಿಂದ 45 ಕಿ.ಮಿ ಕಡೂರಿಗೆ ಹತ್ತಿರವಾಗಿ (15 ಕಿ. ಮಿ.) ಚಿಕ್ಕಮಗಳೂರಿಗೆ ಹೋಗುವ ದಾರಿಯಲ್ಲಿದೆ. ಇಲ್ಲಿ ಪುರಾತನ ಶ್ರೀರಂಗನ ದೇವಾಲಯವಿದೆ. ಇದು ಪುರಾಣ ದಲ್ಲಿ ರುಕ್ಮಾಂಗದನ ರಾಜಧಾನಿಯಾಗಿತ್ತೆಂದು ಇಲ್ಲಿಯ ಶ್ರೀರಂಗನನ್ನು ರುಕ್ಮಾಂಗದನು ಪೂಜಿಸು ತ್ತಿದ್ದನೆಂದು ವಿವರಣೆ ಇದೆ. ಶ್ರೀ ಮದ್ವಾಚಾರ್ಯರ ನೇರಶಿಷ್ಯರಾದ ಮಾಧವತೀರ್ಥ ಮಠದ ಶ್ರೀ ರಘುನಂದನ ತೀರ್ಥರು ಹಾಗೂ ಶ್ರೀ ರಘುಪತಿ ತೀರ್ಥರು ಸಖರಾಯಪಟ್ಟಣ ವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದರು. ಅವರು ಅಲ್ಲಿಯೇ ಬೃಂದಾವನಸ್ಥರಾಗಿ ದ್ದಾರೆ. ಈ ಇಬ್ಬರು ಯತಿಗಳ ವೃಂದಾವನಗಳು ಶ್ರೀ ಪ್ರಾಣದೇವರ ದೇವಸ್ಥಾನದ ಎಡಬಲ ಭಾಗಗಳಲ್ಲಿವೆ.

## 146. ಇತರ :

**1. ಕುಂಚೂರು :** ಕೊಪ್ಪದಿಂದ 8ಕಿ.ಮಿ. ಸೂರ್ಯಾಸ್ತಮಾನ.

**2. ನರಸಿಂಹರಾಜಪುರ :** ಚಿಕ್ಕಮಗಳೂರಿನಿಂದ 84ಕಿ.ಮಿ. ಭದ್ರಾ ವನ್ಯಮೃಗ ಅಭಯಾರಣ್ಯ.

**3. ಕೆಮ್ಮಣ್ಣುಗುಂಡಿ :** ಚಿಕ್ಕಮಗಳೂರಿನಿಂದ 87ಕಿ.ಮಿ. ಕೃಷ್ಣರಾಜೇಂದ್ರ ಗಿರಿಧಾಮ (1877 ಮೀಟರ್) ಇಲ್ಲಿಂದ 10 ಕಿ. ಮಿ., ಕಾಳಹಸ್ತಿ ಜಲಪಾತ.

**4. ಕುದುರೆ ಮುಖ :** ಬೆಂಗಳೂರಿನಿಂದ 316 ಕಿ.ಮಿ., ಚಿಕ್ಕಮಗಳೂರಿನಿಂದ 95 ಕಿ.ಮಿ. ಪಶ್ಚಿಮಘಟ್ಟದಲ್ಲಿರುವ ಹೆಚ್ಚು ಎತ್ತರ ಶಿಖರ ಪ್ರದೇಶ. (1800 ಮೀಟರ್) ಸುಂದರ ದೃಶ್ಯಾವಳಿಗಳು.

# ಚಿತ್ರದುರ್ಗ ಜಿಲ್ಲೆ

## 147. ಚಿತ್ರದುರ್ಗ :

ಚಿತ್ರದುರ್ಗವೆಂದರೆ ಚಾರಿತ್ರಿಕ ಪ್ರಸಿದ್ಧವೆನಿಸಿದ ಶಿವಪ್ಪ ನಾಯಕ ಮುಂತಾದವರು ಆಳಿದ ಸ್ಥಳ. ಇಲ್ಲಿ ಕಲ್ಲು-ಕಲ್ಲೂ ನಾಯಕರ ಕಥೆ ಹೇಳುತ್ತದೆ. ರಾಷ್ಟ್ರದಲ್ಲೇ ಅತ್ಯಂತ ದೊಡ್ಡದು ಬಲಶಾಲಿಯೂ ಆಗಿರುವ 32 ಮೈಲಿ ಸುತ್ತಳತೆಯ ಈ ಬೃಹತ್ಕೋಟೆ 36 ಹೆಬ್ಬಾಗಿಲುಗಳನ್ನು 68 ದಿಡ್ಡಿ ಬಾಗಿಲುಗಳನ್ನೂ 1200 ಚಿಕ್ಕ ಪುಟ್ಟ ಬುರುಜುಗಳನ್ನು ಹೊಂದಿದೆ. ದೊಡ್ಡ ದೊಡ್ಡ ಕಲ್ಲುಗಳನ್ನೇ ಕೊರೆದು ನಿರ್ಮಿಸಿರುವ ತುಪ್ಪದ ಕೊಳ, ಎಣ್ಣೆ ಕೊಳ, ಸುರಂಗ ಮಾರ್ಗಗಳು, ಗುಪ್ತವಾಸಸ್ಥಳಗಳು, ಮದ್ದು ಬೀಸುವ ಕಲ್ಲುಗಳು ಮೊದಲಾದವುಗಳಿವೆ. ಆರನೇ ಕೋಟೆಯ ಹೆಬ್ಬಾಗಿಲಿನ ಮೇಲೆ ವಿಘ್ನೇಶ್ವರನಿದ್ದಾನೆ. ಮುಂದೆ ಅಂಗಳದಲ್ಲಿ 50 ಅಡಿ ಎತ್ತರದ ದೀಪಸ್ಥಂಭವಿದೆ. ಹಿಡಿಂಬೇಶ್ವರ ದೇವಾಲಯವು ನಮಗೆ ಈ ಸ್ಥಳ ಹಿಡಿಂಬೆಗೂ ಭೀಮಸೇನನಿಗೂ ಇದ್ದ ಸಂಬಂಧ ತೋರಿಸುತ್ತದೆ.. ಇದು ಹಿಂದೆ ಹಿಡಿಂಬಾಸುರನ ಪಟ್ಟಣ ವಾಗಿತ್ತೆಂದು ತಿಳಿದುಬರುತ್ತದೆ. ಗೋಪಾಲಸ್ವಾಮಿ ಹೊಂಡ, ದ್ವಾಪರಯುಗದಲ್ಲಿ ಜನಮೇ ಜಯರಾಯನು, ಕಟ್ಟಿಸಿದನೆಂದು ಹೇಳುವ ಗೋಪಾಲಕೃಷ್ಣ ದೇವಾಲಯ, ಬೆಟ್ಟದ ಮೇಲಿರುವ ಇತರ ಸ್ಥಳಗಳು, ಕಾಶಿವಿಶ್ವೇಶ್ವರನ ಗುಡಿ, ಭೂತಾಂಜನೇಯನೆಂಬ ಹೆಸರಿನ ಪ್ರಾಣದೇವರ ಗುಡಿಯೂ ಇಲ್ಲಿಯೇ ಇದೆ. ಚಿತ್ರದುರ್ಗದಲ್ಲಿರುವ ವೈಷ್ಣವ ಮಠಗಳೆಂದರೆ ಉತ್ತರಾದಿಮಠ, ವ್ಯಾಸರಾಯಮಠ (ಬುರುಜನ ಹಟ್ಟಿ, ಸಿಹಿನೀರು ಹೊಂಡದ ಬಳಿ) ಮತ್ತು ರಾಯ್ಗುರಮಠಗಳು (ಆನೆಬಾಗಿಲು ಬಳಿ) ಮೈಸೂರು ಮಠವೆಂಬುದು ಹೊಸದಾಗಿ ನಿರ್ಮಾಣವಾಗಿದೆ. ಈ ಊರಿನ ವಿವಿದೆಡೆಗಳಲ್ಲಿ ವೆಂಕಟರಮಣಸ್ವಾಮಿ, ಚೆನ್ನಕೇಶವ, ಲಕ್ಷ್ಮೀನಾರಾಯಣ, ರಾಮಾಂಜನೇಯ ಗುಡಿಗಳಿವೆ. ವೆಂಕಟರಮಣಸ್ವಾಮಿ ರಥೋತ್ಸವವು ಆಶ್ವಿಜ ಬಿದಿಗೆಯಿಂದ ದಶಮಿಯವರೆಗೆ ವಿಜೃಂಭಣೆಯಿಂದ ನಡೆಯುವುದು. ಉತ್ತರಾದಿ ಮಠದಲ್ಲಿ ರಾಮೋತ್ಸವವು ನಡೆಯುವ ಏರ್ಪಾಡಿದೆ.

## 148. ಮರಡಿ ಹಳ್ಳಿ :

ಬೆಂಗಳೂರು 182 ಕಿ.ಮಿ. ಬೆಂಗಳೂರು-ಚಿತ್ರದುರ್ಗ ರಸ್ತೆಯಿಂದ 2.4 ಕಿ.ಮಿ. ಹಿರಿಯೂರು–ಚಿತ್ರದುರ್ಗ ರಸ್ತೆ. ಇಲ್ಲಿನ ಬೆಟ್ಟಗಳು 2½ ಕೋಟಿ ವರ್ಷದವು. ಜ್ವಾಲಾಮುಖಿಯ ರೂಪರೇಶೆಗಳನ್ನು ಅಧ್ಯಯನ ಮಾಡಲು ಅತ್ಯುತ್ತಮ ಸ್ಥಳ. ವೆಂಕಟರಮಣ, ಆಂಜನೇಯನ ಗುಡಿಗಳಿವೆ. ಭೀಮನ ಬಂಡೆ ಎಂಬ ಸ್ಥಳವಿದೆ.

## 149. ಗವಿ ರಂಗನಾಥಸ್ವಾಮಿ ಬೆಟ್ಟ :

ಹೊಸದುರ್ಗದಿಂದ 29 ಕಿ. ಮಿ. ಕರ್ನಾಟಕದ ಏಕೈಕ ಕೂರ್ಮಕ್ಷೇತ್ರ ಬಯಲುಸೀಮೆಯ ಭೂವೈಕುಂಠ. ಇಲ್ಲಿಯ ಗುಡ್ಡದ ಮೇಲೆ ರಂಗನಾಥನ ಗುಡಿ ಇದೆ. ಲಕ್ಷ್ಮೀ ಸಮೇತನಾಗಿರುವುದರಿಂದ ಈ ದೇವರನ್ನು ಲಕ್ಷ್ಮೀರಂಗನಾಥನೆನ್ನುವರು. ಮೂಲತಃ ಇದು ಒಂದು ಗುಹಾಂತರ ದೇವಾಲಯ. ವಿಸ್ತರಣೆಯಿಂದ ದೇವಾಲಯ ಭವ್ಯವಾಗಿ ರಚಿತವಾಗಿದೆ. ಮುಖ್ಯದ್ವಾರದ ಇಕ್ಕೆಡೆಗಳಲ್ಲಿ ವಿಷ್ಣುವಿನ ದಶಾವತಾರ ಚಿತ್ರಗಳು ಗೋಡೆಯಲ್ಲಿ ಸುರಾಸುರರು ಕ್ಷೀರಸಾಗರವನ್ನು ಮಥನ ಮಾಡುತ್ತಿರುವ ದೃಶ್ಯ, ಪರಶಿವನು ವಿಷಪ್ರಾಶನ ಮಾಡುತ್ತಿರುವ, ಸೂರ್ಯ, ಚಂದ್ರ, ಕಾಮಧೇನು, ಐರಾವತ ಮುಂತಾದ ಹಲವಾರು ದೇವತೆಗಳಿರುವ ದೃಶ್ಯಾವಳಿಗಳ ಚಿತ್ರಣ, ಆವರಣ ಕಂಬದಲ್ಲಿ ಅಷ್ಟಲಕ್ಷ್ಮೀಯರ ವಿಗ್ರಹ. ಪೌರಾಣಿಕವಾಗಿ ಇಲ್ಲಿ ಪ್ರಚಲಿತವಾಗಿರುವ ಕಥೆಯಲ್ಲಿ ಈ ಬೆಟ್ಟದ ಬಳಿ ವಾಸಿಸುತ್ತಿದ್ದ ಬ್ರಾಹ್ಮಣನೊಬ್ಬನ ದನಕರುಗಳು ಗೋಪಾಲನೊಬ್ಬನೊಡನೆ ಮೇಯಲು ಹೋಗಿದ್ದಾಗ ಒಮ್ಮೆ ಬಿಳಿ ಬಣ್ಣದ ಆಕಳೊಂದು ಗವಿಯೊಳಗೆ ಹೋಗಿ ಶ್ರೀ ಮಹಾವಿಷ್ಣುವಿನ ಮೇಲೆ ಕ್ಷೀರ ಸುರಿಸುತ್ತಿತ್ತು. ಈ ಬ್ರಾಹ್ಮಣ ಹಿಂಬಾಲಿಸಿ ಈ ದೃಶ್ಯವನ್ನು ನೋಡಿ ಬೆರಗಾದ. ಕೂರ್ಮಾವತಾರದಲ್ಲಿ ಶ್ರೀಹರಿಯನ್ನು ಕಂಡು ಭಕ್ತಪರವಶನಾದ. ದೇವರು ಬ್ರಾಹ್ಮಣನಿಗೆ ದೇವಾಲಯ ಕಟ್ಟಿಸಲು ಆಜ್ಞಾಪಿಸಿದಾಗ ಆತನು ದೇವರನ್ನು ಗವಿರಂಗನೆಂದು ಕರೆದು ದೇವಾಲಯ ನಿರ್ಮಾಣ ಮಾಡಿದ. ಆದುದರಿಂದಲೇ ಈ ಗವಿಯ ಬಳಿಯ ಪುರಕ್ಕೆ ಗವಿರಂಗಾಪುರವೆಂದು ಹೆಸರಾಯಿತು.

## 150. ಚಿಕ್ಕೇರಹಳ್ಳಿ :

ಮೊಳಕಾಲ್ಮೂರು ತಾಲ್ಲೂಕು, ಚಳ್ಳಕೆರೆಯಿಂದ ಸುಮಾರು 65 ಕಿ.ಮಿ. ನರಹರಿತೀರ್ಥರು ತಮ್ಮ ಪ್ರವಾಸದಲ್ಲಿ ಇಲ್ಲಿ ತಂಗಿದ್ದು ಅವರ ಸ್ವಪ್ನದಲ್ಲಿ ಆಂಜನೇಯ ಕಾಣಿಸಿಕೊಂಡು ತಾನು ಅಲ್ಲಿನ ಹುತ್ತದಲ್ಲಿ ಅಡಗಿರುವುದಾಗಿ ತಿಳಿಸಿದನಂತೆ. ಅದರಂತೆ ನಿರ್ದೇಶಿಸಿದ ಸ್ಥಳದಲ್ಲಿ ಹುತ್ತವನ್ನು ಅಗೆದಾಗ ಅಲ್ಲಿ ಒಂದು ಮಾರುತಿ ವಿಗ್ರಹದೊರಕಿತು. ಅದನ್ನು ಹುತ್ತದಿಂದ ತೆಗೆಸಿ ಪ್ರಾಣದೇವರನ್ನು ನೂತನವಾಗಿ ಕಟ್ಟಿಸಿದ್ದ ದೇವಾಲಯದಲ್ಲಿ ಪ್ರತಿಷ್ಠಿಸಿ ಪೂಜಿಸಿದರು. ಇಲ್ಲಿ ಶ್ರೀರಾಮನವಮಿ ದಿನ ಸ್ವಾಮಿಗೆ ವಿಶೇಷ ಪೂಜೆಗಳು, ಜಾತ್ರೆ, ರಥೋತ್ಸವ ನಡೆಯುತ್ತವೆ.

## 151. ಹಿರೇಕೊಳ :

ಮೊಳಕಾಲ್ಮೂರು ತಾಲ್ಲೂಕು, 1735ರಲ್ಲಿ ಇಲ್ಲಿನ ಶ್ಯಾನುಭೋಗರಾದ ಹಿರೇಮುದ್ದೂರಾಯರ ಅಕಳಂಕ ಪ್ರಾರ್ಥನೆಯ ಮೇರೆಗೆ ಸಾಕ್ಷಾತ್ ರಾಘವೇಂದ್ರತೀರ್ಥರೇ ಇಲ್ಲಿಗೆ ದಯಮಾಡಿಸಿದ್ದು ಶ್ರೀಯುತರ ಮನೆಯಲ್ಲಿಯೇ ನೆಲೆಸಿ ಭಕ್ತರ ಕಂಟಕ ಪರಿಹಾರ ಮಾಡುತ್ತಿದ್ದರೆಂದು ಪ್ರತೀತಿ. ಇಲ್ಲಿ ರಾಘವೇಂದ್ರಮಠವಿದ್ದು ಇದನ್ನು ಎರಡನೇ ಮಂತ್ರಾಲಯ ಎನ್ನುತ್ತಾರೆ. ಇದನ್ನು ಹಿರೇಕೂಳವೆಂತಲೂ ಹೆಸರಿಸುವರು.

**152. ಇತರ :**

1. ಸೋಮಸಂದ್ರ
2. ಕೆಲ್ಲೋಡು
3. ಹೊನ್ನೇನ ಹಳ್ಳಿ

} ಬೃಹತ್ ಆಂಜನೇಯನ ವಿಗ್ರಹಗಳು

# ಶಿವಮೊಗ್ಗ ಜಿಲ್ಲೆ

ವಿವಿಧತೆಯಿಂದ ಕೂಡಿದ ಈ ಜಿಲ್ಲೆ ಇತಿಹಾಸ ಪ್ರಸಿದ್ಧವೂ, ಪುರಾಣಪ್ರಸಿದ್ಧವೂ ಆಗಿದ್ದು ಅನೇಕ ವೈಷ್ಣವರ ಕ್ಷೇತ್ರಗಳಿಂದ ಕೂಡಿಯೂ ಇದೆ. ಇಲ್ಲಿನ ನೇತ್ರಾವತಿ, ತುಂಗ, ಭದ್ರ ನದಿಗಳ ದಂಡೆಯಲ್ಲಿ ಹಲವಾರು ಶ್ರೀ ಕ್ಷೇತ್ರಗಳಿವೆ. ಅವುಗಳ ಉಗಮ ಹೇಗಾಯಿತು, ಆ ಉಗಮದ ತರುವಾಯ ಅವುಗಳ ದಂಡೆಗಳ ಬಳಿ ಕ್ಷೇತ್ರಗಳು ಹೇಗೆ ಉದ್ಭವಿಸಿ ಆ ನಾಡನ್ನು ಹೇಗೆ ಪವಿತ್ರಗೊಳಿಸಿದವು ಎಂಬುದನ್ನು ತಿಳಿಯೋಣ.

ಸಮುದ್ರದಲ್ಲಿ ಭೂಮಿಯನ್ನು ಮುಳುಗಿಸಲು ಪ್ರಯತ್ನ ಪಟ್ಟ ಹಿರಣ್ಯಾಕ್ಷನನ್ನು ಸಂಹರಿಸಲು ಶ್ರೀಮನ್ನಾರಾಯಣನು ವರಾಹ ರೂಪತಾಳಿ ಅವನನ್ನು ಸಂಹರಿಸಿದನಷ್ಟೆ. ಭೂಮಿಯನ್ನು ಧರಿಸಿದ ವರಾಹನ ಬಲಕೋರೆಯಿಂದ ಭದ್ರಾನದಿಯೂ, ಎಡಕೋರೆಯಿಂದ ತುಂಗಾ ನದಿಯೂ ಅಲ್ಲದೆ ನೇತ್ರ ಧಾರೆಯಿಂದ ನೇತ್ರಾವತಿ ನದಿಯೂ ಉಗಮಿಸಿದವು.

ಈ ನದಿಗಳ ತಟಕಾಗಳಲ್ಲಿ ಪ್ರಖ್ಯಾತವಾದ ಸನ್ಯಾಸಿಗಳು, ಹರಿದಾಸರು ತಮ್ಮ ಕಾರ್ಯಕ್ಷೇತ್ರ ಗಳನ್ನು ಸ್ಥಾಪಿಸಿದರು. ಅದರಲ್ಲಿ ಅಚ್ಯುತ ಪ್ರೇಕ್ಷಾಚಾರ್ಯರ ಭೀಮನ ಕಟ್ಟೆ ಮಠ, ರಾಮಚಂದ್ರಾಪುರ. ತೀರ್ಥಹಳ್ಳಿಯ ಪುತ್ತಿಗೆ ಮಠದ ವೃಂದಾವನಗಳು ಆರ್ಯ ಅಕ್ಷೋಭ್ಯ ತೀರ್ಥ ಸಂಸ್ಥಾನ ಬಾಳಿಗಾರು, ಮಹಿಷಿಯ ಶ್ರೀ ಉತ್ತರಾದಿಮಠದ ಶ್ರೀ ಸತ್ಯಸಂಧತೀರ್ಥರ ವೃಂದಾವನ, ಹೊಳೆ ಹೊನ್ನೂರಿನ ಸತ್ಯಧರ್ಮರ ವೃಂದಾವನ ಸಂಗಮಸ್ಥಳವಾದ ಕೂಡಲಿ ಯಲ್ಲಿ ಶ್ರೀ ಅಕ್ಷೋಭ್ಯತೀರ್ಥ ಮಠದ ಬೃಂದಾವನಗಳು, ಹೊನ್ನಾಳಿಯ ಶ್ರೀ ರಾಘವೇಂದ್ರ ತೀರ್ಥರ ವೃಂದಾವನ, ನವ ವೃಂದಾವನ, ಇವುಗಳಲ್ಲಿ ಕೆಲವು.

## 153. ಶಿವಮೊಗ್ಗ :

ಬೆಂಗಳೂರು - 274 ಕಿ. ಮಿ. ಜಿಲ್ಲಾ ಕೇಂದ್ರವಾದ ಇಲ್ಲಿ ಎರಡು ರಾಘವೇಂದ್ರರ ಮೃತ್ತಿಕಾ ಬೃಂದಾವನಗಳನ್ನೊಳಗೊಂಡ ಮಠಗಳು, ಅಕ್ಷೋಭ್ಯತೀರ್ಥರ ಮಠವೂ ಇರುವುದು. ಕೋಟೆ ರಾಮಾಂಜನೇಯನ ಗುಡಿ ಸಂದರ್ಶನಾರ್ಹ ಸ್ಥಳ. ಇತರ ಸ್ಥಳಗಳೆಂದರೆ ಶಿವಪ್ಪನಾಯಕನ ಅರಮನೆ, ಗಾಜನೂರು ಅಣೆಕಟ್ಟು, ಮಂಡಗದ್ದೆ ಪಕ್ಷಿಧಾಮ ಮತ್ತು ಸಿಂಹಧಾಮ.

## 154. ಪಿಳ್ಳಂಗೆರೆ :

ತುಂಗಾತೀರದ ಪಿಳ್ಳಂಗೆರೆ ಮತ್ತೊಂದು ಪುಣ್ಯ ಸ್ಥಳ. ಇವನ್ನು ನೂರೆಂಟು ತಿರುಪತಿಗಳಲ್ಲಿ

ತೀರ್ಥರು ಕೂಡಲಿಗೆ ಹೋಗುವಾಗ ಪಿಳ್ಳಂಗೆರೆಗೆ ಭೇಟಿ ಕೊಟ್ಟಿದ್ದರು. ಅಲ್ಲಿನ ಬೆಟ್ಟದ ಮೇಲೆ ಜನಮೇಜಯರಾಯನಿಂದ ಪ್ರತಿಷ್ಠಾಪಿಸಿದ್ದ ರಂಗನಾಥನನ್ನು ದರ್ಶಿಸಿದರು. ಹಿಂದಿರುಗಿ ಬರುವಾಗ ತಮ್ಮ ಪ್ರಾಣದೇವರ ಪೆಟ್ಟಿಗೆಯನ್ನು ಮರೆತು ಹಿಂದಿರುಗಿದರು. ಮರುದಿನ ಅದೇ ಸ್ಥಳದಲ್ಲಿ ಪೆಟ್ಟಿಗೆ ಸುರಕ್ಷಿತವಾಗಿತ್ತು. ಆಗ ಒಂದು ಬಂಡೆಯ ಮೇಲೆ ಅವರು ಅಂಗಾರದಿಂದ ಮುಖ್ಯಪ್ರಾಣನ ಚಿತ್ರವನ್ನು ಬರೆದು ಆಹ್ವಾನಾದಿಗಳಿಂದ ಪೂಜಿಸಿ ದರು. ಮರುದಿನ ಆ ಕಲ್ಲಿನ ಮೇಲೆ ತಮ್ಮ ಅಮೃತ ಹಸ್ತದಿಂದ ನಿರ್ದೇಶಿಸಿದ ಸ್ಥಳದಲ್ಲಿ ಹನುಮಂತನ ರೂಪ ಮೂಡಿತು. ಅಕ್ಷೋಭ್ಯತೀರ್ಥರ ಕಮಂಡಲ ಪಾಣಿಯಾದ ರೇಖಾ ಚಿತ್ರವೂ ಮೂಡಿತು. ಅದನ್ನು ಪ್ರಾಣದೇವರ ಹಿಂದೆ ಪ್ರತಿಷ್ಠೆ ಮಾಡಲಾಗಿದೆ.

## 155. ಕವಲೆ ದುರ್ಗ :

ತೀರ್ಥಹಳ್ಳಿಯಿಂದ 21 ಕಿ.ಮಿ. ಇದು ಸಂಪೂರ್ಣವಾಗಿ ಬೆಟ್ಟ ಪ್ರದೇಶ. ಅಗಸ್ತ್ಯರು, ವಾಲ್ಮೀಕಿ ಋಷಿಗಳು ಇದ್ದ ಸ್ಥಳ. ಇದನ್ನು ಕಾಮ್ಯವನವೆನ್ನುವರು. ಭುವನಗಿರಿ ಎಂಬ ಹೆಸರೂ ಇದೆ. ಪಾಂಡವರು ಕೆಲವು ಕಾಲ ಈ ಅರಣ್ಯದಲ್ಲಿ ವಾಸಮಾಡುತ್ತಿದ್ದರಂತೆ. ಚಾರಿತ್ರಿಕ ವಾಗಿ ಇಲ್ಲಿ ಕೆಳದಿನಾಯಕರ ಕೋಟೆ ಕೊತ್ತಲಗಳು ಇವೆ. ಇಲ್ಲಿನ ಅರಮನೆಯ ಒಂದು ಕಲ್ಲುಮಂಚ 8 ಅಡಿ ಉದ್ದ, 7 ಅಡಿ ಅಗಲವಿದ್ದು ಆಕರ್ಷಕವಾಗಿದೆ. ಬೆಟ್ಟದ ತುದಿಯಲ್ಲಿ ಶ್ರೀಕಂಠೇಶ್ವರ ದೇವಾಲಯವಿದೆ.

## 156. ತೀರ್ಥಹಳ್ಳಿ :

ಶಿವಮೊಗ್ಗದಿಂದ 65 ಕಿ.ಮಿ. ಬೆಂಗಳೂರು 333 ಕಿ.ಮಿ. ಪರಿಸರ ಪ್ರೇಮಿಗಳಿಗೆ, ಆಸ್ತಿಕರಿಗೆ ಒಂದು ಮನೋಹರ ತಾಣ. ಇಲ್ಲಿ ಪವಿತ್ರವಾದ ತೀರ್ಥದ ಕೊಂಡವಿದೆ. ಪರಶು ರಾಮ ತನ್ನ ತಾಯಿಯ ಹತ್ಯೆಮಾಡಿದುದರ ಪಾಪ ಪರಿಹಾರಕ್ಕಾಗಿ ತನ್ನ ಕೊಡಲಿಯ ರಕ್ತ ತೊಳೆಯಲು ಯಾವ ನದಿ ಕೊಳ್ಳಗಳಲ್ಲೂ ಸಾಧ್ಯವಿಲ್ಲವಾದಾಗ ತೀರ್ಥಹಳ್ಳಿ ಸಮೀಪದ ಕೊಂಡದಲ್ಲಿ (ರಾಮತೀರ್ಥ) ತೊಳೆದದ್ದರಿಂದ ರಕ್ತದ ಕಲೆ ಹೋಯಿತು. ಈ ಪೌರಾಣಿಕ ಹಿನ್ನೆಲೆಯ ಸ್ಥಳ ಇದು. ಇಲ್ಲಿ ಮಾರ್ಗಶಿರ ಬಹುಳ ಅಮಾವಾಸ್ಯೆ ಜಾತ್ರೆಯಾಗುವುದು. ಇದನ್ನು ಎಳ್ಳಮಾವಾಸ್ಯೆ ಜಾತ್ರೆ ಎನ್ನುತ್ತಾರೆ. ಈ ತೀರ್ಥದ ಮೇಲೆಯೇ ರಾಮೇಶ್ವರ ದೇವಾಲಯವಿದೆ. ಈ ಸ್ಥಳದಲ್ಲಿ ಉರುಳೆಯಾಕಾರದ ಕೊಳವಿದೆ. ಇದು ತೀರ್ಥ ಸ್ನಾನಕ್ಕೆ ಯೋಗ್ಯ. ಅಲ್ಲದೆ ಈ ಊರಿನಲ್ಲಿ ವೈಷ್ಣವರ ಸಂಪ್ರದಾಯದ ಮಠಗಳೂ ಇವೆ. ತುಂಗಾನದಿ ತೀರದಲ್ಲಿ, ವಾದಿರಾಜ ಮಠದ ಶ್ರೀ ವೇದನಿಧಿ ತೀರ್ಥರ ಶಿಷ್ಯ ಶ್ರೀ ವರದರಾಜ ತೀರ್ಥರ ವೃಂದಾವನ ಇವುಗಳಲ್ಲಿ ಒಂದು.

## 157. ಬಾಳಗಾರು :

ತೀರ್ಥಹಳ್ಳಿಗೆ 8 ಕಿ.ಮಿ. ತೀರ್ಥಹಳ್ಳಿ - ಶಿವಮೊಗ್ಗ ರಸ್ತೆ. ಶಿವಮೊಗ್ಗದಿಂದ 47 ಕಿ.ಮಿ. ಇದನ್ನು ಒಡ್ಡುಮನೆ, ಎಂತಲೂ ಕರೆಯುತ್ತಾರೆ. ಅಯೋಧ್ಯಾಪುರವೆಂದೂ ಪುರಾಣಗಳಲ್ಲಿ

ಹೇಳಲ್ಪಟ್ಟಿದೆ. ತುಂಗಾನದಿ ಇಲ್ಲಿ ಬಾಣಾಕಾರವಾಗಿ ಹರಿಯುತ್ತಿದೆ. ತ್ರೇತಾಯುಗದ ಮಧ್ಯಭಾಗದಲ್ಲಿ ದೂರ್ವಾಸ ಮಹರ್ಷಿಗಳು ತಮ್ಮ 81000 ಶಿಷ್ಯ ಸಮೂಹದೊಂದಿಗೆ ಇಲ್ಲಿ ವಾಸಮಾಡಿದ್ದರೆಂದು ಪ್ರತೀತಿ. ಅವರು ಸಮೀಪದ ಬೆಟ್ಟದ ಮೇಲೆ ಪ್ರತಿಷ್ಠಾಪಿಸಲ್ಪಟ್ಟಿದ್ದ ಶ್ರೀ ನರಸಿಂಹನನ್ನು ಉಪಾಸಿಸಿದರು. ತತ್ಪರಿಣಾಮವಾಗಿ ಕೊನೆಕೊನೆಗೆ ಶ್ರೀ ನರಸಿಂಹ ಪ್ರತೀಕ ದಿಂದ ಹೊರಡುತ್ತಿರುವ ಉಗ್ರತಮ ತೇಜಸ್ಸನ್ನು ಸಹಿಸಲು ಸಾಮಾನ್ಯ ಜನರಿಗೆ ಕಷ್ಟಸಾಧ್ಯ ವಾಯಿತು. ದೂರ್ವಾಸಾದಿಮುನಿಗಳು ಇದರಿಂದ ವ್ಯಾಕುಲಚಿತ್ತರಾದರು. ಆ ಸಮಯಕ್ಕೆ ಶ್ರೀರಾಮಚಂದ್ರನು ಇವರನ್ನು ರಕ್ಷಿಸಲು ಈ ಕ್ಷೇತ್ರಕ್ಕೆ ಬಂದನು. ಶ್ರೀರಾಮ ಚಂದ್ರನು ಹನುಮಂತನಿಂದ ಜ್ವಾಲಾನರಸಿಂಹನನ್ನು ದಕ್ಷಿಣಕ್ಕೆ ತಲೆಮಾಡಿ ತುಂಗಾಮಡು ವಿನಲ್ಲಿ ಮುಳುಗಿಸಿ ಅಲ್ಲಿಯೇ ಪೂಜಾದಿಗಳು ನಡೆಯುವಂತೆ ಏರ್ಪಾಡು ಮಾಡಿದನು. ಇದರಿಂದ ಅದುವರೆಗಿನ ಜ್ವಾಲಾನರಸಿಂಹಕ್ಷೇತ್ರ ಜಲನರಸಿಂಹ ಕ್ಷೇತ್ರವಾಯಿತು. ಇದು ಇಲ್ಲಿನ ಸ್ಥಳ ಪುರಾಣ. ಈಗಲೂ ಜಲನರಸಿಂಹನಿಗೆ ಮಳೆಗಾಲದಲ್ಲೂ ಕೂಡ ಪೂಜಾದಿಗಳು ನೀರಿನಲ್ಲೇ ನಡೆಯುತ್ತದೆ. ನಂತರ ಸ್ಥಳಪುರಾಣ ಹೇಳುವಂತೆ ನರಸಿಂಹ ಪೀಠವನ್ನು ಖಾಲಿಬಿಡ ಬಾರದೆಂದು ಈಶ್ವರನನ್ನು ಸ್ಥಾಪಿಸಲು ಸಂಕಲ್ಪಿಸಿದನು. ನರ್ಮದಾ ತೀರದಿಂದ ಶಿವಲಿಂಗ ತರಲು ಆಂಜನೇಯನಿಗೆ ಆಜ್ಞಾಪಿಸಿದನು. ಅವನಿಗೆ ಕಾಲಕ್ಕೆ ಸರಿಯಾಗಿ ಶಿವಲಿಂಗ ತರಲು ಸಾಧ್ಯವಾಗಿಲ್ಲದುದರಿಂದ ಸೀತಾದೇವಿಯಿಂದಲೇ ಮರಳಿನಿಂದ ಶಿವಲಿಂಗ ಮಾಡಿಸಿ ಆ ಪೀಠ ದಲ್ಲಿ ಸ್ಥಾಪಿಸಿಬಿಟ್ಟನು. ಆಂಜನೇಯನು ಕೋಪದಿಂದ ತಾನು ಆಮೇಲೆ ತಂದ ಶಿವಲಿಂಗವನ್ನು ನದಿಗೆ ಎಸೆದನು. ಮತ್ತು ಕುಣಿದನು. ಒಂದು ಅಶ್ವತ್ಥವೃಕ್ಷವನ್ನು ನೆಟ್ಟು ಸ್ತ್ರೀರೂಪದಿಂದ ಅದನ್ನು ಸೇವಿಸುತ್ತಿದ್ದನು. ಸೀತಾರಾಮರು ಅವನನ್ನು ಸಮಾಧಾನಪಡಿಸಿ ಅವನು ಎಸೆದ ಶಿವಲಿಂಗವನ್ನು ಮೊದಲು ಭಕ್ತರು ದರ್ಶಿಸಿದ ನಂತರ ತಮ್ಮಿಂದ ಸ್ಥಾಪಿಸಲ್ಪಟ್ಟ ರಾಮೇಶ್ವರ ನನ್ನು ಪೂಜಿಸಿದರೆ ಮಾತ್ರ ಫಲಪ್ರಾಪ್ತಿ ಎಂದು ವರ ಕೊಟ್ಟನು. ಇಲ್ಲಿ ಪಾದದ ಚಿನ್ಹೆ ಇದೆ. ಇದನ್ನು ಹನುಮಂತನ ಪಾದವೆನ್ನುತ್ತಾರೆ. ಅಂದಿನಿಂದಲೂ ಆಂಜನೇಯನು ಶಿವಲಿಂಗವನ್ನು ಬಾಣಾಕಾರವಾಗಿ ಎಸೆದಾಗ ಅದು ನದಿಯಲ್ಲಿ ಬಿದ್ದ ಸ್ಥಳಕ್ಕೆ 'ಬಾಣಾಕಾರ' ಬಾಳಾಗಾರ, ಎಂದೂ, ಆಂಜನೇಯ ಕುಣಿದ ಸ್ಥಳಕ್ಕೆ ಕಸಗಾರು, ಕುಣಿಕುಂದೂರು ಇತ್ಯಾದಿ ಹೆಸರಾಯಿತು. ಬಾಳಗಾರು ಕ್ಷೇತ್ರವನ್ನು ಗಯಾ, ಕಾಶಿ, ಮುಂತಾದ ಕ್ಷೇತ್ರಗಳಿಗೆ ಸಮವಾದು ದೆಂದು ವರಾಹಪುರಾಣದಲ್ಲಿ ವರ್ಣಿಸಲಾಗಿದೆ. ನದಿ ತೀರದ ಬಂಡೆಯ ಮೇಲೆ ಶ್ರೀ ರಾಮದೇವರ ಪಾದದ ಚಿನ್ಹೆಗಳು ಈಗಲೂ ಇವೆ. ಇಲ್ಲಿ ಪಿಂಡಪ್ರದಾನಮಾಡಿದರೆ ಗಯಾ ಕ್ಷೇತ್ರದಲ್ಲಿ ವೈದಿಕ ಮಾಡಿದುದಕ್ಕೆ ಸಮ ಎಂದು ಭಾವಿಸಲ್ಪಡುತ್ತಿದೆ. ಹೀಗೆ ತುಂಗಾ ತೀರದ ಒಂದು ಗುಡ್ಡದಲ್ಲಿ ರಾಮಪ್ರತಿಷ್ಠಿತ ಲಿಂಗ ಮತ್ತೊಂದು ತೀರದಲ್ಲಿ ಲಕ್ಷ್ಮಣ ಪ್ರತಿಷ್ಠಿತ ಲಿಂಗ ನೀರಿನಲ್ಲಿ ನರಸಿಂಹ, ರಾಮಲಿಂಗದ ಸಮೀಪದಲ್ಲಿ ಷಣ್ಮುಖ ಇವು ಈ ಕ್ಷೇತ್ರದ ಪಾವಿತ್ರ್ಯದ ಸ್ಥಳಗಳು. ಪವಿತ್ರ ದೇವರುಗಳಾದ ಶ್ರೀರಾಮನರಸಿಂಹ ಅನಂತ ಪದ್ಮನಾಭ ರಾಮೇಶ್ವರ ಷಣ್ಮುಖ, ಚನ್ನಕೇಶವ, ವ್ಯಾಸಬಂಧ ಪ್ರಾಣದೇವರು, ಸಂಜೀವ ಆಂಜನೇಯ ವಿಜಯೀಂದ್ರ ತೀರ್ಥರಿಂದ ಸ್ಥಾಪಿತವಾದ ಮುಖ್ಯಪ್ರಾಣ, ಲಕ್ಷ್ಮಣೇಶ್ವರ ಈ ಪಾವನ ಮೂರ್ತಿಗಳನ್ನು ದರ್ಶಿಸಬಹುದು.

ಅಕ್ಷೋಭ್ಯ ತೀರ್ಥ ಮಠ ಮತ್ತು ರಾಘವೇಂದ್ರ ಬೃಂದಾವನಗಳು ಇವೆ. ಇಲ್ಲಿ ಅಕ್ಷೋಭ್ಯ ತೀರ್ಥರು ಸ್ವಲ್ಪಕಾಲ ಇದ್ದು ತಮ್ಮಲ್ಲಿದ್ದ ಲಕ್ಷ್ಮೀನರಸಿಂಹ ಸಾಲಿಗ್ರಾಮವನ್ನು ಬಾಳಗಾರು ಮಠದ ತ್ರೈಲೋಕ್ಯ ಭೂಷಣ ತೀರ್ಥರಿಗೆ ಕೊಟ್ಟರು. ಈ ಸಾಲಿಗ್ರಾಮ ಅತಿ ವಿಚಿತ್ರವಾದದ್ದು. ಮಹಾಮಹಿಮೋಪೇತವಾಗಿದ್ದು. ಒಂದು ದೊಡ್ಡ ಸಾಲಿಗ್ರಾಮದೊಳಗೆ ಇನ್ನೊಂದು ಚಿಕ್ಕ ದಾದ ಸಾಲಿಗ್ರಾಮವಿರುವುದು. ಅದನ್ನು ಅಲ್ಲಾಡಿಸಿದರೆ ಶಬ್ದವು ಉಂಟಾಗುವುದು.

ಪ್ರಾಚೀನ ಯತಿಶ್ರೇಷ್ಠರ ಅನೇಕ ಬೃಂದಾವನಗಳೂ ಈ ಕ್ಷೇತ್ರದಲ್ಲಿವೆ. ಅಕ್ಷೋಭ್ಯ ತೀರ್ಥರು ಬರೆದ ಸರ್ವಮೂಲ ಗ್ರಂಥಗಳು ಮಠದಲ್ಲಿ ಪೂಜೆಗೊಳ್ಳುತ್ತಿವೆ.

ಇದಲ್ಲದೆ ಈ ಸ್ಥಳ ಪ್ರಕೃತಿಯ ಮಡಿಲಿನ ಸುಂದರ ತಾಣ ಬೆಟ್ಟ ಗುಡ್ಡಗಳ ಭದ್ರಕೋಟೆ, ಜುಳುಜುಳು ಹರಿಯುವ ತುಂಗಾ ಪ್ರವಾಹ, ನದಿಯ ಪಾತ್ರಕ್ಕಿಂತ ಸುಮಾರು 40 ಅಡಿ ಎತ್ತರದಲ್ಲಿರುವ ಮಾಧ್ವಯತಿ ಪುಂಗವರ ತಪೋಭೂಮಿ, ತಪೋಯೋಗ್ಯ ಪವಿತ್ರ ಪರಿಸರ ದಲ್ಲಿರುವ ಭಾಳಗಾರು ಆರ್ಯ ಅಕ್ಷೋಭ್ಯ ತೀರ್ಥಮಠ ಎಲ್ಲರನ್ನೂ ಆಕರ್ಶಿಸುತ್ತಿದೆ.

## 158. ಭೀಮನ ಕಟ್ಟೆ :

ತೀರ್ಥಹಳ್ಳಿಗೆ 6 ಕಿ.ಮಿ, ಶೃಂಗೇರಿ-ಆಗುಂಬೆ-ಕಮ್ಮರಡಿ ರಸ್ತೆಯಲ್ಲಿ ಪ್ರಯಾಣಿಸಿ ರಂಜದ ಕಟ್ಟೆ ಎಂಬಲ್ಲಿಂದ 2 ಕಿ.ಮಿ. ನಡೆದು ಇಲ್ಲವೆ ಆಟೋಗಳ ಮೂಲಕ ಈ ಸ್ಥಳವನ್ನು ತಲುಪಬಹುದು. ರಸ್ತೆ ಚೆನ್ನಾಗಿಲ್ಲ. ಶ್ರೀ ಸತ್ಯತೀರ್ಥರಿಂದ ಪ್ರಾರಂಭವಾದ ಭಂಡಾರಕೇರಿ ಮಠದಿಂದ ಕವಲೊಡೆದ ಮಠ ಭೀಮನ ಕಟ್ಟೆ ಮಠ. ಅಥವಾ ಶ್ರೀಮದಚ್ಯುತ ಪ್ರೇಕ್ಷಾಚಾರ್ಯ ಸಂಸ್ಥಾನ. ಇದಕ್ಕೆ ಭೀಮಸೇತು ಮುನಿವೃಂದ ಸಂಸ್ಥಾನವೆಂದು ಹೆಸರು ಉಂಟು. ಮಧ್ವಾಚಾರ್ಯರ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರ ಪರಂಪರೆಯಿಂದ ಬಂದ ಶ್ರೀ ವಿಶ್ವಮೂರ್ತಿ ತೀರ್ಥರಿಂದ ಪ್ರಾರಂಭಗೊಂಡ ಈ ಮಠ ತೀರ್ಥಹಳ್ಳಿ ಬಳಿಯ ದೂರ್ವಾಸ ಪುರಂ ಬಳಿ ಪ್ರಾರಂಭಗೊಂಡಿರಬೇಕು. ಇದು ಅತ್ಯಂತ ಪ್ರಾಚೀನ ಮಠವೆಂದೂ, ಯುಧಿಷ್ಠಿರನ ಮೊಮ್ಮಗ ಜನಮೇ ಜಯರಾಯನು ರಾಮೇಶ್ವರ ಯಾತ್ರಾ ಸಂದರ್ಭದಲ್ಲಿ ಶ್ರೀ ಮಠಕ್ಕೆ ಕೊಟ್ಟ ಭೂದಾನ ಶಾಸನವು ಶ್ರೀಮಠದ ವಶದಲ್ಲಿದೆ ಎಂದು ನಂಬಲಾಗಿದೆ.

ಧರ್ಮರಾಯನ ಅಣತಿಯಂತೆ ದ್ರೌಪದಿಯ ಪ್ರಾರ್ಥನೆಯಂತೆ ಭೀಮನು ನದಿಯಲ್ಲಿ ಅಡ್ಡಗಟ್ಟೆ ಹಾಕಿದನಂತೆ. ಇದರಿಂದ ದೂರ್ವಾಸ ಪುರದಲ್ಲಿದ್ದ ದೂರ್ವಾಸ ಮುಂತಾದ ಋಷಿಗಳಿಗೆ ತಮ್ಮ ತಪಕ್ಕೆ ತೊಂದರೆಯಾಯಿತಂತೆ. ಅವರು ಕೃಷ್ಣನಿಗೆ ಮೊರೆ ಇಟ್ಟಾಗ ಕೃಷ್ಣನು ಉಪಾಯ ಮಾಡಿ ಆ ಸೇತುವೆ ಪೂರ್ಣವಾಗದ ಹಾಗೆ ಮಾಡಿದಾಗ ಮೂರು ರಂಧ್ರಗಳ ಮೂಲಕ ನೀರು ಮುಂದಕ್ಕೆ ಹರಿಯುವಂತಾಗಿ ದೂರ್ವಾಸ ಮತ್ತು ಇತರ ಮುನಿಗಳಿಗೆ ಆಹ್ನೀಕ ಮಾಡಲು ನೀರು ದೊರೆಯುವಂತಾಯಿತಂತೆ. ಹೀಗಾಗಿ ಈಗಲೂ ಭೀಮನ ಕಟ್ಟೆಯು ಬಂಡೆಗಳಿಂದ ಅಡ್ಡವಾಹಾಕಲ್ಪಟ್ಟು ನೀರು ಮುಂದೆ ಹರಿಯಲು ಮೂರು ರಂಧ್ರಗಳಿವೆ. ಬಹು ಸುಂದರವಾದ ಸ್ಥಳ. ತುಂಗಾ ನದಿ ತೀರದಲ್ಲಿ ಭೀಮೇಶ್ವರ ದೇವಾಲಯವಿದೆ ಮತ್ತು ಭೀಮಕುಂಡವಿದೆ. ಇದು ಜನಮೇಜಯರಾಯನು ಸರ್ಪ ಯಾಗಮಾಡಿದ ಸ್ಥಳವೆಂದೂ ಇತಿಹ ವಿದೆ. ಬಹುದೊಡ್ಡದಾದ ಮಠದ ಕಟ್ಟಡದಲ್ಲಿ ದಾಮೋದರ ಸೀತಾರಾಮಚಂದ್ರ

ದೇವರು, ಸೀತಾ ಲಕ್ಷ್ಮಣರ ಪ್ರತಿಮೆಗಳಿವೆ. 1½ ಅಡಿ ಎತ್ತರದ ರಾಮದೇವರ ವಿಗ್ರಹದ ಬಲಮೊಣಗಾಲಲ್ಲಿ ಹನುಮಂತ ಕಟ್ಟಿದ ಗಂಟೆ ಇರುವುದು ಈ ವಿಗ್ರಹದ ವಿಶೇಷ. ದೇವರ ಮನೆ ಎದುರಿಗೆ ಪ್ರಾಣದೇವನಿದ್ದಾನೆ. ಇಲ್ಲಿಯೇ ಭೂತರಾಜರ ಸನ್ನಿಧಿಯಿದೆ. ವಾದಿರಾಜರ ಮಠದ ಸಂಪ್ರದಾಯದಂತೆ ಪೂಜೆ ನಡೆಯುತ್ತಲಿದೆ. ಫೋನ್ ನಂ. 28201

## 159. ಮಹಿಷಿ :

ಈ ಕ್ಷೇತ್ರವು ಶಿವಮೊಗ್ಗ - ತೀರ್ಥಹಳ್ಳಿಯ ಹೆದ್ದಾರಿಯಲ್ಲಿ ತೀರ್ಥಹಳ್ಳಿಯಿಂದ 4 ಕಿ.ಮಿ. ಇದೆ. ತೀರ್ಥಹಳ್ಳಿಯಿಂದ ಪ್ರಯಾಣಿಸಿ ಒಳದಾರಿಯಲ್ಲಿ ಮಾಳೂರಿನಿಂದ ಹೋಗಬೇಕು. ಮಾಳೂರಿನಿಂದ ಹೋಗಲು ಯಾವ ಅನುಕೂಲವೂ ಇಲ್ಲ. ಬೆಜ್ಜವಳ್ಳಿ ಎಂಬಲ್ಲಿ ಆಟೋಗಳು ಸಿಗುವುದರಿಂದ ಅಲ್ಲಿಂದ ಪ್ರಯಾಣಿಸುವುದು ಸುಲಭ. ಆದರೆ ದುಬಾರಿ. ಆರಾಧನಾ ಕಾಲ ವೊಂದನ್ನು ಬಿಟ್ಟರೆ ಬೇರೆ ಕಾಲದಲ್ಲಿ ಅಲ್ಲಿಗೆ ದರ್ಶನಕೊಡುವುದು ಸುಲಭವಲ್ಲ. ನಡುಗೆ ಯಿಂದಲೇ ಈ ಸ್ಥಳ ಸೇರುವುದಾದ್ದರಿಂದ ಎಲ್ಲರಿಗೂ ಈ ಯಾತ್ರೆ ಸುಲಭವಲ್ಲ. ತುಂಗಾ ತೀರದ ಈ ಸ್ಥಳದಲ್ಲಿ ಉತ್ತರಾದಿಮಠದ ಯತಿಗಳಾದ ಸತ್ಯಸಂಧರ ಬೃಂದಾವನ ಅಶ್ವತ್ಥ ನಾರಾಯಣನ ಸನ್ನಿಧಿಯಲ್ಲಿವೆ. ಈ ಕ್ಷೇತ್ರದ ಬಳಿ ಆಂಜನೇಯನು ತಾನು ಶಿವಲಿಂಗವನ್ನು ತರುವ ಮೊದಲೇ ಶ್ರೀರಾಮನು ಮತ್ತೊಂದು ಶಿವಲಿಂಗವನ್ನು ಸ್ಥಾಪಿಸಿದ ಕಾರಣ ಆಂಜನೇಯನು ತಾನು ತಂದ ಶಿವಲಿಂಗವನ್ನು ನದಿಗೆ ಬಾಣಾಕಾರವಾಗಿ ಎಸೆದನು ಮತ್ತು ಕೋಪಗೊಂಡು ಸ್ತ್ರೀರೂಪದಿಂದಲೂ, ಎಮ್ಮೆಯ ರೂಪದಿಂದಲೂ ತಿರುಗಾಡಿದನಂತೆ. ಅಶ್ವತ್ಥಮರವನ್ನು ನೆಟ್ಟು ಸ್ತ್ರೀರೂಪದಿಂದ ಇಲ್ಲಿ ಆರಾಧಿಸುತ್ತಿದ್ದನಂತೆ. ಎಮ್ಮೆ ರೂಪದಿಂದಿದ್ದ ಆಂಜನೇಯನು ಓಡಾಡಿದ ಸ್ಥಳವೇ ಈಗ ಮಹಿಷಿಯಾಗಿದೆ. ಇಲ್ಲಿ ಆಂಜನೇಯನು ನೆಟ್ಟು, ಬೆಳೆಸಿ ಪೂಜಿಸಿದ "ಕೇಶವ ನಾರಾಯಣ" ಎಂಬ ಹೆಸರಿನ ಅಶ್ವತ್ಥವೃಕ್ಷ ಇಲ್ಲಿದೆ. ಇದನ್ನು ಹಾಲುಮಹಿಷಿಯೆಂದೂ ಕರೆಯುವರು.

## 160. ಅಂಬು ತೀರ್ಥ :

ತೀರ್ಥಹಳ್ಳಿಯಿಂದ 16 ಕಿ.ಮಿ. ಇದು ಅಧಿಕ ಮಳೆಯಾಗುವ ಪ್ರದೇಶಗಳಲ್ಲಿ ಒಂದು. ಇದನ್ನು ಆ ಕಾರಣದಿಂದಲೇ ದಕ್ಷಿಣದ ಆಗುಂಬೆ ಎನ್ನುವರು. ಇಲ್ಲಿ ತುಂಗಾ, ಶರಾವತಿ, ಮಾಲತಿ, ವರಾಹಿ ನದಿಗಳು ಹುಟ್ಟಿ ಹರಿಯುತ್ತವೆ. ಶ್ರೀರಾಮಚಂದ್ರನ ಶರದಿಂದ ಹುಟ್ಟಿದ ನದಿ ಶರಾವತಿ. ಇದು ಕವಲೇದುರ್ಗದ ಸಮೀಪ ನೊಣಬೂರು ಗ್ರಾಮಕ್ಕೆ ಸೇರಿದ ಈ ಸ್ಥಳದಲ್ಲಿ ಹುಟ್ಟುತ್ತದೆ. ಇದರಿಂದಲೇ ಈ ನದಿಗೆ ಶರಾವತಿ ಎಂಬ ಹೆಸರು ಬಂದುದು. ಅರಳ ಸುರುಳಿ ಜಲಪಾತ (6.10 ಮಿ) ಅಚ್ಚ ಕನ್ಯಾ ಜಲಪಾತ ಇಲ್ಲಿಯ ಆಕರ್ಷಣೀಯ ಸ್ಥಳಗಳು.

## 161. ಭದ್ರಾವತಿ :

ಶಿವಮೊಗ್ಗಾದಿಂದ 18 ಕಿ.ಮಿ. ಮೈಸೂರಿನಿಂದ 225 ಕಿ.ಮಿ. ಬೆಂಗಳೂರು 256 ಕಿ.ಮಿ. ಭದ್ರಾ ನದಿ ದಂಡೆಯಲ್ಲಿದೆ. ಇಲ್ಲಿ ಹಳೆಊರು, ಹೊಸಊರು ಎಂಬ ವಿಭಾಗಗಳಿವೆ. ಹಳೇಊರಿನಲ್ಲಿ ಅನೇಕ ದೇವಾಲಯಗಳಿವೆ. ಲಕ್ಷ್ಮಿಸಮೇತನಾಗಿ ನೆಲೆ ನಿಂತ ನರಸಿಂಹ, ಕಂಚಿನ ಬಾಗಿಲು ಆಂಜನೇಯ, ಹುತ್ತದ ಆಂಜನೇಯ ಇವು ಇಲ್ಲಿಯ ಮುಖ್ಯ ಪೂಜಾ ಸ್ಥಳಗಳು. ಮಾಧವ ತೀರ್ಥರ ಮಠದ ಯತಿಗಳಲ್ಲಿ ಒಬ್ಬರಾದ ಕೇಶವ ಮಾಧವ ತೀರ್ಥರ ಬೃಂದಾವನ ಇದೆ.

## 162. ಕೂಡಲಿ :

ಶಿವಮೊಗ್ಗದಿಂದ 12 ಕಿ.ಮಿ. ಭದ್ರಾವತಿಯಿಂದ 14 ಕಿ.ಮಿ. ಶಿವಮೊಗ್ಗಾ ಭದ್ರಾವತಿ ಬಳಸು ರಸ್ತೆಯಲ್ಲಿ ಪ್ರಯಾಣಿಸಿ ತುಂಗಾ ಸೇತುವೆಯ ಈ ಬದಿಯ ಒಳದಾರಿಯಲ್ಲಿ ಮುಂದು ವರಿವರೆ ಈ ಸಂಗಮಕ್ಷೇತ್ರ ಸಿಗುವುದು. ಇಲ್ಲಿ ತುಂಗಾ ನದಿಯು ಭದ್ರಾನದಿಯೊಡನೆ ಸಂಗಮವಾಗುತ್ತದೆ. ಇದು ಪ್ರಹ್ಲಾದನಿಗೆ ನರಸಿಂಹ ಪ್ರತ್ಯಕ್ಷವಾದ ಸ್ಥಳ. ಅತಿ ಪ್ರಾಚೀನವಾದ ನರಸಿಂಹನು ಸಾಲಿಗ್ರಾಮ ರೂಪದಲ್ಲಿ ಇಲ್ಲಿ ನೆಲೆಯಾಗಿದ್ದಾನೆ. ನರಸಿಂಹನು ಪ್ರಹ್ಲಾದ ವರದನಾಗಿ ಇಲ್ಲಿ ನಿಂತ ಪಾದ ಪ್ರದೇಶದ ಅಂಗುಷ್ಠದಲ್ಲಿ, ಕೂಡಲಿ ಕ್ಷೇತ್ರವಿರುವುದಾಗಿ ಪುರಾಣ ಹೇಳುತ್ತದೆ. ಪ್ರಹ್ಲಾದನು ಪೂಜಿಸಿದ ಚಿಂತಾಮಣಿ ನರಸಿಂಹನ ಸಾಲಿಗ್ರಾಮ ಶಿಲಾವಿಗ್ರಹವಿದೆ. ಪವಿತ್ರ ಅಶ್ವತ್ಥವೃಕ್ಷವೂ ಇದೆ. ಅಲ್ಲದೇ ಅಕ್ಷೋಬ್ಯತೀರ್ಥರ ಹಾಗೂ ಟೀಕಾರಾಯರ ಬೃಂದಾವನ ಸ್ಥಳವಾಗಿರುವುದರಿಂದ ಇದನ್ನು ಎರಡನೆ ಮಳಖೇಡವೆನ್ನುವರು.

ಕೃತಯುಗದಲ್ಲಿ ನರಸಿಂಹಾರಾಧನೆಗೋಸ್ಕರ ಪುಷ್ಪಕ್ಕಾಗಿ ಪ್ರಹ್ಲಾದನು ಬೆಳೆಸಿದ ಪಾರಿಜಾತ ವೃಕ್ಷವು ಈಗಲೂ ಇದ್ದು ವರ್ಷದ ಎಲ್ಲಾ ಕಾಲಗಳಲ್ಲಿ ಹೂವು ಬಿಡುವಂತಹ ಅಪೂರ್ವ ವೃಕ್ಷವಾಗಿದೆ. ಇಲ್ಲಿಯೇ ಕೇಶಿರಾಜ ಪುತ್ರಾರ್ಥಿಯಾಗಿ ಬಂದು ಶ್ರೀಗಳ ಸೇವೆ ಮಾಡಿವನಂತೆ. ಅವನಿಗೆ 2 ನೇರಳೆ ಹಣ್ಣು ಮಂತ್ರಿಸಿ ಕೊಟ್ಟಿದ್ದು, ಅದರಿಂದ ಅವನಿಗೆ ಪುತ್ರ ಸಂತಾನ ಪ್ರಾಪ್ತಿಯಾಯಿತಂತೆ. ಅಂತಹ ಮಹಿಮೆಯ ಸ್ಥಳ ಕೂಡಲಿ.

ಇಲ್ಲಿ ಪ್ರತಿದಿನ ಪೂಜೆ ನಡೆಯುತ್ತದೆ. ತಂಗಲು ಅವಕಾಶವಿಲ್ಲ. ತೀರ್ಥಪ್ರಸಾದಕ್ಕೂ ಅನುಕೂಲವಿಲ್ಲ.

## 163. ಹೊಳೆಹೊನ್ನೂರು :

ಕೂಡಲಿಯನ್ನು ಬಿಟ್ಟು ನದಿ ಸೇತುವೆ ದಾಟಿದೊಡನೆಯೇ ಈ ಸ್ಥಳ ಸಿಗುತ್ತದೆ. ಇಲ್ಲಿ ಉತ್ತರಾದಿಮಠದ ಶ್ರೀ ಸತ್ಯಧರ್ಮತೀರ್ಥರ ಮೂಲ ಬೃಂದಾವನವಿದೆ. ಇವರು ರುದ್ರಾಂಶ ಸಂಭೂತರು ಎನ್ನಲು ಬೃಂದಾವನ ಸನ್ನಿಧಿಯಲ್ಲಿ ರುದ್ರದೇವರು ಉದ್ಭವವಾಗುತ್ತಿದ್ದಾರೆ. ಇಲ್ಲಿ ಪೂಜೆ, ಪ್ರಸಾದ, ಹಸ್ತೋದಕಗಳಿಗೂ ಹಾಗೂ ತಂಗಲೂ ಅನುಕೂಲವಿದೆ. ಸತ್ಯ ಧರ್ಮರ ಆರಾಧನಾ ದಿವಸ ಶ್ರಾವಣ ವದ್ಯ ತ್ರಯೋದಶಿ.

ಸತ್ಯಧರ್ಮರು ಆಂಧ್ರದ ಗೋದಾವರಿ ತೀರದ ವಿಜಯನಗರಂ ಸಂಸ್ಥಾನಿಕರಿಂದ ಮುತ್ತಿನ, ಕಂಠೀ, ನವರತ್ನ ಖಚಿತ ಪೀಠ ಪ್ರಭಾವಳಿ, ಆಭರಣಗಳನ್ನು ಪಡೆದಿದ್ದರು. ಪೇಷ್ವೆ ಬಾಜಿರಾಯ, ಕೊಲ್ಹಾಪುರದ ಮಹಾರಾಜರು ಸಂಸ್ಥಾನಕ್ಕೆ ಅಪೂರ್ವ ಕಾಣಿಕೆಗಳನ್ನು ಇವರ ಕಾಲದಲ್ಲಿ ಕೊಟ್ಟರು. ಪೂರ್ಣಯ್ಯನವರಂತೂ ಇವರನ್ನು ಹೊಳೇನರಸೀಪುರಕ್ಕೆ ಆಮಂತ್ರಿಸಿ ಅಲ್ಲಿಯೇ ದೊಡ್ಡದಾದ ಮಠವನ್ನು ಕಟ್ಟಿಸಿಕೊಟ್ಟಿದ್ದರು. ಇವರು ಸ್ವಲ್ಪಕಾಲ (10 ವರ್ಷಗಳ ಕಾಲ) ಹೊಳೇ ನರಸೀಪುರದಲ್ಲಿಯೇ ಇದ್ದು ಉತ್ತರಾದಿ ಮಠದ ಪ್ರಭಾವ ಹೆಚ್ಚುವಂತೆ ಮಾಡಿದ್ದರು. ಇವರು ಪ್ರಸಿದ್ಧ ಟಿಪ್ಪಣಿಕಾರರು. ವಾಲ್ಮೀಕಿರಾಮಾಯಣದ ಮೇಲೆ ನಾರಾಯಣ ಪಂಡಿತಾಚಾರ್ಯರ ಸಂಗ್ರಹ ರಾಮಾಯಣದ ಮೇಲೆ ಇವರು ಟಿಪ್ಪಣಿಗಳನ್ನು ರಚಿಸಿದ್ದಾರೆ. ಭಾಗವತದ ಕೆಲವು ಸ್ಕಂದಗಳಿಗೆ ಇವರು ಟಿಪ್ಪಣಿ ರಚಿಸಿದವರು. ಶಾಸ್ತ್ರಗ್ರಂಥಗಳಾದ ತತ್ವ ಸಂಖ್ಯಾನಕ್ಕೆ ಈಗಿರುವ ಟಿಪ್ಪಣಿಗಳಲ್ಲಿ ಸತ್ಯಧರ್ಮರ ಟಿಪ್ಪಣಿಯೇ ವಿಸ್ತಾರವಾದುದು. ಇತರರು ಈ ಅಂಶಗಳನ್ನು ಯಾರೂ ಹೇಳಿಲ್ಲ. ಇವರ ಸುಂದರ ಹಸ್ತಾಕ್ಷರಗಳಿಂದ ರಚಿಸಿದ ಅಂಚಿನಲ್ಲಿ ಬಂಗಾರ ಬಣ್ಣದ ಹೂ ಚಿತ್ರಗಳಿಂದ ಅಲಂಕೃತವಾದ ಶ್ರೀ ಸರ್ವಮೂಲ ಗ್ರಂಥವು ಇಂದಿಗೂ ಉತ್ತರಾದಿಮಠದಲ್ಲಿ ಶ್ರೀಗಳಿಂದ ಪೂಜೆಗೊಳ್ಳುತ್ತಿದೆ. Phone : 835562

## 164. ಪುರಂದರ ಪುರ :

ಸಾಗರದ 54ನೆಯ ಶಿಲಾಶಾಸನದ ಆಧಾರದಂತೆ ಈ ಸ್ಥಳದಲ್ಲಿ ಪುರಂದರ ದಾಸರು ತುಂಗಾ ತೀರದ ಪುರಂದರಪುರವೆಂದು ಹೆಸರಾಂತ ಕ್ಷೇಮಪುರದಲ್ಲಿ ಕೆಲಕಾಲ ಇದ್ದರೆಂದು ಪ್ರತೀತಿ.

## 165. ಕುಬಟೂರು :

ಸೊರಬಾದಿಂದ 30 ಕಿ.ಮಿ. ಆನವಟ್ಟಿ ಸಮೀಪ. ಇದೇ ಕುಂತಳ ನಗರವೆಂದು ಖ್ಯಾತಿ ಯಾದ ಸ್ಥಳ. ಇದೇ ಚಂದ್ರಹಾಸನ ರಾಜಧಾನಿಯಾಗಿದ್ದ ಸ್ಥಳ. ಕಾಳಿದೇವಾಲಯವಿದ್ದುದು ಇಲ್ಲಿಯೇ. ಇಲ್ಲಿಯೇ ಮಂತ್ರಿ ದುಷ್ಟಬುದ್ಧಿ ಮರಣ ಹೊಂದಿದನಂತೆ. ಇವನು ಮರಣ ಹೊಂದಿದ ಸ್ಥಳವನ್ನು ಇಂದಿಗೂ ತೋರಿಸುತ್ತಾರೆ. ದುಷ್ಟಬುದ್ಧಿಯ ಕಲ್ಲಿನ ರುಂಡ ಬಾವಿಯಲ್ಲಿದೆಯಂತೆ. ರಾಮೇಶ್ವರ, ಚಿಂತಾಮಣಿ ನರಸಿಂಹದೇವರ ಗುಡಿಗಳು ಹಾಗೂ ಕೈಟಭೇಶ್ವರ ಗುಡಿಯೂ ಇದೆ. ಇಲ್ಲಿ ನಂದನವನ ಎಂಬ ಸ್ಥಳದಲ್ಲಿ ಗಿಳಿಗಳ, ಕೋಗಿಲೆಗಳ ಇಂಚರ, ದುಂಬಿಗಳ ಝೇಂಕಾರ ಇವುಗಳನ್ನು ಕೇಳಬಹುದು. ಬಿಳಿ ಕೊಳದಲ್ಲಿ ಹಂಸಗಳ ತೇಲಾಟ, ನವಿಲುಗಳ ನೃತ್ಯ ಇಂದಿಗೂ ನೋಡಬಹುದು.

## 166. ಚಿಪ್ಪಲ ಗುಡ್ಡೆ :

ತುಂಗಾನದಿಯ ಸುಂದರ ಸೊಬಗಿನ ತಾಣ. ನೀರಿನಲ್ಲಿ ವಿಹರಿಸುವ ದೊಡ್ಡ ಮೀನು ಗಳನ್ನು ಕಾಣಬಹುದು. ಸಿದ್ಧಿವಿನಾಯಕನ ದೇವಾಲಯವಿದೆ.

## 167. ರಾಮಚಂದ್ರಪುರ :

ಹೊಸನಗರದಿಂದ 6 ಕಿ.ಮಿ. ಇದು ವೈದಿಕ ಕ್ಷೇತ್ರ. ಸ್ಮಾರ್ಥ ಹವ್ಯಕ ಬ್ರಾಹ್ಮಣರ ಮಠವಿದೆ. ಇಲ್ಲಿಯ ದಂತಸಿಂಹಾಸನ ಅಪೂರ್ವ ಕೃತಿ.

## 168. ನಾಗರಹಳ್ಳಿ :

ನಗರ-ತೀರ್ಥಹಳ್ಳಿಗಳ ನಡುವೆ ಹೊಂಬುಜವೆಂಬ ಸ್ಥಳಕ್ಕೆ 5 ಕಿ.ಮಿ. ಇಲ್ಲಿ ಸುಬ್ರಮಣ್ಯನ ದೇವಾಲಯವಿದೆ. ಒಂದು ಅಡಿ ಮಾನವಾಕೃತಿಯ ದೇವರ ಸುತ್ತ 77 ನಾಗರ ಹೆಡೆಗಳನ್ನು ಕಲಾತ್ಮಕವಾಗಿ ಬಿಡಿಸಲಾಗಿದೆ.

## 169. ಬಳ್ಳಿ ಗಾವೆ :

ಶಿರಾಳಕೊಪ್ಪಕ್ಕೆ 3ಕಿ.ಮಿ. ಶಿಕಾರಿಪುರದಿಂದ 21 ಕಿ.ಮಿ. ತಾಳಗುಂದ ಸಮೀಪ. ಬಲಿಪುರವೆಂದು ಮತ್ತೊಂದು ಹೆಸರು. 1000 ವರ್ಷಗಳ ಇತಿಹಾಸ ಪಡೆದ ಊರು. ಪಟ್ಟಣಗಳ ತಾಯಿ. ಪುರಾತನ ಕುಂತಳದೇಶಕ್ಕೆ ಸೇರಿದ ಪ್ರದೇಶ. ಬನವಾಸಿ ನಾಡಿನ ರಾಜಧಾನಿ. ಪವಿತ್ರವಾದ ನಗರ. ವಾರಣಾಸಿಗಿಂತಲೂ ಎರಡರಷ್ಟು, ಕೇದಾರಕ್ಕಿಂತಲೂ ನೂರರಷ್ಟು, ಶ್ರೀಶೈಲಕ್ಷೇತ್ರಕ್ಕಿಂತಲೂ ಸಾವಿರದಷ್ಟು ಪವಿತ್ರವಾದ ಊರೆಂದು ಪ್ರಖ್ಯಾತಿ. ಇಲ್ಲಿ ಕೇದಾರೇಶ್ವರ, ತ್ರಿಪುರಾಂತಕೇಶ್ವರ, ಬ್ರಹ್ಮೇಶ್ವರ, ದೇವಾಲಯಗಳಿವೆ. ಇದನ್ನು ದಕ್ಷಿಣ ಕೇದಾರವೆನ್ನುತ್ತಾರೆ. ಮರಿ ಕಲ್ಯಾಣವೆಂಬ ಹೆಸರೂ ಉಂಟು. ದೇವಾಲಯವಲ್ಲದೆ ಅತಿ ಅಪರೂಪದ ಗಂಡಭೇರುಂಡ ಚಿತ್ರಣವಿದೆ.

ಜಯತೀರ್ಥರ ತಂದೆ ದುಂಡಿ ರಾಜ ಇಲ್ಲಿ ಬೃಹತ್ ಗಣಪತಿಯೊಂದನ್ನು ಪ್ರತಿಷ್ಠಿಸಿದ್ದ. ಇಂದಿಗೂ ಆ ಗಣಪತಿಯನ್ನು ದುಂಡಿ ರಾಜ ಗಣಪತಿ ಎನ್ನುವರು. ಇದನ್ನು ವೀಕ್ಷಿಸಬಹುದು.

## 170. ಸೊರಬ :

ಶಿವಮೊಗ್ಗದಿಂದ 88 ಕಿ.ಮಿ. ಸಾಗರ ಶಿರಾಳಕೊಪ್ಪ ರಸ್ತೆಯಲ್ಲಿದೆ. 12 ಶತಮಾನಕ್ಕೂ ಹಳೆಯದಾದ ಶ್ರೀ ರಂಗನಾಥನ ದೇವಾಲಯವಿದೆ. ಇಲ್ಲಿಯ ಉದ್ಭವ ಲಿಂಗದ ಮೇಲೆ ಸುರಭಿ ಮೊದಲಾದ ಹಸುಗಳು ಹಾಲು ಕರೆಯುತ್ತಿದ್ದವಂತೆ ಎಂಬ ಪ್ರತೀತಿ. ಗೋಪುರದಲ್ಲಿ ಮಹಾಲಕ್ಷ್ಮಿಯ ಶಿಲ್ಪವಿದೆ. ಇದು ಕಳದಿ ಅರಸರಿಂದ ಜೀರ್ಣೋದ್ಧಾರವಾಗಿದೆ.

## 171. ಕೋಟಿ ಪುರ :

ಕೈಭಟೇಶ್ವರ ದೇವಾಲಯವಿದೆ. ಇದು ಬಳ್ಳಿಗಾವಿಯ ಕೇದಾರೇಶ್ವರ ದೇವಾಲಯವನ್ನು ಹೋಲುವುದು.

## 172. ಬಸವಾಪಟ್ಟಣ :

ಭದ್ರಾವತಿ ತಾಲ್ಲೂಕು. ಇದು ಇತಿಹಾಸ ಪ್ರಸಿದ್ಧವೂ ಶ್ರೀ ಕ್ಷೇತ್ರಸ್ಥಳವೂ ಆಗಿರುವುದು. ರಾಘವೇಂದ್ರ ಸ್ವಾಮಿಗಳ ಬೃಂದಾವನ ಹೊಂದಿದ ಇದನ್ನು ಚತುರ್ಥ ಮಂತ್ರಾಲಯ ವೆನ್ನುವರು.

## 173. ಸುಣ್ಣದ ಹಳ್ಳಿ :

ಬೆಂಗಳೂರು ಭದ್ರಾವತಿ ನಗರಗಳ ನಡುವೆ ಇರುವ ರಸ್ತೆಯಲ್ಲಿ 4 ಕಿ.ಮಿ. ವ್ಯಾಸರಾಜ ರಿಂದ ಪ್ರತಿಷ್ಠಾಪನೆಗೊಂಡ ಪ್ರಾಣದೇವರ ಗುಡಿ ಇದೆ.

## 174. ಮಾಳೇನಹಳ್ಳಿ :

ಭದ್ರಾವತಿಗೆ ಸಮೀಪದಲ್ಲಿರುವ ಗ್ರಾಮ. ಇದು ಅಕ್ಷೋಭ್ಯ ತೀರ್ಥರ ದತ್ತು ಗ್ರಾಮ. ಇಲ್ಲಿನ ಪ್ರಸಿದ್ಧ ಪ್ರಾಣದೇವರನ್ನು ವಿಜಯದಾಸರು ಮುಂತಾದ ದಾಸವರೇಣ್ಯರು ದರ್ಶನ ಪಡೆದಿದ್ದಾರೆ.

## 175. ಅಂತರ ಗಂಗೆ :

ಶಿವನಿ ಅಜ್ಜಂಪುರ ರಸ್ತೆಯಲ್ಲಿ 6 ಕಿ.ಮಿ. ಶ್ರೀರಂಗನಾಥನ ಗುಡಿ ಇದೆ.

## 176. ಸಿದ್ದಾಪುರ :

6 ಅಡಿ ಎತ್ತರದ ಆಂಜನೇಯ.

## 177. ಇತರ :

**1. ಮಂಡಗದ್ದೆ :** ತೀರ್ಥಹಳ್ಳಿ ಶಿವಮೊಗ್ಗ ಹೆದ್ದಾರಿಯ ಪಕ್ಷಿ ಪಕ್ಷಿಧಾಮ.

**2. ಮತ್ತೂರು :** ಶಿವಮೊಗ್ಗಕ್ಕೆ 9 ಕಿ. ಮಿ. ಇಲ್ಲಿಯ ನಿತ್ಯ ಜನ ಸಂಸ್ಕೃತದಲ್ಲಿ ವ್ಯವಹರಿಸುವ ಸ್ಥಳ.

**3. ಜೋಗ :** ಶಿವಮೊಗ್ಗದಿಂದ 38 ಕಿ.ಮಿ. ವಿಶ್ವವಿಖ್ಯಾತ ಜಲಪಾತ.

**4. ಕೆಳದಿ :** ಸಾಗರದಿಂದ 9 ಕಿ. ಮಿ. ಅಘೋರೇಶ್ವರ ದೇವಾಲಯ.

**5. ಇಕ್ಕೇರಿ :** ನಾಯಕರ ಹಳೇ ರಾಜಧಾನಿ.

**6. ಹೊಂಬುಜ :** ಸಾಗರ - ತೀರ್ಥಹಳ್ಳಿ ಮಾರ್ಗ ರಿಪ್ಪನ್ ಪೇಟೆ ಬಳಿ ಪಂಚ ಬಸದಿಗಳು, ಜೈನಕಾಶಿ, ಇತಿಹಾಸ ತಿಳಿದವರಿಗೆ ಸಂದರ್ಶನಯೋಗ್ಯ ಸ್ಥಳ.

7. ಬರ್ಕಣ ಒನಕೆ ಅಬ್ಬಿ : ಪ್ರೇಕ್ಷಣೀಯ ಸ್ಥಳಗಳು, ಸೀತಾನದಿ ಜಲಪಾತ,

8. ಬಿದನೂರು : ಹೊಸ ನಗರದಿಂದ 15 ಕಿ. ಮಿ., ಶಿವಮೊಗ್ಗದಿಂದ 86 ಕಿ. ಮಿ., ಕೆಳದಿ ನಾಯಕರ ಐತಿಹಾಸಿಕ ನಗರ.

**9. ಕೊಡಚಾದ್ರಿ :** ಹೊಸನಗರದಿಂದ 46 ಕಿ. ಮಿ. ಬೆಟ್ಟ ಪ್ರದೇಶ 32 ಬಾಹುಗಳುಳ್ಳ ಹುಲಿರಾಯನ ಶಿಲಾಮೂರ್ತಿ.

**10. ಹುಲೀಕಲ್ :** ಹೊಸನಗರಕ್ಕೆ 30 ಕಿ. ಮಿ. ದಟ್ಟ ಅರಣ್ಯ, ಕುಂಚಕಲ್‌ಅಬ್ಬಿ ಜಲಪಾತ ಸೂರ್ಯಾಸ್ತದ ದೃಶ್ಯಗಳು.

**11. ಉದ್ರಿ :** ಹೂದೋಟಗಳ ನಗರ.

**12. ಕೆಂಚಮ್ಮನ ಗುಡಿ :** ವಿಹಾರ ಸ್ಥಳ, ಹುಲಿ ಗುಹೆ.

**13. ಬಿ. ಆರ್. ಪ್ರಾಜೆಕ್ಟ್ :** ಅಣೆಕಟ್ಟು, ಶಿವಮೊಗ್ಗ ವಿಶ್ವವಿದ್ಯಾನಿಲಯ ಕೇಂದ್ರಸ್ಥಳ.

# ಕಾರವಾರ ಜಿಲ್ಲೆ

## 178. ನಾರಳ ಮಠ :

ಇಲ್ಲಿ ಸೋದೆ ಮಠದ 9 ನೇ ಸ್ವಾಮಿಗಳಾದ ಶ್ರೀ ರತ್ನಗರ್ಭತೀರ್ಥರ ವೃಂದಾವನವಿರುವುದು, ಇವರು ಮಹಾಮಹಿಮರು, ತಪಸ್ವಿಗಳು. ಇವರು ಸಮಾಧಿ ಯೋಗದಿಂದಲೇ ಶ್ರೀ ಹರಿಯ ಅನುಗ್ರಹ ಪಡೆದವರು. ಇದುವೇ ಭೂತರಾಜರ ಜನ್ಮಸ್ಥಳ. ಇದು ವಾದಿರಾಜಮಠದ ಆಡಳಿತಕ್ಕೆ ಸೇರಿದೆ.

## 179. ಕೆಂಚಗಾರು :

ಹೊನ್ನಾವರ ತಾಲ್ಲೂಕು ಅವಧೂತರೆಂದು ಪ್ರಸಿದ್ಧರಾದ ಸೋದೆಮಠದ ಶ್ರೀ ವಿಶ್ವಪ್ರಿಯ ತೀರ್ಥರ (ಶ್ರೀವೃಂದಾವನಾಚಾರ್ಯರ) ಬೃಂದಾವನವಿದೆ. ಇವರು 'ವಿಠಲ' ಎಂಬ ಹೆಸರಿನಿಂದ ಮಹಾಪುರುಷರಾಗಿದ್ದಾರೆ. ಇಲ್ಲಿ ಭೂತರಾಜರ ಸನ್ನಿಧಿಯೂ ಇದೆ.

## 180. ಬೀಳಗಿ ಮಠ :

ಸಿದ್ದಾಪುರ ತಾಲ್ಲೂಕು, ಶ್ರೇಷ್ಠ ಗ್ರಂಥ ಕರ್ತರಾಗಿ ಮೆರೆದಿರುವ ವೇದಾಂಗ ತೀರ್ಥರ ವೃಂದಾವನವು ಇಲ್ಲಿದೆ. ಈ ಬೃಂದಾವನದ ಬಳಿಯೇ ಶ್ರೀ ವೇದವ್ಯಾಸ ದೇವರನ್ನು ಶ್ರೀ ಭೂತರಾಜರನ್ನು ಶ್ರೀ ವಾದಿರಾಜರು ಪ್ರತಿಷ್ಠಾಪಿಸಿದ್ದಾರೆ. ಇದು ವಾದಿರಾಜ ಮಠಕ್ಕೆ ಸೇರಿದೆ.

## 181. ಹೊನ್ನಾವರ :

ಬೆಂಗಳೂರಿಗೆ 500 ಕಿ. ಮಿ. ರಾಮನು ತ್ರೇತಾಯುಗದಲ್ಲಿ ವನವಾಸಕ್ಕೆ ಬಂದಾಗ ತಂಗಿದ ಸ್ಥಳ. ಇಲ್ಲಿ ರಾಮತೀರ್ಥ ಚಿಲುಮೆ ಇದೆ.

## 182. ಇಡುಗುಂಜಿ :

ಹೊನ್ನಾವರದಿಂದ 12 ಕಿ. ಮಿ. ದಕ್ಷಿಣಕ್ಕೆ. ಇಲ್ಲಿ ಬಹುಪುರಾತನವಾದ ಗಣಪತಿ ವಿಗ್ರಹ ವಿದೆ. ಇದು ತ್ರೇತಾಯುಗದಲ್ಲಿ ನಾರದರಿಂದ ಸ್ಥಾಪನೆಯಾದುದು. (83 ಸೆ. ಮಿ. ಎತ್ತರ, 53 ಸೆ. ಮಿ. ಅಗಲ) ಇದು ದ್ವಿಭುಜ ಗಣಪತಿ. ಇದನ್ನು ಕೋಳೆಯಡಿಕೆ ಗಣಪನೆಂದೂ ಕರೆಯು ವರು. ಒಂದು ಹಲಗೆಯ ಮೇಲೆ ನಿಂತಂತೆ ಇದೆ. ತಲೆಯ ಮುಂಭಾಗ ಆನೆಯ

ಕುಂಭ ಸ್ಥಳದಂತೆ. ಹಿಂಭಾಗ ಮನುಷ್ಯನಂತೆ, ಒಂದು ಕೈಯಲ್ಲಿ ಗಂಟೆ ಮತ್ತು ಮತ್ತೊಂದು ಕೈಯಲ್ಲಿ ಮೋದಕವಿದೆ. ಇದು ಕೆಂಪುಕಲ್ಲಿನ ದುಂಡು ಶಿಲ್ಪ. ಈ ಸ್ಥಳ ಹವ್ಯಕ ಜನಾಂಗದ ಯಾತ್ರಾಕ್ಷೇತ್ರ. ಶಿವರಾತ್ರೆ ಜಾತ್ರೆಯ ದಿನ (ಮಾಘ ಬಹುಳ ಅಮಾವಾಸ್ಯೆ) ವಿಶೇಷ ಪೂಜೆ, ಮಾಘ ಮಾಸದ ರಥಸಪ್ತಮಿ ರಥೋತ್ಸವ, ಇದರಿಂದ 16 ಕಿ. ಮಿ. ದೂರದಲ್ಲಿ ಗುಂಡನ ಬಾಗ್ ಹನುಮಂತ ದೇವಾಲಯವಿದೆ.

## 183. ಮಂಜು ಗುಣಿ :

ಶಿರಸಿ ಕುಮುಟಾ ರಸ್ತೆ, ಸಿರ್ಸಿಯಿಂದ ಗೋಕರ್ಣಕ್ಕೆ ಹೋಗುವ ದಾರಿಯಲ್ಲಿ ಸಂಪ ಖಂಡ ಎಂಬ ಸ್ಥಳಕ್ಕೆ ಸ್ವಲ್ಪ ದೂರದಲ್ಲಿದೆ. ಶಿರಸಿಯಿಂದ 26 ಕಿ. ಮಿ. 4 ಕಿ. ಮಿ. ಒಳ ರಸ್ತೆಯ ನಂತರ ಈ ಸ್ಥಳ ಗೋಕರ್ಣಕ್ಕೆ ಹೋಗುವ ರಸ್ತೆಯಲ್ಲಿ ಸಿಗುವ ಊರು. ತೀರ್ಥ ಪ್ರಬಂಧದಲ್ಲಿ ಇದರ ವರ್ಣನೆ ಇದೆ. ಇಲ್ಲಿಯ ಸ್ಥಳ ಪುರಾಣದಂತೆ ಸ್ವಯಂ ವ್ಯಕ್ತನಾದ ವೆಂಕಟೇಶ್ವರನು ಬೇಟೆಯಾಡುತ್ತಾ ಅನೇಕಾನೇಕ ದೇಶಗಳಲ್ಲಿ ಸಂಚರಿಸುತ್ತಾ ಬಂದು ಕೊನೆಗೆ ಉತ್ತರಕನ್ನಡ ಜಿಲ್ಲೆಯಲ್ಲಿ ಹರಿಯುವ ಸೋಮಘನಾಶಿನಿ ನದಿ ತೀರದಲ್ಲಿ ನಿದ್ರಿಸಿರುತ್ತಾನೆ. ಆಗ ತಿರುಮಲನೆಂಬ ವಿಪ್ರನು ಅಲ್ಲಿಗೆ ಬಂದು ನದಿಯ ಶುದ್ಧ ಜಲವನ್ನು ಕಂಡು ಮೋಹಿತ ನಾಗಿ ಸಂಧ್ಯಾವಂದನೆಗಳನ್ನು ಮಾಡುತ್ತಾ ಅಲ್ಲಿಯೆ ನೆಲೆಸಿದನು. ಆಗ ಆ ವಿಪ್ರನಿಗೆ ಅಲ್ಲಿಂದ 10 ಕಿ. ಮಿ. ದೂರದಲ್ಲಿರುವ ಮಂಜುಗುಣಿ ಎಂಬ ಊರಿನಲ್ಲಿ ಶಿಲಾಮಯ ಆಲಯ ನಿರ್ಮಿಸಿ ಅಲ್ಲಿ ವೈಷ್ಣವಾಗಮರೀತಿಯಿಂದ ವೆಂಕಟೇಶ್ವರನನ್ನು ಪೂಜಿಸು ಎಂಬು ದಾಗಿ ಅಶರೀರವಾಣಿಯಾಯಿತು. ಅದರಂತೆ ಆ ಬ್ರಾಹ್ಮಣನು ಮಂಜುಗುಣಿ ಗ್ರಾಮದಲ್ಲಿ ಆ ದೇವರನ್ನು ಪ್ರತಿಷ್ಠಾಪಿಸಿದನು. ಅಲ್ಲಿ ಗಿರಿಗುಹೆಯಲ್ಲಿ ನಿಂತಿರುವ ಶಂಖಚಕ್ರ ಗಧಾಧರ ಶ್ರೀ ವೆಂಕಟೇಶ್ವರನಿದ್ದಾನೆ. ಪಾದಗಳಲ್ಲಿ ಪಾದುಕೆಗಳಿವೆ. ಕೈಯಲ್ಲಿ ಬಿಲ್ಲುಬಾಣ ಹಿಡಿದಿರು ವನು. ಇದನ್ನು ವೆಂಕಟರಮಣ ಕ್ಷೇತ್ರವೆನ್ನುವರು. ದೇವರು ಬಾಲಾಜಿ ಅಥವಾ ವೆಂಕಟೇಶ.

## 184. ಭಟ್ಕಳ :

ಬೆಂಗಳೂರಿಗೆ 452 ಕಿ. ಮಿ. ಸುರಭಿ (ಶರಾಬಿ) ನದಿಯ ಮೇಲಿರುವ ವಿಜಯನಗರ ಸಾಮ್ರಾಜ್ಯ ಕಾಲದ ಬಂದರು ಮತ್ತು ಊರು, ಇಲ್ಲಿ 12 ಸುಂದರ ಗುಡಿಗಳಿವೆ. ಬಹಳ ಹೆಸರುವಾಸಿಯಾದ ಖೇತಪ್ಪಯ್ಯ ನಾರಾಯಣ ಗುಡಿ ಇದೆ (1545 - 46) ಗ್ರಾಮದೇವತೆ ಮಾರುತಿ. ಇಲ್ಲಿ 8 ದಿಕ್ಕಿಗೆ 8 ಮಾರುತಿ ಮಂದಿರಗಳಿವೆ. ಕಾಶಿಮಠದ ಮೊದಲ ಸ್ವಾಮಿಗಳಾದ ಯಾದವೇಂದ್ರ ತೀರ್ಥರ ಸಮಾಧಿ ಇಲ್ಲಿದೆ. ಮೊದಲ ಗುರು ನಾರಾಯಣ ತೀರ್ಥರಿಂದ ಕಟ್ಟಲ್ಪಟ್ಟ ಗೋಕರ್ಣಪರ್ತ ಗಾಳಿ ಮಠವೂ ಇರುವುದು. ಹಿಂದೆ ಗೋವಾದ ಕುಶಾವತಿ ನದಿ ತೀರದ ಮಡಗಾಂವ್‌ಯಲ್ಲಿ ಈ ಮಠವಿದ್ದು ಪೋರ್ಚುಗೀಸರ ದೌರ್ಜನ್ಯದಿಂದ ಸ್ಥಳಾಂತರ ಗೊಂಡು ಇಲ್ಲಿಗೆ ಬದಲಾಗಿದೆ. ಇಲ್ಲಿಗೆ 6 ಕಿ. ಮಿ. ದೂರದಲ್ಲಿ ಪಾರಿವಾಳದ ದ್ವೀಪವೆಂಬ ಸುಂದರ ತಾಣವಿದೆ.

## 185. ಮುರುಡೇಶ್ವರ :

ಭಟ್ಕಳಕ್ಕೆ ಹತ್ತಿರ. 18 ಕಿ. ಮಿ. ರಾವಣ ನಿರ್ಮಿತ ಪಂಚ ಕ್ಷೇತ್ರಗಳಲ್ಲಿ ಒಂದು. (ಸಜ್ಜೇಶ್ವರ, ಗುಣೇಶ್ವರ, ಧಾರೇಶ್ವರ, ಸಂಪಟೇಶ್ವರ ಇತರವು) ಈ ಸ್ಥಳ ನಿಸರ್ಗ ಸಿರಿಯ ತವರೂರು. ಭಕ್ತಾದಿಗಳನ್ನೂ ಪ್ರವಾಸಿಗರನ್ನೂ ಒಮ್ಮೆಲೆ ಆಕರ್ಶಿಸುವ ದ್ವೀಪ. ನದಿ ದೇವತೆ ಸಮುದ್ರ ಧಸರನ ತೆಕ್ಕೆಗೆ ಅನಾಮತ್ತಾಗಿ ಸೇರುವ ಒನಪು, ವಯ್ಯಾರದ ಅಪೂರ್ವ ಸಂಭ್ರಮ. ಕೆರೆ ತೊರೆಗಳ ಎದೆಯಲ್ಲಿ ತೇಲುವ ಹಸುರಿನ ನಿತ್ಯ ಸುಂದರ ದ್ವೀಪ. 20 ಎಕರೆಗಳಷ್ಟು ವಿಸ್ತಾರದ ಮುರುಡೇಶ್ವರ ಅದ್ವಿತೀಯ ಪ್ರವಾಸಿ ತಾಣ. ಕರ್ನಾಟಕದ ಕನ್ಯಾಕುಮಾರಿ.

ಸ್ಥಳ ಪುರಾಣದಂತೆ ರಾವಣ ಆತ್ಮಲಿಂಗ ಕೀಳುವಾಗ ಲಿಂಗಕ್ಕೆ ಸುತ್ತಿಕೊಂಡಿದ್ದ ವಸ್ತ್ರವನ್ನು ದಕ್ಷಿಣಾಭಿಮುಖವಾಗಿ ಎಸೆದನಂತೆ. ಆ ವಸ್ತ್ರದ ಒಂದು ಭಾಗ ಕಂದಕಗಿರಿಯೆಂಬ ಹೆಸರಿನ ಇಲ್ಲಿ ಬಿತ್ತೆಂದು ಇದನ್ನು ಮೃಡೇಶ್ವರ ಕ್ಷೇತ್ರವೆಂದೂ ಆದಕ್ಕಾಗಿ ಕರೆದಿದ್ದಾರೆ. ಈ ಕಥೆಯ ಒಟ್ಟು ಚಿತ್ರಣವನ್ನು ದೇವಸ್ಥಾನದ ಶಿಖರದ ಆವರಣದ ಸುತ್ತಲೂ ಸ್ಥಪತಿಗಳು ಅಂದವಾಗಿ ಕೆತ್ತಿದ್ದಾರೆ. ಸಪ್ತ ಋಷಿಗಳು ತಪಸ್ಸಿಗೆ ಕುಳಿತ ಪೌರಾಣಿಕ ಕಲ್ಪನೆಯೂ ಇವರ ಹಸ್ತಕೌಶಲ್ಯ ದಲ್ಲಿ ಅಪೂರ್ವವಾಗಿ ಅರಳಿಕೊಂಡಿವೆ.

ಈ ದೇವಸ್ಥಾನವಿರುವುದು ಒಂದು ದ್ವೀಪದ ಮೇಲೆ. ಎಂದು ಆಗಲೇ ಹೇಳಿದೆ. ಇದಕ್ಕೆ ಕಂದುಕಗಿರಿ, ಕಂದುಕ ಪರ್ವತ, ಕೋಟೆ ಗುಡ್ಡ ಎಂಬ ಹೆಸರೂ ಇದೆ. ಇದರ ಜೀರ್ಣೋದ್ಧಾರದ ಸಮಯದಲ್ಲಿ ಪೂರ್ವ ದಿಕ್ಕಿನಲ್ಲಿ ಸಮುದ್ರದಲ್ಲಿಯೇ ಕಲ್ಲುಮಣ್ಣು ಸೀಮೆಂಟನ್ನು ಬಳಸಿ ರಸ್ತೆನಿರ್ಮಿಸಿದೆ. ಹೀಗಾಗಿ ಇದು ದ್ವೀಪವೆಂಬ ಕಲ್ಪನೆಯ ನೋಟ ಸಿಗುವುದಿಲ್ಲ. ಸಮುದ್ರ ಸುತ್ತಲೂ ಕಂಗೊಳಿಸುತ್ತಿದ್ದ ಅಲೆಗಳು ಈ ದ್ವೀಪದ ತೀರಕ್ಕೆ ಅಪ್ಪಳಿಸುವ ದೃಶ್ಯ ಮನಮೋಹಕ. ಅಮಾವಾಸ್ಯೆಯ ದಿನಗಳಂತೂ ಈ ದೇವಾಲಯ ಅಲೆಗಳಲ್ಲಿ ತೇಲುತ್ತಿರುವಂತೆ ಕಂಗೊಳಿಸುತ್ತದೆ. ಈ ದ್ವೀಪದ ಪೂರ್ವಭಾಗದಲ್ಲಿ ದೇವ ಸ್ಥಾನವಿದೆ. ದೇವಸ್ಥಾನದ ಬಾಗಿಲಿನಲ್ಲಿ ಏಕಶಿಲೆಯ ದ್ವಾರ ಪಾಲಕನಿದ್ದಾನೆ. ದೇವಸ್ಥಾನದ ಮುಖ ಮಂಟಪ, ಶಿಲ್ಪ ಕಲಾರತ್ನ. ದೇವಸ್ಥಾನದ ಒಳಭಾಗದಲ್ಲಿ ಗರ್ಭಗುಡಿಯಲ್ಲಿ ಅಪರೂಪವೆನ್ನಬಹುದಾದ ಹಲವು ಕಂಬಗಳಿವೆ. ಒಂದೇ ಶಿಲೆಯಿಂದ ನಿರ್ಮಿಸಿದ ಈ ಕಂಬಗಳ ಮೇಲಿನ ಕೆತ್ತನೆ ಅಮೋಘ. ಗರ್ಭಗುಡಿ ಮತ್ತು ಮುಖಮಂಟಪದ ಮಧ್ಯೆ ಜೀವಂತವೆಂದೇ ಭ್ರಮೆಗೊಳಿಸುವ ನಂದಿಯಿದೆ. ದೇವರು ಮೃಡೇಶ್ವರ. ಗಣಪತಿ, ಕಂಚಿನ ನಟರಾಜ, ಪಾರ್ವತಿ ಇವುಗಳನ್ನು ದರ್ಶಿಸಬಹುದು. ಅಪರೂಪದ ಕಲಾಕೃತಿಯೊಂದರಲ್ಲಿ ತಲೆಯ ಎಡಭಾಗಕ್ಕೆ ಗಜರಾಜ. ಬಲಭಾಗಕ್ಕೆ ಕೈ ಇಟ್ಟು ಕಂಡರೆ ನಂದಿಯ ದರ್ಶನ. ಪೌರಾಣೀಕ ಮಹತ್ವದ ಭೀಮತೀರ್ಥ. ಇದು ಸಮುದ್ರದ ದಂಡೆಯಲ್ಲಿದ್ದು ಸಿಹಿನೀರಿನ ಕೊಳವಾಗಿದೆ. ದೇವಸ್ಥಾನದ ಹಿಂಬದಿಯ ಕಡಲ ದಂಡೆಯಲ್ಲಿ ನಿಸರ್ಗವೇ ನಿರ್ಮಿಸಿದ ನಾನಾ ಸ್ವರೂಪದ ಬಂಡೆಗಳಿವೆ. ಕಲ್ಯಾಣಿ ಮಂಟಪ, ಪ್ರವಾಸಿಗರಿಗೆ ಅಪೂರ್ವ ವಸತಿ ಗೃಹ, ಉಚಿತ ಊಟ ಹೀಗೆ ನೂರಾರು ಬಗೆಯ ನೋಟ, ಸೌಲಭ್ಯ ಇಲ್ಲಿದೆ.

## 186. ಗೋಕರ್ಣ :

ಬೆಂಗಳೂರಿನಿಂದ 475 ಕಿ. ಮಿ., ಕುಮಟಾದಿಂದ 16 ಕಿ. ಮಿ. ಈ ಕ್ಷೇತ್ರವು ಕುಮಟಾ ತಾಲ್ಲೂಕಿನ ಅರಬ್ಬಿ ಸಮುದ್ರದ ತೀರದಲ್ಲಿದೆ. ಇದು ಕಾಶಿರಾಮೇಶ್ವರಗಳಂತೆ ಶಿವಕ್ಷೇತ್ರ. ಎಲ್ಲಾ ಪ್ರಮುಖ ಕೇಂದ್ರಗಳಿಂದ ರಸ್ತೆ ಸೌಕರ್ಯವಿದೆ. ಇಲ್ಲಿ ಹಿಂದೆ ತ್ರೇತಾಯುಗದಲ್ಲಿ ರಾವಣನಿಂದ ಸ್ಥಾಪಿತ ವಾದ ಮರಳಿನ ಮಹಾಬಲೇಶ್ವರ ಲಿಂಗವಿದೆ. ಇದು ನೆಲದಿಂದ 2 ಅಡಿ ಮಾತ್ರ ಮೇಲಿದ್ದು ಸಾಗರಾಭಿಮುಖವಾಗಿದೆ. ಮಹಾಗಣಪತಿ ಹಾಗೂ ಕಾಶಿ ವಿಶಾಲಾಕ್ಷಿಯ ಮಂದಿರಗಳು ಎಡಬಲಗಳಲ್ಲಿವೆ. ಈ ಕ್ಷೇತ್ರದಲ್ಲಿ 4 ಚ. ಕಿ. ಮಿ. ವಿಸ್ತಾರವುಳ್ಳ ಕೋಟಿ ತೀರ್ಥವೆಂಬ ಪುಷ್ಕರಿಣಿ ಇದೆ. ಮಹಾಗಣಪತಿ 3 ಅಡಿ ಎತ್ತರವಿದ್ದು ಕೈಕಾಲು ಗಿಡ್ಡಗಿವೆ. ಕಚ್ಚೆ ಹಾಕಿ, ಧೋತ್ರ ಹೊದ್ದಿರುವ ಮೂರ್ತಿ. ಇಲ್ಲಿ 12 ವರ್ಷಗಳಿಗೊಮ್ಮೆ ಅಷ್ಟಬಂಧ ಸಮಾರಂಭವು ನಡೆಯುವುದು. ಗೋಕರ್ಣ ಕ್ಷೇತ್ರಾಧಿಪತಿಯನ್ನು 3 ಶ್ಲೋಕ ಗಳಿಂದ, ವಿಘ್ನಹರನಾದ ಗಣಪತಿಯನ್ನು ಒಂದು ಶ್ಲೋಕದಿಂದ ಶ್ರೀವಾದಿರಾಜರು ವರ್ಣಿಸಿರು ತ್ತಾರೆ. "ಶ್ರೀ ಹರಿಯ ಪಾದಭಜಕರಾಗಿ ಶ್ರೀ ನಾರಾಯಣನ ಪೂಜೆಯಲ್ಲಿ ನಿರತರಾಗಿ ಹರಿಭಕ್ತ ರಲ್ಲಿ ಪ್ರೇಮಾದರಗಳನ್ನು ಹೊಂದಿ ನಮ್ಮನ್ನು ಹರಿಭಕ್ತರೆಂದು ಯಾರು ಸೇವಿಸುತ್ತಾರೋ ಅಂಥವರ ಅಭಿಲಾಷೆಗಳನ್ನು ಕ್ಷಿಪ್ರವಾಗಿ ಪೂರೈಸುವನು" ಎಂಬ ರಹಸ್ಯವನ್ನು ಭೂದೇವಿಗೆ ಕಿವಿಯಲ್ಲಿ ಬೋಧಿಸುತ್ತಿರುವ ಗೋಕರ್ಣ ನಿವಾಸಿ ಗೌರಿವಲ್ಲಭನು ಈ ಕ್ಷೇತ್ರದಲ್ಲಿ ವಿರಾಜಿಸುತ್ತಿರುವನು.

## 187. ಸೋದೆ :

ಬೆಂಗಳೂರಿನಿಂದ 399 ಕಿ. ಮಿ. ಶಿರಸಿಯಿಂದ 22 ಕಿ. ಮಿ. ಬೆಂಗಳೂರು - ಪೂನಾ ಮಾರ್ಗದಲ್ಲಿ ರೈಲಿನಲ್ಲಿ ಸಂಚರಿಸಿ ಹಾವೇರಿಯಲ್ಲಿ ಇಳಿದು ಸುಮಾರು 50 ಕಿ. ಮಿ. ಬಸ್ಸಿನಲ್ಲಿ ಪ್ರಯಾಣಿಸ ಬೇಕು. ಆದರ ರೈಲ್ವೆ ನಿಲ್ದಾಣಕ್ಕೂ ಹಾವೇರಿ ಬಸ್ ನಿಲ್ದಾಣಕ್ಕೂ ಸ್ವಲ್ಪ ದೂರ ವಿದೆ. ಇದನ್ನು ಸೊಂದಾಪುರ, ಸ್ವಾದಿ, ಸೊಂದಾ, ಎಂಬ ಹೆಸರುಗಳಿಂದಲೂ ಕರೆದಿರುವರು. ಮಧ್ವಾಚಾರ್ಯರ ತಮ್ಮಂದಿರಾದ ಶ್ರೀ ವಿಷ್ಣುತೀರ್ಥರು ಸ್ವಾದಿಮಠದ ಯತಿ ಪೀಠಿಗೆಗೆ ಮೂಲಪುರುಷರು. ವಿಷ್ಣುತೀರ್ಥರ ಪರಂಪರೆಯಾದ ಶ್ರೀ ಸೋದೆಮಠದ (ಅನಂತಾಸನ) ವಾಗೀಶತೀರ್ಥರ ಶಿಷ್ಯರಾದ ವಾದಿ ರಾಜರ ಬೃಂದಾವನವಿದೆ. ಸೋದೆ ಪರಿಸರ ಶುದ್ಧ, ಸಮೃದ್ಧ, ಮನಮೋಹಕ ನಿತ್ಯನೂತನ ಹಸಿರು ಹೊದ್ದು ಮಲಗಿದ ದಟ್ಟ ಅಡವಿಯ ಮಧ್ಯದ ಒಂದು ಪುಟ್ಟ ಪ್ರದೇಶ, ಯಾತ್ರಾಸ್ಥಳ.

ಈ ಮಠದ ಬೆಳವಣಿಗೆಗೆ ಅಲ್ಲಿನ ರಾಜಕೀಯ ವಿಷಯಗಳು ಕಾರಣ. ಅರಸು ಅರಸಪ್ಪ ನಾಯಕ ತನಗೆ ಬಂದ ವಿಪತ್ತಿನಿಂದ ಶ್ರೀವಾದಿರಾಜರ ಅನುಗ್ರಹದಿಂದ ಪಾರಾದಾಗ, ವಾದಿರಾಜರಲ್ಲಿ ಉಂಟಾದ ಭಕ್ತಿಶ್ರದ್ಧೆಯ ದ್ಯೋತಕವಾಗಿ ಮಠ ನಿರ್ಮಿಸಲು ವಿನಂತಿಸಿ ಕೊಂಡ. ಇದರ ಫಲವೇ ವಾದಿರಾಜಮಠ. ಮಠ ನಿರ್ಮಾಣವಾದಾಗ ವಾದಿರಾಜರು ಭೂತ ರಾಜನಿಗೆ ಸುಮುಹೂರ್ತಕ್ಕೆ ಸರಿಯಾಗಿ ಬದರಿಯ ಬಳಿ ಇದ್ದ ರಥಾರೂಢ ತ್ರಿವಿಕ್ರಮ

ದೇವರನ್ನು ರಥ ಸಮೇತವಾಗಿಯೇ ತರಲು ಕಟ್ಟಪ್ಪಣೆ ಮಾಡಿದರು. ಬರುವಾಗ ದಾರಿಯಲ್ಲಿ ರಾಕ್ಷಸರಿಂದ ವಿಘ್ನವಾದಾಗ ರಥದ ಗಾಲಿಯೇ ಅವರ ಸಂಹಾರಕ್ಕೆ ಆಯುಧವಾಯಿತು. ಆದುದರಿಂದಲೇ ಇಂದಿಗೂ ದೇವಸ್ಥಾನದ ರಥ ಸಹಿತ ಕಟ್ಟಡದಲ್ಲಿ 3 ಗಾಲಿಗಳು ಮಾತ್ರ ಇವೆ. ಅಂತೂ ಸರಿಯಾಗಿ ಚಿತ್ರ ಭಾನು ಸಂವತ್ಸರದ ವೈಶಾಖಪೌರ್ಣಿಮೆಯಂದು ಈ ದೇವಾಲಯದ ಪ್ರತಿಷ್ಠೆಯಾಯಿತು. ಈ ದೇವಾಲಯದ ಮುಂದೆ ವಿಶಾಲವಾದ ಪಾಣಿಪೀಠದ ಮೇಲೆ ಇರುವ ಗರುಡ ಗಂಬ 500ಃ ವರ್ಷಕ್ಕೂ ಹಳೆಯದು. ಈ ದೇವಾಲಯದ ಮುಂದೆ ಇದರ ಮೇಲೆ ಲಕ್ಷ್ಮೀ ನಾರಾಯಣ, ರುದ್ರರ ಪ್ರತಿಮೆಗಳು. 80 ಅಡಿ ಎತ್ತರದ ಧ್ವಜಸ್ಥಂಭದ ಮೇಲೆ ಸುಂದರವಾದ ಗರುಡ ಮಂಟಪ. ಎಷ್ಟು ಪ್ರಯತ್ನಿಸಿದರೂ ನಿಲ್ಲದ ಗರುಡ ಗಂಭ ವಾದಿರಾಜರ ಸೂಚನೆಯಂತೆ ಇದರ ಮೇಲೆ ಹಂಸವಾಹನ ಸ್ಥಾಪಿಸಿದ್ದಾರೆ. ಶ್ರೀ ಲಕ್ಷ್ಮಿಸಮೇತ ಇರುವ ತ್ರಿವಿಕ್ರಮ ಈ ಸ್ಥಳದ ಅತಿ ಪುರಾತನ ದೇವರು. ಇದು ತಂತ್ರ ಸಾರೋಕ್ತ ಲಕ್ಷಣಗಳುಳ್ಳ ಸುಂದರ ವಿಗ್ರಹ. ಪತ್ನಿಯ ಹೆಸರು ರಮಾ. ರಾಜನ ಸಹಾಯದಿಂದ ತ್ರಿವಿಕ್ರಮ ದೇವಾಲಯದ ರಚನೆ ಮಾಡಿದ ಬಗ್ಗೆ ಒಂದು ಕಥೆ ಇದೆ. ಬೃಹತ್ ಪ್ರಮಾಣದ ಬಂಡೆಗಳಿಂದ ಕಟ್ಟಡ ರಚಿಸುತ್ತಿದ್ದಾಗ ಸರಪಣಿ, ಹಗ್ಗಗಳಿಗೂ ಜಗ್ಗದೆ ಒಂದು ಬೃಹತ್ ಶಿಲೆ ಮೇಲೇರಲಿಲ್ಲ. ಒಬ್ಬ ಕಲ್ಲು-ಕುಟುಕ ಈ ಶಿಲೆಯನ್ನು ಕುರಿತು "ವಾದಿರಾಜರಾಣೆ, ನೀನು ಕೆಳಗೆ ಬಿದ್ದರೆ" ಎಂದನಂತೆ. ಕೂಡಲೇ ಶಿಲೆ ಅಂತರಾಳದಲ್ಲಿ ನಿಂತು ಬಿಟ್ಟಿತಂತೆ. ಇದು ವಾದಿರಾಜರಿಗೆ ತಿಳಿದು ಆ ಶಿಲೆಯನ್ನು ವಿಶೇಷ ಪ್ರಯತ್ನವಿಲ್ಲದೇ ಜೋಡಿಸಿಟ್ಟರಂತೆ. ಇವತ್ತಿಗೂ ಆ ಶಿಲೆಯನ್ನು ತೋರಿಸಿ ಯಾತ್ರಿಕರಿಗೆ ಈ ಕಥೆಯನ್ನು ತಿಳಿಸುತ್ತಾರೆ. ನಾರಾಯಣ ಭೂತರಾಜರ ಗುಡಿ ಬೃಂದಾವನ ಪಕ್ಕದಲ್ಲಿದ್ದು ಅಲ್ಲಿಗೆ ಬಂದ ಪ್ರತಿಯೊಬ್ಬರೂ ತೆಂಗಿನಕಾಯಿ ಉರುಳಿಸುವುದು ಒಂದು ಸಂಪ್ರದಾಯ. ಈ ಭೂತರಾಜರಿಗೆ ಈ ಕ್ಷೇತ್ರದಲ್ಲಿ ಮುಖ್ಯ ಸ್ಥಾನವಿದೆ. ಏಕೆಂದರೆ ಅವರೇ ವಾದಿರಾಜರ ನೆಚ್ಚಿನ ಭಂಟರು. ಅಲ್ಲಿ ವಾದಿರಾಜರ ಆಜ್ಞೆಯಂತೆ ಎಲ್ಲ ಕೆಲಸಗಳನ್ನೂ ನಿರ್ವಹಿಸುತ್ತಿರುವರು. ಅವರೇ ವಾದಿರಾಜರು ಸಶರೀರವಾಗಿ ವೃಂದಾವನ ದೊಳಕ್ಕೆ ಹೋಗಿ ಕುಳಿತಾಗ ಬಾಗಿಲನ್ನು ಕಲ್ಲಿನಿಂದ ಮುಚ್ಚಿದ್ದು. ವಾದಿರಾಜರು ಅನೇಕ ವರ್ಷಗಳ ಹಿಂದೆ ತಾವೇ ಮಾಡಿಸಿ ಪೂಜಿಸುತ್ತಿದ್ದ 'ಶ್ವೇತದ್ವೀಪ' ಎಂದು ಪ್ರಸಿದ್ಧಿ ಇರುವ ಮಧ್ಯ ವೃಂದಾವನ ಪ್ರವೇಶ ಮಾಡಿ ಒಂದು ರೂಪದಿಂದ ಮೂಲರೂಪಕ್ಕೆ ಸೇರಿಹೋಗಿ ಭಕ್ತಾದಿಗಳನ್ನು ನಿರಂತರವಾಗಿ ಅನುಗ್ರಹಿಸುತ್ತಿದ್ದಾರೆ.

ವಾದಿರಾಜರ ಬೃಂದಾವನ ಸ್ಥಳ ದೇವಾಲಯದಿಂದ 25 ಅಡಿ ಕೆಳಗೆ ಧವಳಗಂಗಾ ಸರೋವರದ ತೀರದಲ್ಲಿದೆ. ಒಳಾಂಗಣದ ಆವರಣದಲ್ಲಿ 27 ಕಂಬಗಳಿವೆ. ನಾಲ್ಕು ದಿಕ್ಕುಗಳಲ್ಲಿ ಸುಂದರ ಮಂಟಪಗಳಿವೆ. ಒಳಗೆ ಪಂಚ ಬೃಂದಾವನಗಳಿವೆ. ಇದಕ್ಕೆ ದೇವರು ಅನಿರುದ್ಧ, ಪ್ರದ್ಯುಮ್ನ ಸಂಕರ್ಷಣ, ವಾಸುದೇವ, ನಾರಾಯಣ, ಎಂಬ ಐದು ರೂಪಗಳಲ್ಲಿ ಸನ್ನಿಹಿತವಾಗಿರುತ್ತಾನೆ ಎಂಬುದು ವಾದಿರಾಜರ ಉಕ್ತಿ. ಇದನ್ನು ಪಂಚಮಿ ದಿನಗಳಲ್ಲಿ ಪೂಜಿಸುವ ವಿಶೇಷ ಪರಿಪಾಠವಿದೆ.

ಬೃಂದಾವನದ ಒಳಗೆ ನಾಲ್ಕು ಭಾಗಗಳಲ್ಲಿ ಹನುಮ, ಭೀಮ, ಮಧ್ವ, ಮತ್ತು ಎದಿರು ವಾದಿರಾಜರ ವಿಗ್ರಹಗಳಿವೆ. ಬೃಂದಾವನದ ಸುತ್ತಲೂ ಇರುವ 4 ಬೃಂದಾವನಗಳು ಬ್ರಹ್ಮ,

ವಿಷ್ಣು, ಮಹೇಶ್ವರ, ವಾಯುದೇವರುಗಳ ವಿಶಿಷ್ಟವಾದ ಸನ್ನಿಧಾನ. ವಾದಿರಾಜರ ಬೃಂದಾವನದ ಎದುರು ವೇದವ್ಯಾಸದೇವರ ಗುಡಿ ಇದೆ.

ಬೃಂದಾವನದ ಸುತ್ತಲೂ ಮಹತ್ವದ ಗುಡಿಗಳಿವೆ. ಇವುಗಳು ಧವಳ ಗಂಗೆಯ ಸುತ್ತಲೂ ಹರಡಿಕೊಂಡಿವೆ. ಚಂದ್ರಮೌಳೇಶ್ವರ ಎಂಬ ಹೆಸರಿನ ರುದ್ರದೇವರ ಗುಡಿ, ಪ್ರಾಣದೇವರ ಗುಡಿಗಳಿವೆ. ಪ್ರಾಣದೇವರು ತೀರ ಅಪರೂಪವಾದ ವಿಗ್ರಹ. ಕೈಯಲ್ಲಿ ತಂಬೂರಿ (ವೀಣಾ ಪಾಣಿ) ಮುಖದಲ್ಲಿ ಶಾಂತಮುದ್ರೆ, ಪದ್ಮಾಸನ, ಹಾಕಿ ಕುಳಿತ ಭಂಗಿಯಲ್ಲಿರುವರು. ಸಂತಾನ ಗೋಪಾಲಕೃಷ್ಣ, ಎಡಕ್ಕೆ ಆಕಳು, ಬಲಕ್ಕೆ ಹುಲಿ ಆಕೃತಿಗಳಿಂದ ಕೂಡಿರುವ ವೇಣುಗೋಪಾಲ. ವಿಮಾನ ನಿಂತಿತ್ತೆಂದುಹೇಳುವ ಸ್ಥಳದಲ್ಲಿ ವಟವೃಕ್ಷ ಇದೆ. ಬಂಡೆಗಲ್ಲಿನ ಕೆಳಗೆ ವಾದಿರಾಜರು ಪಾಠ ಹೇಳುತ್ತಿದ್ದ ಜಾಗ ತಪಃಶಿಲಾ ಎಂಬ ಹೆಸರಿನಲ್ಲಿ ಈ ಭಾಗದಲ್ಲೆ ಇದೆ. ಧವಳ ಗಂಗಾ ತೀರದಲ್ಲಿ ಅವರ ತಪೋಬಲದಿಂದ ಬೀಳದೆ ನಿಂತಿರುವ ಒಂದು ದೊಡ್ಡ ಬಂಡೆಯನ್ನು ಕಾಣಬಹುದು. ಶ್ರೀವಾದಿರಾಜರು ಹುಟ್ಟುಹಾಕಿದ ಹಲಸಿನ ಮರ, ಶೀತಲಗಂಗೆ, ಪಾತಾಳ ಗಂಗೆ ಅಥವಾ ನರಕ ವಿಮೋಚನ ತೀರ್ಥ ಇವುಗಳೂ ಇವೆ. ಶಿಷ್ಯ ವೇದವಂದ್ಯರ ಬೃಂದಾವನ ಶ್ರೀವಾದಿರಾಜರ ವೃಂದಾವನದ ಪಕ್ಕದಲ್ಲಿದ್ದು ಪೂಜೆಗೊಳ್ಳುತ್ತಿದೆ. ಇತರ 7 ಯತಿಗಳ ಬೃಂದಾವನಗಳು (4 ಮೂಲ ಬೃಂದಾವನ 5 ಮೃತ್ತಿಕಾ ಬೃಂದಾವನ) ಹೊರಗೆ ಒಂದೆಡೆ ಇವೆ. ವಾದಿರಾಜರ ವೃಂದಾವನದ ಹೊರಗಿನ ಗೋಡೆಯ ಮೇಲೆ ಅಣುವೃಂದಾವನಾಖ್ಯದ ಬರಹವಿದೆ. ಶ್ರೀಮಠದ ಪ್ರದೇಶದಲ್ಲೇ ಹಯಗ್ರೀವ ಸರೋವರ, ಸೋಂದಾಕೋಟೆಯ ದ್ವಾರದಲ್ಲಿ ಮಾರುತಿಯ ಪ್ರತಿಮೆ ಇದೆ.

ವಾದಿರಾಜರ ಇಷ್ಟದೇವತೆ ರಮಾ ತ್ರಿವಿಕ್ರಮ. ಉಪಾಸ್ಯ ದೇವತೆ ಹಯವದನ. ಇಲ್ಲಿನ ಪ್ರತಿದಿನದ ಪೂಜೆಗೊಳ್ಳುವ ವಿಗ್ರಹಗಳೆಂದರೆ ತಿರುಪತಿ ಬೆಟ್ಟವನ್ನು ಮೊಣಕಾಲಿನಿಂದ ಏರಿದ ವಾದಿರಾಜರಿಗೆ ಒಲಿದು ಬಂದ ಶ್ರೀದೇವಿ ಭೂದೇವಿ ಸಮೇತ ಶ್ರೀನಿವಾಸ, ಭೀಮಸೇನ ದೇವರು ಪೂಜಿಸುತ್ತಿದ್ದ ಲಕ್ಷ್ಮೀನರಸಿಂಹ ದೇವರು, ಗೌತಮ ಋಷಿಗಳು ಪೂಜಿಸುತ್ತಿದ್ದ ವಿಠಲದೇವರು ಹಂಪೆಯ ವಾಲಿಭಂಡಾರವೆಂಬಲ್ಲಿ ಸ್ಥಳಶೋಧನೆ ಮಾಡಿದಾಗ ಸಿಕ್ಕಿದ ವಾಲಿ ಸುಗ್ರೀವ ಪೂಜಿತ ರಾಮವಿಠಲ ದೇವರು.

ವಾದಿರಾಜರಿಗೂ ಇಲ್ಲಿನ ಐಂದ್ರಜಾಲಿಕ ಗುರುವಿಗೂ ನಡೆದ 14 ದಿನಗಳ ವಾಕ್ಯಾರ್ಥ ದಲ್ಲಿ ಗೆದ್ದು ಅವನ ಸರ್ವಸ್ವವನ್ನೂ ಪಡೆದದ್ದು ಸರ್ವರಿಗೂ ತಿಳಿದ ವಿಚಾರ. ಅವನ ಬಳಿ ಇದ್ದ ಬಸವನ ಗಂಟೆ, ಬಸವನ ಮೇಲಿನ ನಗಾರಿ, ಮುತ್ತಿನ ಕುಲಾವಿ, ಮುತ್ತಿನ ಗದ್ದುಗೆ ಶ್ರೀ ವಾದಿರಾಜರ ವಶಕ್ಕೆ ಬಂತು. ಅವುಗಳನ್ನು ಶ್ರೀಮಠದಲ್ಲಿ ನೋಡಬಹುದು. ಅಲ್ಲದೆ ಬಸವನ ಮೇಲೆ ನಗಾರಿ ಇಟ್ಟು ಬಾರಿಸುವ ಮರ್ಯಾದೆ ಇಂದಿಗೂ ಶ್ರೀಮಠದ ದಿನಚರಿಯಲ್ಲಿ ನಡೆಯುತ್ತಿದೆ.

ವಾದಿರಾಜರದು ಬಹುಮುಖ ವ್ಯಕ್ತಿತ್ವ. ಉದ್ದಾಮ ಪಂಡಿತರು, ಗ್ರಂಥ ರಚನಕಾರರು, ಸಮಾಜ ಸುಧಾರಕರು. ಉಡುಪಿಯ ಅಷ್ಟಮಠಗಳ ಕೃಷ್ಣನ ಪೂಜೆಗೆ ನಿಶ್ಚಿತರೂಪಕೊಟ್ಟು 2 ವರ್ಷಗಳಿಗೊಮ್ಮೆ ಪರ್ಯಾಯ ಪದ್ಧತಿಯನ್ನು ಗೊತ್ತು ಮಾಡಿದವರು. ಕೃಷ್ಣದೇವರ ಗರ್ಭ ಗುಡಿ ಜೀರ್ಣೋದ್ಧಾರ ಮಾಡಿ ದೇವರ ಪೂಜಾಧರ್ಮಗಳಲ್ಲಿ ಮರ್ಯಾದೆ ವಿಶೇಷಗಳನ್ನು

ವಿಸ್ತಾರ ಮಾಡಿದವರು. ಉಡುಪಿಯ ಮಠದಲ್ಲಿ ಮುಖ್ಯ ಪ್ರಾಣ, ರುದ್ರ, ಗರುಡ ದೇವರ ಸ್ಥಾಪನೆ ಮಾಡಿದವರು. ಕೃಷ್ಣದೇವರಿಗೆ ಕವಚಾದಿ ವಿಶೇಷ ಆಭರಣಗಳನ್ನು ಮಾಡಿಸಿ ತಮ್ಮ ಉಪಾಸನಾಮೂರ್ತಿ ಹಯಗ್ರೀವ ದೇವರ ಏಳು ವಿಗ್ರಹಗಳನ್ನು ಏಳುಮಠದ ಯತಿಗಳಿಗೆ ಪೂಜಾರ್ಥ ಕೊಟ್ಟವರು. ಉಡುಪಿಯ ರಥ ಬೀದಿಯ ಸುತ್ತಲೂ ಅಷ್ಟಮಠಗಳನ್ನು ಕಟ್ಟಿಸಿ ಅವುಗಳಿಗೆ ಸ್ಥಿರ ಚರ ಆಸ್ತಿ ಬರುವಂತೆ ಮಾಡಿದವರು. ಅವರ 120 ವರ್ಷಗಳ ಜೀವಿತದಲ್ಲಿ ನೂರುವರ್ಷಗಳ ಕಾಲದಲ್ಲಿ ಆಡಿದ ಮಾತುಗಳಲ್ಲಿ, ಕೆಲಸಗಳಲ್ಲಿ ಅತಿಮಾನುಷ ವ್ಯಕ್ತಿತ್ವವನ್ನು ತೋರಿದವರು. ಸಶರೀರರಾಗಿ ಬೃಂದಾವನ ಪ್ರವೇಶ ಮಾಡಿದವರು. ಮಂತ್ರಾಲಯದ ರಾಯರಂತೆ ವಾದಿರಾಜರೂ ಮಧ್ವ ಸಮಾಜಕ್ಕೆ ಗುರುರಾಜರು. ಅವರ ಆರಾಧನೆ ಫಾಲ್ಗುಣ ವದ್ಯ ತೃತೀಯ.

## 188. ತಪೋವನ :

ಸೋದೆಯಿಂದ 5 ಕಿ. ಮಿ. ಕಾಡುದಾರಿಯಲ್ಲಿ ಕ್ರಮಿಸಿದರೆ ಶಾಲ್ಮಲಿ ನದಿಯ ಮಧ್ಯದಲ್ಲಿ ವಾದಿರಾಜರು ತಪಸ್ಸನ್ನಾಚರಿಸುತ್ತಿದ್ದ ಹೆಬ್ಬಂಡೆ ಇದೆ. ಅದರ ಮೇಲೆ ಅವರ ಪಾದದ ಚಿನ್ಹೆ ಇದೆ. 450 ವರ್ಷಗಳ ಹಿಂದಿನ ಶಾಸನ "ಶುಭಮಸ್ತು ಶಾಲೀವಾಹನ ಶಕೆ 1551ರ ಶ್ರೀಮುಖ ನಾಮ ಸಂವತ್ಸರದ ವೇದ ನಿಧಿ ಶ್ರೀಪಾದಂಗಳವರು ಮಾಡಿಸಿದ ಪ್ರತಿಮೆಗಳು" ಎಂದಿದೆ. ವಾದಿರಾಜ ಮಠಕ್ಕೆ ಸಂದರ್ಶಿಸಿದವರೆಲ್ಲಾ ಇಲ್ಲಿಗೆ ಬಂದು ಈ ಪುಣ್ಯಸ್ಥಳವನ್ನು ಸಂದರ್ಶಿಸುವುದು ಸ್ವಲ್ಪ ಕಷ್ಟ. ಮಾರ್ಗದರ್ಶಕರ ಸಹಾಯದಿಂದ ದೃಢಕಾಯ ಸ್ತ್ರೀಪುರುಷರು ಈ ಸ್ಥಳವನ್ನು ಸಂದರ್ಶಿಸಬಹುದು. ಆರಾಧನಾ ದಿನಗಳಲ್ಲಿ ಇಲ್ಲಿಗೆ ಹೋಗುವ ಜನ ಹೆಚ್ಚು, ಅಂತೂ ಇದು ಅಪೂರ್ವ ನೈಸರ್ಗಿಕ ಗಿರಿವನ ಸಂಪತ್ತಿನ ತಾಣ. ನಿಸರ್ಗದ ತೊಟ್ಟಿಲು, ಮನಕ್ಕೆ ಮುದ, ಹೃದಯಕ್ಕೆ ಸುಖ.

## 189. ಹುಲೇಕಲ್ಲು :

ಸಿರ್ಸಿಯಿಂದ 14 ಕಿ.ಮಿ. ಸಿರ್ಸಿಯಿಂದ ಸೋದೆಗೆ ಹೋಗುವ ಮಾರ್ಗಮಧ್ಯ. ಇಲ್ಲಿ ವ್ಯಾಸರಾಯಸ್ಥಾಪಿತ ವ್ಯಾಸರಾಯ ಮಠವಿದೆ. ಇಲ್ಲಿರುವ ವ್ಯಾಸರಾಯರ ಬೃಂದಾವನ ಮೂರನೆಯದು. ಇಲ್ಲಿ ಮಾರುತಿ, ಗೋಪಾಲಕೃಷ್ಣ ದೇವರುಗಳೂ ಇದ್ದಾರೆ. ಫಾಲ್ಗುಣ ಮಾಸದಲ್ಲಿ ಆರಾಧನೆ.

## 190. ಯಾಣ :

ಕುಮಟಾದಿಂದ 24 ಕಿ. ಮಿ. ದೇವಿಮನೆ ಮತ್ತು ವಡ್ಡಿಘಾಟ್ ಮಾರ್ಗ. ಕುಮುಟಾದಿಂದ ಸಿರ್ಸಿಗೆ ಹೋಗುವ ಮಾರ್ಗ. ಸಿರಸಿಯಿಂದ ಹೆಗ್ಗಡೆ ಕಟ್ಟೆಯ ಮೂಲಕ ಪ್ರಯಾಣ. ಕನಿಷ್ಠ 8 ಕಿ. ಮಿ. ನಡಿಗೆ. ಇಲ್ಲಿ ಒರಟೊರಟಾಗಿರುವ 300 ಅಡಿ ಎತ್ತರದ ಬೆಟ್ಟವಿದೆ. ಇಲ್ಲಿ ಕೋಟೆ ಗೋಡೆಯಂತೆ 40 ಮೀಟರ್ ಎತ್ತರವ ಕೋಡುಗಲ್ಲು ಬಂಡೆಯಿದೆ. ಸಾಹಸಿಗಳಿಗೆ ಮಾತ್ರ ಮೇಲೇರಲು ಸಾಧ್ಯ. ಸೊಕ್ಕು ಇದ್ದಾಗ ಯಾಣಕ್ಕೆ ಹೋಗಬೇಕೆನ್ನುವ ನಾನ್ನುಡಿ

ಸತ್ಯ. ಗುಹೆಯೊಳಗೆ ಭೈರವೇಶ್ವರನಿದ್ದಾನೆ. ವಾದಿರಾಜರು ತಮ್ಮ ತೀರ್ಥಪ್ರಬಂಧದಲ್ಲಿ ಯಾಣವನ್ನು ಏಣ ಭೈರವನೆಂದು ಕರೆದಿದ್ದಾರೆ. ಇದರ ವರ್ಣನೆ ಸ್ಕಂದ, ಕೌಶಿಕ ಪುರಾಣಗಳಲ್ಲಿವೆ. ಈ ಬೆಟ್ಟದಲ್ಲಿ ಭಸ್ಮಾಸುರನಿಗೆ ಅಂಜಿ ಜಿಂಕೆಯಂತೆ ಓಡಿದ ರುದ್ರದೇವರನ್ನು ಮಹಾವಿಷ್ಣುವು ಮೋಹಿನಿಯ ರೂಪದಲ್ಲಿ ಭಸ್ಮಾಸುರನನ್ನು ಸುಟ್ಟು ಭಸ್ಮಮಾಡಿದ ರುದ್ರದೇವನನ್ನು ಸಂರಕ್ಷಣೆ ಮಾಡಿದ, ಮಾರ್ಗಮಧ್ಯದಲ್ಲಿ ಕಾಣುವ ಸುಣ್ಣದ ಕಲ್ಲು ಗುಡ್ಡ ವಿಷ್ಣುವಿನಿಂದ ಭಸ್ಮವಾದ ಭಸ್ಮಾಸುರನ ಭಸ್ಮರಾಶಿ ಎಂದು ಪ್ರತೀತಿ.

## 191. ಬನವಾಸಿ :

ಶಿರಸಿ ತಾ., ಬೆಂಗಳೂರು 384 ಕಿ.ಮಿ., ಶಿರಸಿಯಿಂದ 23 ಕಿ. ಮಿ. ಕದಂಬರ ಮಯೂರ ವರ್ಮ ಆಳಿದ ರಾಜಧಾನಿ. ಮಧುಕೇಶ್ವರ ದೇವಾಲಯದ ಲಿಂಗ 60 ಅಂಗುಲವಿದೆ. ಕತ್ತಲೆಯಲ್ಲೂ ಹೊಳೆಯುತ್ತದೆ. ಶಿಖರದ ನಾಲ್ಕು ಮೈಗಳಲ್ಲೂ 60 ಮೆಟ್ಟಿಲು ಕಟ್ಟಲ್ಪಟ್ಟಿದೆ. ಸುಖನಾಸಿಯಲ್ಲಿ ಶಂಖಚಕ್ರಗಳನ್ನು ಕೆತ್ತಲಾಗಿದೆ. ಪ್ರಾಂಗಣದಲ್ಲಿ 40 ಅಡಿ ಶಿಲಾಸ್ತಂಭ, ಕಲ್ಲುಮಂಚ, ನಂದಿ, ತ್ರೈಲೋಕ್ಯ ಮಂಟಪಗಳಿವೆ.

## 192. ಇತರ :

**1. ಶಿರಗುಪ್ಪ :** ವೇಣುಗೋಪಾಲ ಸ್ವಾಮಿ ದೇವಾಲಯ. ವಾದಿರಾಜರ ಬೃಂದಾವನ.

**2. ಅಂಕೋಲ :** ಬೆಂಗಳೂರಿನಿಂದ 482 ಕಿ. ಮಿ. ಗಂಗಾವಳಿ ನದಿಯ ಮಧ್ಯೆ. ಕೂರ್ವೆ ದ್ವೀಪ, ಸುಂದರ ವಿಹಾರ ಸ್ಥಳ, ಹೊನ್ನಬೈಲಗವಿಗಳು ಸಮುದ್ರ ದಂಡೆಯ ಸುಂದರತೆ.

**3. ನೇತ್ರಾಣಿ :** ಸುಂದರ ದ್ವೀಪ ಸಾಹಸಿಗಳಿಗೆ ಮಾತ್ರ

**4. ದೇವಬಾಗ್ :** ಕಾರವಾರ ಸಮೀಪ, ಬೀಚ್, ವಿಹಾರ ಸ್ಥಳ.

**5. ಸಿಂತೇರಿ ಬಂಡೆಗಳು :** ದಾಂಡೇಲಿ ಅರಣ್ಯಗಳು

**6.** ಬುರುಂಡೆ ಫಾಲ್ಸ್ (ಸಿದ್ದಾಪುರ)
ಲಾಲ್ಗುಳಿ ಫಾಲ್ಸ್ (ಎಲ್ಲಾಪುರ)
ಮಾಗೋಡು ಫಾಲ್ಸ್ (ಎಲ್ಲಾಪುರ)
ಎಲೆಮನೆ ಫಾಲ್ಸ್ (ಸಿದ್ದಾಪುರ)
ಶಿವಗಂಗಾ ಫಾಲ್ಸ್ (ಸಿರ್ಸಿ)
ಸುರಭಿ ಫಾಲ್ಸ್ (ಸಿರ್ಸಿ)
ಸೈಕ್ಸ್ ಪಾಯಿಂಟ್ (ಹಳಿಯಾಳ)
ಉಂಚಳ್ಳಿ ಫಾಲ್ಸ್ (ಸಿದ್ದಾಪುರ)
ಕೆಪ್ಪಜೋಗ ಫಾಲ್ಸ್ (ಸಿದ್ದಾಪುರ)
ಪಿಂಚೊಳ್ಳಿ ಫಾಲ್ಸ್ (ಹಳಿಯಾಳ)

**7. ಗಣೇಶ ಗುಡಿ :** ಎಲ್ಲಾಪುರದಿಂದ 15 ಕಿ. ಮಿ. ಕಟ್ಟಿಗೆ ಗ್ರಾಮದ ಬಳಿ. ಅಗಸ್ತ್ಯ ಋಷಿಗಳಿಂದ ಸ್ಥಾಪಿತ ಗಣೇಶ.

**8. ಗುಡೇ ಅಂಗಡಿ :** ಕುಮಟಾ ತಾ. 8 ಕಿ. ಮಿ. ಬಲಮುರಿ ಗಣಪತಿ.

**9. ಇಟಗಿ :** ಸಿದ್ದಾಪುರ ತಾ. 19 ಕಿ. ಮಿ. ರಾಮೇಶ್ವರ, ವಿಠಲಮೂರ್ತಿ ಕ್ಷೇತ್ರ ಪಾಲಗುಡಿ.

**10. ನರಸಿಂಹ ಗಡ :** ಕಾರವಾರದಿಂದ 4 ಕಿ. ಮಿ. ನಾಲ್ಕು ಸುಂದರ ದ್ವೀಪಗಳಲ್ಲಿ ಒಂದು. ಕೋಟೆ ಹಾಗೂ ಪುರಾತನ ನರಸಿಂಹ ಸ್ವಾಮಿ ಗುಡಿಗಳು.

**11. ವೆಂಕಟಾಪುರ :** ಭಟ್ಕಲ್ ತಾ. 4 ಕಿ. ಮಿ. ಭಟ್ಕಳ್–ಹೊನ್ನಾವರ ರಸ್ತೆ. ಗಣಪತಿ ಮಲ್ಯರಿಂದ ಕಟ್ಟಿದ ಸುಂದರ ವೆಂಕಟರಮಣನ ಗುಡಿ. (17ನೆಯ ಶತಮಾನ)

# ದಾವಣಗೆರೆ ಜಿಲ್ಲೆ

## 193. ಹೊನ್ನಾಳಿ :

ಶಿವಮೊಗ್ಗದಿಂದ 38 ಕಿ. ಮಿ. ಬೆಂಗಳೂರು 311 ಕಿ. ಮಿ. ಇದು ಪುರಾಣಪ್ರಸಿದ್ಧವಾದ ಭಾಸ್ಕರ ಕ್ಷೇತ್ರ. ಬಿದರಿ, ಹೊನ್ನಹಳ್ಳಿ ಎಂಬುದಾಗಿಯೂ ಕರೆದಿದ್ದಾರೆ. ತುಂಗಭದ್ರಾ ತೀರ ದಲ್ಲಿರುವ ಈ ಊರಿಗೆ ಕೋಟೆ, ಪೇಟೆ ಎಂಬ ಭಾಗಗಳಿವೆ. ರಾಮಾಚಾರ್ಯರೆಂಬ ಭಕ್ತರಿಂದ ರಾಘವೇಂದ್ರರ ಬೃಂದಾವನವು ಸ್ಥಾಪಿತವಾಯಿತು. ಇದು ಮೂರು ಶತಮಾನಗಳ ಕಾಲದಷ್ಟು ಹಳೆಯದು. ಇದಕ್ಕೆ ಬಳಸಿದ ಶಿಲೆ ಸಮೀಪದ ಹಿರೇಕಲ್ಲು ಶ್ರೀಮಠದ ಕೊಳ್ಳದಲ್ಲಿ ದೊರಕಿತ್ತು. ಮಹತ್ವಪೂರ್ಣವಾದ ಈ ಬೃಂದಾವನದ ಪ್ರತಿಷ್ಠಾ ಕಾಲದಲ್ಲಿ ಅವರಿಗೆ ರಾಯರ ಪ್ರತ್ಯಕ್ಷ ಅನುಗ್ರಹವಾಯಿತಂತೆ. ಇದನ್ನು 2ನೇ ಮಂತ್ರಾಲಯ ಎನ್ನುವರು.

ಯಾದವಾರ್ಯರ ಶಿಷ್ಯರಾದ ಶ್ರೀನಿವಾಸ ತೀರ್ಥರೆಂಬುವರು ಶ್ರೀ ರಾಘವೇಂದ್ರ ತೀರ್ಥರ ಸಮಕಾಲೀನರು. ರಾಘವೇಂದ್ರರು ಈ ಮಹನೀಯರನ್ನು ತೀರ್ಥರೆಂದು ಕರೆದು ಸನ್ಮಾನಿಸಿ ದರು. ಅವರ ಬೃಂದಾವನವು ತುಂಗಭದ್ರಾನದಿಯ ಸೇತುವೆಯ ಕೆಳಗೆ ಇದ್ದು ಅದು ಈಗ ತೀರ್ಥಸ್ಥಳವಾಗಿ ಪ್ರಸಿದ್ಧವಾಗಿದೆ. ಹೊನ್ನಾಳಿಯ ದಕ್ಷಿಣಕ್ಕೆ ನದಿ ದಂಡೆಯಲ್ಲಿ ವಡ್ಡನ ಕೇರಿ ಎಂಬ ಭಾಗವಿದೆ. ಇಲ್ಲಿ ಬೃಹತ್ ಪ್ರಮಾಣದ ಮುಖ್ಯ ಪ್ರಾಣದೇವರ ದೇವಾಲಯವಿದೆ. ಇದು ಸಮುದ್ರಲಂಘನ ಕಾಲದಲ್ಲಿ ಧರಿಸಿದ ಆಂಜನೇಯನ ದೇಹವಂತೆ. ಅಂಗಾರದಲ್ಲಿ ವ್ಯಾಸರಾಯರು ಬರೆದು ಪ್ರತಿಷ್ಠಿಸಿದ ವಿಗ್ರಹ.

## 194. ಹರಿಹರ :

ಬೆಂಗಳೂರು 227 ಕಿ. ಮಿ. ಬೆಂಗಳೂರಿನಿಂದ ಪೂನಾಕ್ಕೆ ಹೋಗುವ ದಾರಿ. ಇದನ್ನು ಗುಹಾರಣ್ಯ ಕ್ಷೇತ್ರವೆನ್ನುವರು. ಪೌರಾಣಿಕವಾಗಿ ಇಲ್ಲಿ ಗುಹಾಸುರನೆಂಬ ರಾಕ್ಷಸನಿದ್ದ. ಅವನನ್ನು ಯಾರೂ ಕೊಲ್ಲಲು ಸಾಧ್ಯವಿಲ್ಲದಿರುವಾಗ ಹರಿಹರರಿಬ್ಬರೂ ಒಂದೇ ರೂಪದಿಂದ ಅವನನ್ನು ವಧಿಸಿ ದರು. ಇಲ್ಲಿ ಹರಿಹರರು ಒಂದೇ ರೂಪದಲ್ಲಿದ್ದರೂ ಅವರಿಬ್ಬರಲ್ಲಿ ಭೇದವಿದೆ ಅವರು ತಮ್ಮ ಶರೀರದ ಅರ್ಧ ಭಾಗ ಮಾತ್ರ ಕಾಣುವಂತೆ ಜೊತೆಯಾಗಿ ಬರಲು ಗುಹಾಸುರನನ್ನು ಸಂಹರಿಸಿದರು. ಇದು ಹರಿದ್ರಾನದಿ ಎಂದು ಕರೆಯಲ್ಪಡುವ ತುಂಗಭದ್ರಾ ನದಿಯ ಬಲ ದಂಡೆಯಲ್ಲಿದೆ. ಇಲ್ಲಿನ ನದಿಯಲ್ಲಿ 11 ತೀರ್ಥಗಳಿವೆ ಎನ್ನುತ್ತಾರೆ. ಅವೇ ಬ್ರಹ್ಮತೀರ್ಥ, ನೃಸಿಂಹ ತೀರ್ಥ, ವಹ್ನೀ, ಗಾಲವ, ಚಲ, ರುದ್ರಪಾದ,

ಪಾಪನಾಶಿನಿ, ಪಿಶಾಚ ವಿಮೋಚಿನಿ, ಋಣ ವಿಮೋಚನಿ ಮತ್ತು ವಟಛಾಯಾ. ಇದರ ಸಂಗಮ ಸ್ಥಳದಲ್ಲಿ ದೇವರ ಪಾದಗಳಿವೆ. ಹರಿಹರೇಶ್ವರ ದೇವಾಲಯವು ಊರಿನ ಮಧ್ಯಭಾಗದಲ್ಲಿದೆ. ಇದು ಬಹುಪುರಾತನ ದೇವಾಲಯ (1223) ದೇವರ ಬಲಭಾಗದಲ್ಲಿ ಶಿವನ ರೂಪವೂ ಎಡಭಾಗದಲ್ಲಿ ವಿಷ್ಣುವಿನ ರೂಪವೂ ಇದೆ. ಶಿವನ ಕೈಯಲ್ಲಿ ತ್ರಿಶೂಲವಿದ್ದು ರುದ್ರಾಕ್ಷಿ ಧರಿಸಿದ್ದಾನೆ. ಎಡ ಭಾಗದ ವಿಷ್ಣುವಿನ ಕೈಯಲ್ಲಿ ಚಕ್ರವಿದೆ. ಎರಡೂ ಕಡೆ ಅಭಯ ಮುದ್ರೆಯಿದೆ.

## 195. ಚೆನ್ನಗಿರಿ :

ಶಿವಮೊಗ್ಗದಿಂದ 43 ಕಿ. ಮಿ. ಬೆಂಗಳೂರು 256 ಕಿ. ಮಿ. ಇಲ್ಲಿರುವ 61 ಮೀಟರ್ ಎತ್ತರವಿರುವ ಚೆನ್ನಗಿರಿದುರ್ಗದ ತುದಿಯಲ್ಲಿ ಬೇಟೆ ರಂಗನಾಥಸ್ವಾಮಿಯ ಗುಡಿ ಇದೆ. ಅಲ್ಲದೆ ಇಲ್ಲಿ 200 ವರ್ಷ ಹಳೆಯದಾದ ರಾಘವೇಂದ್ರ ಮಠವಿದೆ.

## 196. ದೇವರ ಹಳ್ಳಿ :

ಚೆನ್ನಗಿರಿಯಿಂದ 13 ಕಿ. ಮಿ. ಇಲ್ಲಿಯ ಉಡುಮರಡಿ ಬೆಟ್ಟದ ಮೇಲೆ ರಂಗನಾಥಸ್ವಾಮಿ ದೇವಾಲಯವಿದೆ. ರಂಗನಾಥನೇ ಉಡದ ರೂಪತಾಳಿ ಬೆಟ್ಟದಲ್ಲಿ ತಂಗಿದುದರಿಂದ ಈ ಸ್ಥಳಕ್ಕೆ ಆ ಹೆಸರು. ವಿಗ್ರಹಕ್ಕೆ ಬದಲಾಗಿ ಶಂಖಚಕ್ರಗಳ ಕೆತ್ತನೆಯನ್ನು ಒಳಗೊಂಡ ದುಂಡಾಕೃತಿಯ ಕಲ್ಲೇ ರಂಗನಾಥ ದೇವರ ಪ್ರತಿನಿಧಿ. ಈ ದೇವರ ಹಿಂದೆ ಬಾಣಾಕಾರದ ಲಿಂಗ ಮತ್ತು 1 1/2 ಅಡಿ ಎತ್ತರದ ಕೇಶವನ ಪ್ರತಿಮೆಇದೆ.

## 197. ಹೆಳವನ ಕಟ್ಟೆ :

ಮಲೆಬೆನ್ನೂರು ಸಮೀಪ ಚನ್ನಗಿರಿಯಿಂದ 17 ಕಿ. ಮಿ. ಇಲ್ಲಿಯ ಸ್ಥಳ ಪುರಾಣದಂತೆ ಕುಮಾರನಹಳ್ಳಿ ಗ್ರಾಮದ ಹೆಳವನೊಬ್ಬ ದನಗಳನ್ನು ನೋಡಿಕೊಳ್ಳುತ್ತಿದ್ದ. ಗೋಕಟ್ಟೆಯ ಅವಶ್ಯಕತೆ ಇದ್ದುದರಿಂದ ಅದು ಅಲ್ಲಿ ನಿರ್ಮಾಣವಾಯಿತು. ಹೀಗೆ ಹೆಳವನಕಟ್ಟೆ ಎಂಬ ಹೆಸರು ಬಂತು. ಈ ಕಟ್ಟೆಯ ಪಕ್ಕದಲ್ಲಿ ಹುತ್ತವೊಂದಿತ್ತು. ಇದನ್ನು ನೋಡಿದ ಹೆಳವನಿಗೆ ಆಶ್ಚರ್ಯವಾಯಿತು. ಹುತ್ತವನ್ನು ಬಗೆದರೆ ಹರಿಹರ ಬ್ರಹ್ಮರ ಮೂರ್ತಿಗಳು ದೊರೆತವು. ಸ್ವಲ್ಪ ಕಾಲಾನಂತರ ಅಲ್ಲಿಯೇ ಗುಡಿ ಕಟ್ಟಲ್ಪಟ್ಟಿತು. ಆ ಕ್ಷೇತ್ರವು ರಂಗನಾಥಕ್ಷೇತ್ರವೆಂದು ಕರೆಯಲ್ಪಟ್ಟಿತು. ಆ ಸ್ಥಳದಲ್ಲಿ ಜನಿಸಿದ ಹೆಣ್ಣುಮಗಳೇ ಹೆಳವನಕಟ್ಟೆ ಗಿರಿಜಮ್ಮ. ತಂದೆ ಬಿಷ್ಟಪ್ಪನಾಯಕ, ಪತ್ನಿ ಗುಣಶೀಲೆ. ಅವರಿಗೆ ಹುಟ್ಟಿದ ಹೆಣ್ಣು ಮಗುವಿನ ಮೈ ಮೇಲೆ ಶಂಖ ಚಕ್ರಗಳ ಚಿನ್ಹೆಗಳಿದ್ದುವಂತೆ. ಗಿರಿಜಮ್ಮ ಕೂಸಾದಾಗ ಬಹು ಹಟಮಾರಿ. ಅಳುವನ್ನು ಸಮಾಧಾನ ಪಡಿಸಲು ಆಟದ ಸಾಮಾನು ಕೊಟ್ಟರೆ ಸಾಧ್ಯವಾಗುತ್ತಿರಲಿಲ್ಲ. ಇಂಪಾದ ದೇವರ ನಾಮಗಳನ್ನು ಹೇಳಿ ಆ ಮಗುವನ್ನು ಸಮಾಧಾನ ಪಡಿಸುತ್ತಿದ್ದರಂತೆ. ಮೊದಲಿನಿಂದಲೂ ಹೀಗೆ ಅವಳಲ್ಲಿ ದೈವಭಕ್ತಿ, ಮೊಳೆಯುತ್ತಾ ಬಂತು. ರಂಗವಲ್ಲಿಯಲ್ಲಿ ದೇವರ ಚಿತ್ರಗಳನ್ನು ಬಿಡಿಸುವ ಕಲೆ ಅವಳಲ್ಲಿ ಸಿದ್ಧಿಸಿತ್ತು. ತಾಯಿ ಸತ್ತಾಗ ಮದುವೆ ಮಾಡಿದರು. ಗಂಡ

ಮಲೆಬೆನ್ನೂರಿನ ಶಾನುಭೋಗನ ಮಗ ತಿಪ್ಪರಸ. ಶಯ್ಯಾಗೃಹದಲ್ಲಿ ಮಲಗಿದ್ದ ಗಂಡನಿಗೆ 7 ಹೆಡೆಯ ಸರ್ಪ ಗೋಚರಿಸಿತು. ಆಗ ಆತನು ತನ್ನ ಕುಲ ಉದ್ಧರಿಸಲು ಬಂದಿರುವ ದೇವತೆಯೆಂದು ಅವಳನ್ನು ಪರಿಗಣಿಸಿದ. ಅವಳು ಬರಬರುತ್ತಾ ವೈರಾಗ್ಯ ಶಿಖಾಮಣಿ ಯಾದಳು. ತನ್ನ ಕಾಲವನ್ನು ಧ್ಯಾನ, ಭಜನೆಗಳಲ್ಲಿ ಕಳೆದಳು. ಗಂಡನಿಗೆ ಬೇರೊಂದು ಮದುವೆ ಮಾಡಿಸಿ ಸಂತೃಪ್ತಿಯಿಂದಿದ್ದು ಆಧ್ಯಾತ್ಮದ ಕಡೆಗೆ ವಾಲಿದಳು.

ಒಮ್ಮೆ ಗೋಪಾಲದಾಸರು ಮಲೆಬೆನ್ನೂರಿಗೆ ಬಂದಿದ್ದರು. ದಾಸರು ಬಂದಾಗ ಲಕ್ಷ್ಮೀ ರಂಗನಾಥನ ಗುಡಿಯಲ್ಲಿ ರಂಗವಲ್ಲಿಯಲ್ಲಿ ಗೋಪಾಲಕೃಷ್ಣ ದೇವರನ್ನು ಚಿತ್ರಿಸುತ್ತಿದ್ದಳು. ಗೋಪಾಲದಾಸರು ಆ ಚಿತ್ರಕ್ಕೆ ಮೆಚ್ಚಿ ತಮಗೆ ದರ್ಶನವಿತ್ತ ಚಿತ್ರವನ್ನು ಚಿತ್ರಿಸಿ ಅಮ್ಮನಿಗೆ ಪ್ರಸಾದವೆಂದು ಅನುಗ್ರಹಿಸಿದರು. ಅಂದಿನಿಂದ ಅವಳು 'ಹೆಳವನ ಕಟ್ಟೆ ರಂಗಯ್ಯ' ಎಂಬ ಅಂಕಿತದಲ್ಲಿ ತನ್ನ ಕೃತಿಗಳನ್ನು ರಚಿಸಿದಳು. ಹಾಗಾಗಿ ಹೆಳವನ ಕಟ್ಟೆಯೇ ಅವಳ ಸಾಹಿತ್ಯ ಸ್ಫೂರ್ತಿಗೆ ಕೇಂದ್ರವಾಯಿತು. ಸುಮತೀಂದ್ರ ತೀರ್ಥರೆಂಬ ಮಂತ್ರಾಲಯದ ಯತಿಗಳು ಒಮ್ಮೆ ಮಲೆಬೆನ್ನೂರಿಗೆ ಬಂದಿದ್ದರು. ಅವರು ದೇವರ ಪೂಜೆ ಮಾಡಿ ಮೊದಲು ಗಿರಿಜಮ್ಮನಿಗೆ ತೀರ್ಥ ಕೊಡಲು ಮುಂದಾದರು. ಅದು ಪಂಡಿತರನೇಕರಿಗೆ ಸರಿಹೋಗಲಿಲ್ಲ. ಆದರೆ ಗಿರಿಜಮ್ಮ ತೀರ್ಥಕ್ಕೆ ಕೈ ಒಡ್ಡಿದಾಗ ಆಕೆಯ ಕೈಯನ್ನು ಕ್ಷಣಕಾಲ ಸ್ವಾಮಿಗಳು ನೋಡಿ "ಅದು ದೇವಕಿಯ, ಕೌಸಲ್ಯೆಯ ಕೈಲಕ್ಷಣ ನೀನು ಯಶೋದಾದೇವಿಯೇ ಸರಿ ಚಕ್ರಪಾಣಿಯೇ ಮಗನಾಗಬೇಕು ಈ ಪುಣ್ಯಾತ್ಮಳಿಗೆ" ಎಂದರು. ಇಂತಹ ಮಹಾತ್ಮಳು ಹೆಳವನಕಟ್ಟೆ ಗಿರಿಜಮ್ಮ.

ಅವಳು ಮಾಡಿದ ಪವಾಡಗಳು ಅನೇಕ. ಅವಳ ಸಹಾಯದಿಂದಲೇ ಪುಂಗನೂರಿನ ರಾಜಕುಮಾರನಿಗೆ ಕಣ್ಣುಗಳು ಬಂದದ್ದು. ರಂಗನಾಥನ ಹೊನ್ನಿನ ಉಂಗುರ ಕಾಣೆಯಾಗಿದ್ದಾಗ ಎಷ್ಟು ಹುಡುಕಿಸಿದರೂ ಸಿಗದಿದ್ದಾಗ "ಹೊನ್ನು ತಾ ಗುಬ್ಬಿ ಹೊನ್ನು ತಾ" ಎಂಬ ಹಾಡು ರಚಿಸಿ ಪಠಿಸಿದಾಗ ಗುಬ್ಬಚ್ಚಿಯೊಂದು ಹಾರಿ ಬಂದು ಕಳೆದು ಹೋಗಿದ್ದ ಉಂಗುರವನ್ನು ಹಾಕಿ ಹೋದದ್ದು. ಎಲ್ಲರಿಗೂ ಪರಮಾಶ್ಚರ್ಯ. ಇದು ಮತ್ತೊಂದು ಪವಾಡವೇ ಸೈ.

ಅವಳು ಸ್ತುತಿಸಿದುದು ಮಾಧವನನ್ನು ಮಾತ್ರವೇ ಅಲ್ಲ. ಶಿವನನ್ನೂ ಸ್ತುತಿಸಿದಳು. ತವರು ಮನೆಯ ದೇವರು ಮೈಲಾರಲಿಂಗ. ಗಂಡನ ಮನೆಯ ದೇವರು ರಂಗನಾಥ.

ಅಂತಿಮಕಾಲದಲ್ಲಿ ಹೊನ್ನಾಳಿ ಸಮೀಪದ ಕಮ್ಮಾರಕಟ್ಟೆ ಎಂಬ ಗ್ರಾಮಕ್ಕೆ ಬಂದು ತುಂಗಭದ್ರಾ ನದಿಗೆ ಸೋಪಾನವನ್ನು ಮಾರುತಿಗೆ ದೇವಸ್ಥಾನವನ್ನೂ ಕಟ್ಟಿಸಿದಳು. ಶ್ರಾವಣ ಬಹುಳ ಪಂಚಮಿ ದಿನ ರಂಗನಾಥನ ಸ್ಮರಣೆ ಮಾಡುತ್ತಾ ತುಂಗಭದ್ರೆಯಲ್ಲಿ ಅದೃಶ್ಯಳಾದಳು. ಆದಿನ ಅವಳು ಪ್ರತಿಷ್ಠಾಪಿಸಿದ ಮಾರುತಿಗೆ ರಥೋತ್ಸವ ನಡೆಯುತ್ತದೆ.

# ಬಳ್ಳಾರಿ ಜಿಲ್ಲೆ

## 198. ಕೆಂಚನ ಗುಡ್ಡ :

ಇದಕ್ಕೆ ಕಾಂಚನ ಗಡವೆಂಬ ಹೆಸರೂ ಇತ್ತು. ಶಿರಗುಪ್ಪಕ್ಕೆ 2 ಕಿ. ಮಿ. ಇಲ್ಲಿಯ ತುಂಗಭದ್ರಾ ತಟದಲ್ಲಿ ರಾಯರ ಮಠದ ವಸುದೇಂದ್ರ ತೀರ್ಥರ ಬೃಂದಾವನವಿದೆ. ಆಶ್ವಯುಜ ಬಹುಳ ಸಪ್ತಮಿ ಆರಾಧನೆ.

## 199. ಪಂಪಾ ಕ್ಷೇತ್ರ :

ದಕ್ಷಿಣ ಕಾಶಿ ಎಂದು ಪ್ರಸಿದ್ಧವಾಗಿರುವ ಪಂಪಾಕ್ಷೇತ್ರವು ಪಾಪ ಪರಿಹಾರಕವಾದ ಅಪೂರ್ವಕ್ಷೇತ್ರ. ಪಾಪಂ ಎಂಬ ಪದವನ್ನು ಹಿಂದು ಮುಂದಾಗಿ ಮಾಡಿ ಉಚ್ಚರಿಸಿದಾಗ ಪಂಪಾ ಎಂದಾಗುತ್ತದೆ. ಹೀಗೆ ಅದರ ನಾಮೋಚ್ಚಾರಣೆಯಿಂದಲೇ ಪಾಪವು ತಲೆಕೆಳಕಾಗುತ್ತದೆ ಎಂಬ ಭಾವವಿದೆ. ಈ ಹಂಪೆಯಲ್ಲಿ ಶ್ರೀ ವಾದಿರಾಜರು ಶ್ರೀ ವ್ಯಾಸರಾಯರ ಬಳಿ ಶಾಸ್ತ್ರಾಧ್ಯಯನ ಮಾಡಿದರೆಂದು ಪ್ರತೀತಿ ಇದೆ. ವಿಜಯನಗರದ ಅರಸ ಅಚ್ಯುತರಾಯನಿಗೆ ಒಮ್ಮೆ ಅಪಾರವಾಗಿ ದ್ರವ್ಯಾಭಾವ ಉಂಟಾದಾಗ ಶ್ರೀವಾದಿರಾಜರು ಅಲ್ಲಿ ಕಿಷ್ಕಿಂದೆಯ ಗುಹೆಯಲ್ಲಿದ್ದ ವಾಲಿಭಂಡಾರ, ಸುಗ್ರೀವ ಭಂಡಾರಗಳನ್ನು ತೋರಿ ಅಪಾರಧನವನ್ನು ಅನುಗ್ರಹಿಸಿದರೆಂದು ಐತಿಹ್ಯವಿದೆ.

**ಹಂಪೆ :** ಬೆಂಗಳೂರಿಗೆ 360 ಕಿ. ಮಿ. ಬಳ್ಳಾರಿಗೆ 77 ಕಿ. ಮಿ. ಹೊಸ ಪೇಟೆಗೆ 13 ಕಿ. ಮಿ. ಇದು ಶ್ರೀ ವಿಠಲಕ್ಷೇತ್ರವೆಂಬ ಹೆಸರು ಪಡೆದಿತ್ತು. ಇದು ವಿಜಯನಗರವೆಂದು ಸುಪ್ರಸಿದ್ಧವಾಗಿದ್ದ ಹಂಪೆ. ಚಾರಿತ್ರಕವಾಗಿ ಇದು ದೊಡ್ಡ ಸಾಮ್ರಾಜ್ಯದ ರಾಜಧಾನಿಯಾಗಿದ್ದು ಕಲಾತ್ಮಕವಾಗಿ ಇದು 14 ಚ. ಕಿ. ಮಿ. ವಿಸ್ತಾರದಲ್ಲಿ ಅನೇಕ ಪ್ರಸಿದ್ಧ ದೇವಾಲಯಗಳು ಮತ್ತು ಇತರ ಗುಡಿ ಗೋಪುರಗಳನ್ನು ಹೊಂದಿತ್ತು. ಶ್ರೀ ವ್ಯಾಸರಾಜರಂಥಹ ವೈಷ್ಣವ ಯತಿ ಶೇಖರದಿಂದಾಗಿ ಶ್ರೀ ಪುರಂದರ ದಾಸರಂತಹ ಹರಿದಾಸರಿಂದಾಗಿ ಈ ಸ್ಥಳವು ಅಸಾಮಾನ್ಯ ಆಧ್ಯಾತ್ಮಿಕ ಮಹತ್ವವನ್ನು ಹೊಂದಿದೆ. ಇಂದಿಗೂ ಇಲ್ಲಿರುವ ವ್ಯಾಸರಾಜ ಮಂಟಪ, ಚಕ್ರತೀರ್ಥ, ಸಮೀಪದ ಯಂತ್ರೋದ್ಧಾರ ಪ್ರಾಣದೇವರು, ಶ್ರೀಪುರಂದರ ದಾಸರ ಮಂಟಪ, ಶ್ರೀ ನರಹರಿತೀರ್ಥರ ಮೂಲ ಬೃಂದಾವನ, ಶ್ರೀ ರಘುನಂದನ ತೀರ್ಥರ ಹಾಗೂ ಇತರ ಯತಿಗಳ ಮೂಲ ಬೃಂದಾವನ ಸ್ಥಳದಿಂದಾಗಿ ವೈಷ್ಣವರ ಯಾತ್ರಾಸ್ಥಳವಾಗಿದೆ. ಇಲ್ಲಿಯ ಉಗ್ರನರಸಿಂಹ, ವಿಠಲಮಂದಿರ, ಕೋದಂಡ ರಾಮ ಮಂದಿರ, ವಿರೂಪಾಕ್ಷ

ಮಂದಿರ ಮೊದಲಾದವುಗಳ ಅಪಾರ ಶಿಲ್ಪ ವೈಭವದಿಂದಾಗಿ ಜಗತ್ತಿನ ಗಮನ ಸೆಳೆಯುವ ಪ್ರವಾಸೀ ಕೇಂದ್ರವೂ ಆಗಿದೆ. ಹಂಪೆಯಲ್ಲಿ ಹೇಮಕೂಟ ಪರ್ವತದ ಬದಿಯಲ್ಲಿ ತುಂಗಭದ್ರಾ ತೀರದಲ್ಲಿ ವಿರೂಪಾಕ್ಷನನ್ನು ಕುರಿತು ವ್ಯಾಸರಾಯರು ರಚಿಸಿದ ಸ್ತುತಿಯು ಶಿವಸ್ತುತಿಯೆಂದೇ ಪ್ರಸಿದ್ಧವಾಗಿದೆ. ಪುರಂದರ ದಾಸರೂ ಸಹ ವಿರೂಪಾಕ್ಷನ ಮೇಲೆ ಅನೇಕ ಕೃತಿಗಳನ್ನು ರಚಿಸಿರುವರು.

## 200. ಚಕ್ರತೀರ್ಥ :

ಹೊಸಪೇಟೆಯಿಂದ ವಿಜಯನಗರದ ರಾಜಧಾನಿಯಾಗಿದ್ದ ಈಗಿನ ಹಂಪೆಯ ಬಳಿ ಹರಿಯುವ ತುಂಗಭದ್ರಾನದಿಯ ತಟದ ಬಳಿ ಈ ಸ್ಥಳವಿದೆ. ನದಿಯು ಪೂರ್ವಾಭಿಮುಖವಾಗಿ ಹರಿಯುತ್ತಿದ್ದು ತಕ್ಷಣ ಉತ್ತರಾಭಿಮುಖವಾಗಿ ಇಲ್ಲಿ ಹರಿಯುತ್ತಿದ್ದಾಳೆ. ಇಲ್ಲಿ ನದಿಯ ನೀರು ಚಕ್ರದಂತೆ ತಿರುಗುತ್ತದೆ. ಇದನ್ನೇ ಚಕ್ರತೀರ್ಥವೆನ್ನುವರು. ಇದರ ದಡದ ಮೇಲೆ ಶ್ರೀರಾಮನ ಮಂದಿರವಿದೆ. ಅದೇ ದಡದ ಮೇಲೆ ಮಂದಿರದ ಎಡಭಾಗಕ್ಕೆ ನಡೆದು ಕೆಲವು ಮೆಟ್ಟಿಲುಗಳನ್ನು ಹತ್ತಿಹೋದರೆ ಗುಹಾಂತರ್ಗತನಾದ ಪ್ರಾಣದೇವರಿದ್ದಾರೆ. ಸುಮಾರು ಕ್ರಿ. ಶ. 1500ರಲ್ಲಿ (1422ರ ಕಾದ್ರಿ ಸಂವತ್ಸರ) ವ್ಯಾಸರಾಜ ಸ್ವಾಮಿಗಳು ಈ ಗುಹೆಯಲ್ಲಿ ಕುಳಿತು ತಮ್ಮ ನಿತ್ಯಾನುಷ್ಠಾನವನ್ನು ಮಾಡಿಕೊಳ್ಳುತ್ತಾ ಅಲ್ಲಿನ ಬಂಡೆಯೊಂದರ ಮೇಲೆ ಪ್ರಾಣದೇವರ ಪ್ರತೀಕವನ್ನು ಅಂಗಾರದಿಂದ ಚಿತ್ರಿಸುತ್ತಿದ್ದರು. ಎಷ್ಟು ಸಲ ಚಿತ್ರಿಸಿದರೂ ಪ್ರಾಣದೇವ ಹಾರಿ ಹಾರಿ ಹೋಗುತ್ತಿದ್ದನಂತೆ. ಆಗ ವ್ಯಾಸರಾಜರು ಅವನ ಸುತ್ತಲೂ ಚಕ್ರದ ಕಟ್ಟನ್ನು ಬರೆದು ಅವನನ್ನು ಬಂಧಿಸಿದರು. ಆಗ ಪ್ರಾಣದೇವರು ಅಲ್ಲಿಯೇ ನಿಂತರಂತೆ. ಅವರೇ ಯಂತ್ರೋದ್ಧಾರಕ ಪ್ರಾಣದೇವರು. ದೇವರು ಪದ್ಮಾಸನದಲ್ಲಿ ಕುಳಿತು, ಧ್ಯಾನಮಗ್ನ ರಾಗಿರುವಂತೆ ಚಿತ್ರಿಸಲಾಗಿದೆ. ಶಟ್ಕೋಣವನ್ನು ರಚಿಸಿ ಅದರ ಸುತ್ತಲೂ ವಲಯಾಕಾರವನ್ನೂ ಅದರ ಸುತ್ತಲೂ ಪದ್ಮದಳಗಳನ್ನೂ ಚಿತ್ರಿಸಿರುವರು. ಒಂದಕ್ಕೊಂದು ಹೆಣೆದುಕೊಂಡಿರುವ ಕಪಿಗಳಿಂದ ಈ ಯಂತ್ರವು ಬಿಗಿಸಲ್ಪಟ್ಟಿದೆ. ಈ ಯಂತ್ರದಲ್ಲಿ ಒಂದು ಕೋಟಿ ಬೀಜಾಕ್ಷರಗಳು ಅಡಕವಾಗಿದೆಯೆಂದು ಹೇಳುವರು. ಸಿದ್ಧಿಗಾಗಿ ಮೂರುಕೋಟಿ ಜಪಧಾರೆ ಎರೆದು ಕಟ್ಟಿದ್ದಾರೆಂದು ತಿಳಿದು ಬಂದಿದೆ. ಇದರ ಸೇವೆಯಿಂದ ಭೂತಪ್ರೇತ ಪಿಶಾಚಾದಿ ಪೀಡೆಗಳು ವಾತ, ಶೀತ, ಭೀತ್ಯಾದಿಗಳು ನಿವಾರಣೆಯಾಗುತ್ತದೆಂದು ವಿಜಯದಾಸರು ಹೇಳಿದ್ದಾರೆ. ಅವರು ಇದೇ ಚಕ್ರತೀರ್ಥದಲ್ಲಿ ಮಿಂದು ಮಡಿಯುಟ್ಟು ಆಹ್ನೀಕಗಳನ್ನು ಪೂರೈಸಿ, ಯಂತ್ರೋದ್ಧಾರಕ ಪ್ರಾಣ ದೇವರಿಗೆ ನಮಿಸಿ ಮಂದಿರದ ಎಡಭಾಗದಲ್ಲಿರುವ ಕಡಿದಾದ ಬಂಡೆಗಳನ್ನು ಏರಿ, ಮೇಲೆ ಹೋಗುತ್ತಿದ್ದರಂತೆ. ಪುರಂದರದಾಸರ ನಾಲ್ಕನೆಯ ಮಗ ಮಧ್ವಪತಿ ಇದೇ ಚಕ್ರತೀರ್ಥದ ಮಡುವಿನಲ್ಲಿ ಧುಮುಕಿ ಪುರಂದರದಾಸರು ನದಿಯಲ್ಲಿ ಎಸೆದಿದ್ದ ಮೈಲಾರಯ್ಯನ ಒಂದು ಸ್ಪರ್ಶಶಿಲೆಗೆ ಜೊತೆಯಾಗಿ ನಾಲ್ಕಾರು ಸ್ಪರ್ಶಶಿಲೆಗಳನ್ನು ಮೇಲೆ ತಂದನಂತೆ.

ಪುರಂದರದಾಸರು ಹಂಪೆಯಲ್ಲಿದ್ದಾಗ ನಿತ್ಯವೂ ಯಂತ್ರೋದ್ಧಾರಕ ಪ್ರಾಣದೇವರಿಗೆ ಮನೆಯಿಂದ ನೈವೇದ್ಯ ತೆಗೆದುಕೊಂಡು ಹೋಗಿ ಸಮರ್ಪಿಸುತ್ತಿದ್ದರು. ಒಮ್ಮೆ ಏನು

ಕಾರಣವ್ರೋ ಆ ಕೆಲಸವನ್ನು ಮಧ್ವಪತಿಗೆ ವಹಿಸಿದರು. ಬಾಲಕನು ಉತ್ಸಾಹದಿಂದ ಕ್ರಮವಾಗಿ ಅಭಿಶೇಕಮಾಡಿ ಗಂಧಾಕ್ಷತೆಗಳನ್ನಿಟ್ಟು ಪುಷ್ಪಾದಿಗಳ್ನು ಸಮರ್ಪಿಸಿದ ತರುವಾಯ ಎಲ್ಲರಂತೆ ನೈವೇದ್ಯದ ತಟ್ಟೆಯನ್ನು ತೋರಿಸದೆ ಮಾರುತಿ ಊಟವೇಕೆ ಮಾಡಬಾರದೆಂದು ತಟ್ಟೆಯನ್ನು ಮುಖಕ್ಕೆ ಹಿಡಿದನು. ಬಾಲಕನ ಅಕೃತ್ತಿಮ ಸ್ವಭಾವಕ್ಕೆ ಮೆಚ್ಚಿ ಮಾರುತಿಯು ಬಾಯ್ದೆರೆದನು. ತುತ್ತುಮಾಡಿ ಮಾರುತಿಗೆ ಮಧ್ವಪತಿಯು ಊಟ ಮಾಡಿಸಿದನು. ನಾಲ್ಕಾರುದಿನ ಕಳೆದ ಮೇಲೆ ಮನೆಯಲ್ಲಿ ಈ ವಿಚಾರ ಬಂದಾಗ ತಾಯಿಗೆ ದೇವರು ತಿಂದ ವಿಚಾರ ಹೇಳಿದನು. ಅದನ್ನು ಯಾರೂ ನಂಬಲಿಲ್ಲ. ಅದನ್ನು ಪರೀಕ್ಷೆ ಮಾಡಲು ದಾಸರೇ ಮಾರುತಿಯ ಗುಡಿಗೆ ಹೋದಾಗ ಮೊದಲಿನಂತೆ ಊಟಮಾಡಲು ಪ್ರಾಣ ದೇವರು ನಿರಾಕರಿಸಿದಾಗ "ನೀನು ಎಂದಿನಂತೆ ಬಾಯ್ಬಿಟ್ಟು ಊಟ ಮಾಡದಿದ್ದರೆ ತಲೆಯೊಡೆದು ಕೊಂಡು ಪ್ರಾಣಬಿಡುವೆ"ನೆಂದು ಛಲ ಹಿಡಿದನು. ಆಗ ಆ ಬಾಲಕನ ಮೇಲಿನ ದಯೆಯಿಂದ ಮಾರುತಿ ಬಾಯ್ಬಿಟ್ಟು ಭೋಜನ ಮಾಡಿದನು. ದಾಸರು ಮಾರುತಿಗೆ ತನ್ನ ಮಗನ ಮೇಲಿದ್ದ ಪರಮಾನುಗ್ರಹ ನೋಡಿ ಆಶ್ಚರ್ಯ ಪಟ್ಟರು. ಈ ಘಟನೆಯು ಚಕ್ರತೀರ್ಥದ ಬಳಿ ಇರುವ ಯಂತ್ರೋದ್ಧಾರಕ ಪ್ರಾಣದೇವರ ಮಹಿಮೆಗೆ ಸಂಬಂಧಪಟ್ಟುದು.

ಕೃಷ್ಣದೇವರಾಯನು ತನ್ನ ಕುಹುಯೋಗ ಪರಿಹಾರಾನಂತರ ಪುರಂದರದಾಸರು ಯಾವ ಭೂದಾನವನ್ನೂ ತೆಗೆದುಕೊಳ್ಳದ ಕಾರಣ ಚಕ್ರತೀರ್ಥದ ಎದುರಿಗೆ ಒಂದು ಜಪಶಾಲೆಯನ್ನು ಕಟ್ಟಿಸಿಕೊಟ್ಟನು. ಅಲ್ಲದೆ ಸಾವಿರಾರು ಜನ ಕುಳಿತುಕೊಳ್ಳಲು ಯೋಗ್ಯವಾದ ಒಂದು ಮಂಟಪ ವನ್ನೂ ಕಟ್ಟಿಸಿಕೊಟ್ಟನು. ಆ ಮಂಟಪವೂ ಇಂದಿಗೂ ಪುರಂದರ ದಾಸರ ಮಂಟಪವೆಂದು ಹೆಸರಾಗಿದೆ. ಇದನ್ನು ಯಾತ್ರಿಕರು ಸಂದರ್ಶಿಸಬಹುದು.

ನರಹರಿತೀರ್ಥರ ಬೃಂದಾವನವೂ ಸಹ (1333) ಚಕ್ರತೀರ್ಥದ ಬಳಿಯ ಒಂದು ಬಂಡೆಗಲ್ಲಿನ ಮೇಲೆ ಇದೆ. ಅಲ್ಲಿಗೆ ಹೋಗುವುದು ಬಲು ಪ್ರಯಾಸಕರ. ಬಂಡೆಗಲ್ಲುಗಳನ್ನು ತುಳಿದು ಬೆಟ್ಟದ ಪ್ರದೇಶದಲ್ಲಿ ಪ್ರಯಾಣಿಸಿ ಈ ಸ್ಥಳ ತಲುಪಬೇಕು. ಅವರ ಆರಾಧನೆಯು ಅಲ್ಲಿ ಪುಷ್ಯಶುದ್ಧ ಸಪ್ತಮಿಯಂದು ನಡೆಯುವುದು.

60 ವರ್ಷಗಳ ಕೆಳಗೆ ದ. ಕನ್ನಡ ಜಿಲ್ಲೆಯ ಐದುವರ್ಷದ ಬಾಲಕ ವೆಂಕಟರಮಣ ಚಕ್ರತೀರ್ಥದಲ್ಲಿ ಮಿಂದು ಗುರುಗಳಿಂದ ಸನ್ಯಾಸವನ್ನು ಸ್ವೀಕರಿಸಿದ್ದು ಇಲ್ಲಿಯೇ. ಅವರೇ ಈಗಿನ ಪೇಜಾವರ ಮಠದ ವಿಶ್ವೇಶತೀರ್ಥ ಶ್ರೀಪಾದಂಗಳವರು. ಅವರು ಸನ್ಯಾಸಸ್ವೀಕರಿಸಿದ ವಜ್ರ ಮಹೋತ್ಸವವು ಇದೇ ಸ್ಥಳದಲ್ಲಿ 1998 ನವೆಂಬರ್ 28, 29, ರಂದು ನಡೆದಿದ್ದು.

## 201. ಆನೆಗುಂದಿ :

ಹಂಪೆಯಿಂದ ನದಿಯ ಆಚೆ ಪ್ರದೇಶದಲ್ಲಿ ಪಂಪಾಸರೋವರವೆಂಬುದಿದೆ. ಆ ತೀರ್ಥದ ಬದಿಯಲ್ಲಿ ದುರ್ಗಾದೇವಿಯ ಮಂದಿರವಿದೆ. ಈ ದೇವಿಯನ್ನು ಕುರಿತು ಶ್ರೀ ವಾದಿರಾಜರು ಸ್ತುತಿಸಿದ್ದಾರೆ. ನದಿಯಾಚೆ ಇರುವ ಆನೆಗುಂದಿಯು ವಿಜಯನಗರ ಸಂಸ್ಥಾನಕ್ಕೆ ಅನೇಕ ವರ್ಷಗಳ ಕಾಲ ರಾಜಧಾನಿಯಂತಿದ್ದ ಸ್ಥಳ. ಆನೆಗುಂದಿಯಲ್ಲಿ ಶ್ರೀ ಅಕ್ಷೋಭ್ಯ ತೀರ್ಥರ, ಶ್ರೀಮಾಧವ ತೀರ್ಥರ ಶ್ರೀ ಜಯತೀರ್ಥರ ಮೃತ್ತಿಕಾ ಬೃಂದಾವನಗಳು ರಾಜವಾಡೆ ಎಂಬಲ್ಲಿ ಸ್ಥಾಪಿತವಾಗಿದ್ದವೆಂದು ತಿಳಿಯುತ್ತದೆ.

## 202. ನವ ವೃಂದಾವನ :

ಬಳ್ಳಾರಿ ಹಾಗೂ ರಾಯಚೂರು ಜಿಲ್ಲೆಗಳ ಸಂಗಮಸ್ಥಳದಲ್ಲಿ ತುಂಗ ಭದ್ರಾನದಿಯ ನಡುಗಡ್ಡೆಯ ಪ್ರದೇಶವಿದೆ. ಇಲ್ಲಿಯೇ 9 ಮಾಧ್ವ ಯತಿವರ್ಯರ ಬೃಂದಾವನಗಳಿವೆ. ಇದನ್ನೇ ನವ ಬೃಂದಾವನವೆನ್ನುವರು. ಇದನ್ನು ನದಿಯ ಎರಡೂ ಕಡೆಗಳಿಂದ ತಲಪಬಹುದು. ಗಂಗಾವತಿಯಿಂದ ಆನೆಗುಂದಿಗೆ.ಬಸ್ಸಿನಲ್ಲಿ ಪ್ರಯಾಣಿಸಿ ಹರಿಗೋಲಿನ ಮೂಲಕ ನದಿಯನ್ನು ದಾಟಿ ಇಲ್ಲಿಗೆ ತಲುಪಬಹುದು. ಹಾಗಿಲ್ಲದಿದ್ದರೆ ಹೊಸ ಪೇಟೆಯಿಂದ ಕಮಲಾಪುರದ ಮೂಲಕ ಕಂಪ್ಲಿಗೆ ಹೋಗುವ ಮಾರ್ಗದಲ್ಲಿ ಪ್ರಯಾಣಿಸಿ ತಲವಾರಗಟ್ಟೆ, ಎಂಬಲ್ಲಿ ಇಳಿದು, ಹರಿಗೋಲು ಮೂಲಕ ಈ ಸ್ಥಳವನ್ನು ತಲುಪಬಹುದು. ಹಾಗಲ್ಲದೆ ಕಮಲಾಪುರದಿಂದ ವೆಂಕಟಾಪುರದವರೆಗೂ ಬಸ್ಸಿನಲ್ಲಿ ಹೋಗಿ 3 ಕಿ. ಮಿ. ಒಳ ದಾರಿಯಲ್ಲಿ ನಡೆದು ನದಿಯ ದಂಡೆಗೆ ಸೇರಿ ಅಲ್ಲಿಂದ ಹರಿಗೋಲಿನಲ್ಲಿ ನವವೃಂದಾವನವನ್ನು ತಲುಪಬಹುದು. ಬಹಳ ಪ್ರಯಾಸ ಕರ ದಾರಿಯಾದುದರಿಂದ ಅಶಕ್ತರೂ, ಮಕ್ಕಳೂ ಇಲ್ಲಿಗೆ ಭೇಟಿ ಕೊಡಲು ಕಷ್ಟ. ಪೂಜೆ ಅಭಿಶೇಖಗಳು ದಿನಾಲೂ ನಡೆಯುವುದಾದರೂ ಪದ್ಮನಾಭತೀರ್ಥರ, ವ್ಯಾಸರಾಯರ ಮತ್ತು ಇತರ ಯತಿಗಳ ಆರಾಧನೆಯ ಕಾಲದಲ್ಲಿ ಜನಸಂದಣಿ, ವಾಹನ ಅನುಕೂಲ ಇರುವುದ ರಿಂದ ಆಗ ಹೋಗುವುದು ಸುಲಭ. ಇಲ್ಲಿಯ ನಡುಗಡ್ಡೆಯ ವಿಶಾಲ ಬಯಲಿನಲ್ಲಿ 9 ಮಂದಿ ಮಾಧ್ವಯತಿಗಳ ಬೃಂದಾವನಗಳಿವೆ. ಅವುಗಳು ಯಾವುವೆಂದರೆ ಪದ್ಮನಾಭ ತೀರ್ಥರು, ಕವೀಂದ್ರರು, ವಾಗೀಷರು, ರಘುನಂದನರ (ಉತ್ತರಾದಿಮಠ) ಬೃಂದಾವನಗಳು ಇಲ್ಲಿವೆ. ವ್ಯಾಸರಾಯ ಮಠದ ಶ್ರೀ ವ್ಯಾಸರಾಯರ, ಶ್ರೀನಿವಾಸತೀರ್ಥರ, ರಾಮ ತೀರ್ಥರ, ಬೃಂದಾವನಗಳು ಇಲ್ಲಿವೆ. ರಾಘವೇಂದ್ರ ಮಠದ ಸುಧೀಂದ್ರ ತೀರ್ಥರ ಬೃಂದಾವನವನ್ನು ಇಲ್ಲಿ ಕಾಣಬಹುದು. ಗೋವಿಂದ ಒಡೆಯರ ಬೃಂದಾವನವನ್ನೂ ದರ್ಶಿಸಬಹುದು. ಈ ವೃಂದಾವನ ಸ್ಥಳದ ಆವರಣದೊಳಗೆ ಶ್ರೀ ಪ್ರಾಣದೇವರ ಗುಡಿ ಇದೆ. ಇಲ್ಲಿ ಯಾವ ಕಟ್ಟಡದ ಆಸರೆಯೂ ಇಲ್ಲದಿರುವುದರಿಂದ ಸ್ವಾಮಿಗಳ ಸಹಿತವಾಗಿ ಇಲ್ಲಿನ ಗುಹೆಗಳಲ್ಲಿ ವಾಸ್ತವ್ಯ ಹೂಡುವುದು ಸಾಮಾನ್ಯವಾಗಿದೆ. ಇಲ್ಲಿಯ ನದಿಯಾದ ತುಂಗಭದ್ರಾ ಸ್ನಾನ ನವಬೃಂದಾವನ ಗಳ ದರ್ಶನ ನಿಜಕ್ಕೂ ಪಾಪಹರ, ಇದು ಅತ್ಯಂತ ಪುಣ್ಯಕರ ಸ್ಥಳ.

## 203. ಮಾಗಳ :

ಹೊಸಪೇಟೆ ತಾಲ್ಲೂಕು ಹೂವಿನ ಹಡಗಲಿಗೆ 13 ಕಿ. ಮಿ. ಸೂರ್ಯನಾರಾಯಣ ಮತ್ತು ವೇಣುಗೋಪಾಲಸ್ವಾಮಿ ದೇವಾಲಯಗ್ಳಳಿವೆ. ಕಪ್ಪು ಬಳಪದ ಕಲ್ಲಿನಲ್ಲಿ ನಿರ್ಮಾಣವಾಗಿದೆ. ಚಾಲುಕ್ಯದೇವಾಲಯಗಳಲ್ಲೆಲ್ಲಾ ಅತಿ ಸುಂದರ.

## 204. ಬಾಗಳಿ :

ಹರಪನ ಹಳ್ಳಿಯಿಂದ 5 ಕಿ.ಮಿ. ಕಲ್ಲೇಶ್ವರ ದೇವಾಲಯವಿದೆ. ದೇವಾಲಯದ 59 ಕಂಬಗಳು ಒಂದು ಮತ್ತೊಂದರಂತೆ ಇರದೆ ಬೇರೆ ಬೇರೆ ತರಹ ಕೆತ್ತಲ್ಪಟ್ಟಿವೆ.

## 205. ಗುಣಸಾಗರ :

ಕೊಡ್ಲಿಗಿಯಿಂದ 30 ಕಿ. ಮಿ. ಅತ್ಯಂತ ಸುಂದರವಾದ ಗೋಪಾಲಕೃಷ್ಣಮೂರ್ತಿಯ ದೇವಾಲಯ.

## 206. ಕುರುವತ್ತಿ :

ಹರಪನಹಳ್ಳಿಗೆ 40 ಕಿ. ಮಿ., ಹಡಗಲಿಗೆ 36 ಕಿ. ಮಿ. ಇಲ್ಲಿಯ ಮಲ್ಲಿಕಾರ್ಜುನ ಗುಡಿ ಚಾಲುಕ್ಯಶಿಲ್ಪದ ಸುಂದರ ಕಲಾಕೃತಿ.

## 207. ಬೊಮ್ಮಘಟ್ಟ :

ಸಂಡೂರು ತಾಲ್ಲೂಕು ಹೊಸಪೇಟೆಯಿಂದ 30 ಕಿ. ಮಿ. ಇದನ್ನು ಬ್ರಹ್ಮಘಟ್ಟವೆಂತಲೂ ಕರೆಯುವರು. ಪ್ರಸಿದ್ಧ ಕುಮಾರಸ್ವಾಮಿ ಬೆಟ್ಟದ ದಕ್ಷಿಣಭಾಗದಲ್ಲಿದೆ. ಈ ಕ್ಷೇತ್ರವು ಪ್ರಾಣದೇವರ ಪ್ರಸಿದ್ಧ ಪುಣ್ಯಕ್ಷೇತ್ರಗಳಲ್ಲಿ ಒಂದು. ಈ ಪ್ರಾಣದೇವರನ್ನು ಹುಲಿಕುಂಟರಾಯ ನೆನ್ನುತ್ತಾರೆ. ಪ್ರಾಣದೇವರು ಒಮ್ಮೆ ಸತ್ಯಲೋಕದಿಂದ ಆಗಮಿಸಿ ಈ ಗ್ರಾಮದ ಹುಲಿಕುಂಟೆ ಕೆರೆಯ ದಡದ ಹತ್ತಿರ ಹುಲಿಪೊದೆಯಲ್ಲಿ ನೆಲೆಸಿದ್ದರಂತೆ. ನಂತರ ಕಾಲಕ್ರಮದಲ್ಲಿ ಮೂರ್ತಿ ಭೂಗತವಾಗಿತ್ತಂತೆ. ಶತಮಾನಗಳ ಹಿಂದೆ ಬೊಮ್ಮಯ್ಯನೆಂಬ ಗೋವಳ ಇಲ್ಲಿ ವಾಸವಾಗಿದ್ದ ನಂತೆ. ಆ ಗೋವುಗಳ ಹಿಂಡಿನಲ್ಲಿ ತೇಜಸ್ವಿಯೆಂಬ ಹಸುವಿತ್ತು. ಅದು ಪ್ರತಿದಿನ ಗೋವಳನ ಕಣ್ಣು ತಪ್ಪಿಸಿ ಎಲ್ಲೋ ಹೋಗಿ ಹಾಲು ಹಿಂಡಿ ಬರುತ್ತಿತ್ತು. ರಾತ್ರಿ ವೇಳೆ ಹಾಲು ಕರೆಯಲು ಹೋದರೆ ಕೆಚ್ಚಲು ಖಾಲಿಯಾಗಿರುತ್ತಿತ್ತು. ಈ ವಿಸ್ಮಯವನ್ನು ಪರೀಕ್ಷಿಸಲು ಈ ಗೋವಳ ಆ ಹಸುವಿನ ಹಿಂದೆ ಹೋದಾಗ ಅದು ಒಂದು ಹುಲ್ಲು ಪೊದೆಯ ಮೇಲೆ ನಿಂತು ಹಾಲು ಕರೆಯುತ್ತಿತ್ತು. ಕೋಪಗೊಂಡ ಗೋವಳ ಹೊಡೆಯಲು ಹೋದಾಗ ಅದು ಮಾಯ ವಾಯಿತು. ಹನುಮಂತದೇವರು ಕನಸಿನಲ್ಲಿ ಆತನಿಗೆ ಕಾಣಿಸಿಕೊಂಡು ತಾನು ಇದುವರೆಗೂ ಅಜ್ಞಾತವಾಗಿದ್ದೆನೆಂದೂ ಈಗ ಭಕ್ತರಿಗೆ ದರ್ಶನ ನೀಡಿ ಅವರ ಇಷ್ಟಾರ್ಥಗಳನ್ನು ಪೂರೈಸು ತ್ತೇನೆಂದು ಹೇಳಿದಂತಾಯಿತು. ಗ್ರಾಮಸ್ಥರೆಲ್ಲಾ ಸೇರಿ ಈ ದೇವರನ್ನು ಬೊಮ್ಮಘಟ್ಟದಲ್ಲಿ ಪ್ರತಿಷ್ಠಾಪಿಸಿದರು. ಇದನ್ನು ಹುಲಿಕುಂಟೆ ಮುಖ್ಯ ಪ್ರಾಣದೇವರೆಂದು ಕರೆದರು.

ಈ ದೇವರ ವಿಗ್ರಹದ ಮೇಲೆ ಸೂರ್ಯ ಚಂದ್ರರ ಲಾಂಛನಗಳಿವೆ. ದುಷ್ಟರನ್ನು ಶಿಕ್ಷಿಸಲು ಎತ್ತಿದ ಕೈ, ಹಾಗೂ ಬಾಲ ಹನುಮಂತನ ಅವತಾರದ ಸೂಚಕ ಭೀಮಸೇನನಂತೆ ಎಡಕೈಯಲ್ಲಿ ಗದೆ, ಮಧ್ವಾಚಾರ್ಯರ ಲಾಂಛನಗಳಾದ ತುಳಸಿಮಾಲೆ, ಕೊರಳಲ್ಲಿ, ಪಾದುಕೆ ಕಾಲಲ್ಲಿ, ಹೀಗೆ ಹನುಮ, ಭೀಮ, ಮಧ್ವತ್ರಯರ ಅವತಾರ ತ್ರಯದ ಕುರುಹುಗಳನ್ನು ಈ ವಿಗ್ರಹದಲ್ಲಿ ಕಾಣಬಹುದು.

ಇದನ್ನು ಜನಮೇಜಯ ರಾಯನೇ ಪ್ರತಿಷ್ಟಿಸಿದನೆಂದು ನಂಬಿಕೆಯೂ ಇದೆ.

ಈ ಕ್ಷೇತ್ರವೂ ಇತರ ವಿಷಯಗಳಿಂದಲೂ ಪವಿತ್ರವಾಗಿದೆ. ರಾಘವೇಂದ್ರರ ಪರಂಪರೆ ಯಲ್ಲಿ ಬಂದ ಶ್ರೀ ಸುಭೋದೇಂದ್ರ ತೀರ್ಥರು ಶ್ರೀ ಸುಜನೇಂದ್ರತೀರ್ಥರಿಗೆ ಆಶ್ರಮ

ಕೊಟ್ಟಿದ್ದು ಇಲ್ಲಿಯೇ. ಸುಜನೇಂದ್ರರು ಸೂರ್ಯೋಪಾಸಕರಾದ ಸಂಜನಗೂಡಿನ ರಾಮಾಶಾಸ್ತ್ರಿ ಗಳನ್ನು ವಾಗ್ವಾದದಲ್ಲಿ ಸೋಲಿಸಿದ ನೆನಪಾಗಿ, ಇಲ್ಲಿಯ ದೇವಸ್ಥಾನದಲ್ಲಿ ಶ್ರೀರಾಮ, ಲಕ್ಷ್ಮಣ, ಸೀತೆ, ಆಂಜನೇಯ, ಗರುಡರ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರ ದಿವಾನರಾದ ಪೂರ್ಣಯ್ಯನವರು ಇಲ್ಲಿಗೆ ಬಂದು ಶ್ರೀ ಪ್ರಾಣದೇವರ ಸೇವೆ ಮಾಡಿದರೆಂದು ತಿಳಿದುಬರುತ್ತದೆ. ದೇವಾಲಯದ ಮೇಲಿನ ದಶಾವತಾರದ ವಿಗ್ರಹ ಗಳನ್ನು ಗೋಪುರದ ಮೇಲೆ ಶ್ರೀ ಪೂರ್ಣಯ್ಯನವರೇ ಕಟ್ಟಿಸಿದರೆಂದು ತಿಳಿದುಬರುತ್ತದೆ. ಈ ಕ್ಷೇತ್ರ ದಲ್ಲಿ ಪಾಲ್ಗುಣಶುದ್ಧ ಪಂಚಮಿಯಿಂದ ದ್ವಾದಶಿಯವರೆಗೆ 8 ದಿನ ಸತತವಾಗಿ ಉತ್ಸವಗಳು, ಹೋಮಗಳು ಪ್ರತಿವರ್ಷ ನಡೆಯುತ್ತವೆ. ದಶಮಿ ಬ್ರಹ್ಮರಥೋತ್ಸವ.

# ಹಾವೇರಿ ಜಿಲ್ಲೆ

## 208. ಸವಣೂರು :

ಇದು ಬೆಂಗಳೂರು ಹುಬ್ಬಳ್ಳಿ ನಡುವಿನ ರೈಲ್ವೆ ನಿಲ್ದಾಣ. ಅಲ್ಲಿಂದ 5 ಕಿ. ಮಿ. ಇಲ್ಲಿಂದ ಊರಿಗೆ ಬಸ್ಸಿನ ಅನುಕೂಲವೂ ಇದೆ. ಆದರೆ ಬಸ್ ನಿಲ್ದಾಣ ಕೂಡ ಮಠಕ್ಕೆ ದೂರ. ಈ ಸ್ಥಳ ಹಿಂದಿನ ಸವಣೂರು ಸಂಸ್ಥಾನದಲ್ಲಿನ ರಾಜಧಾನಿ. ಇದನ್ನು ಪಠಾಣ್ ವಂಶದ ರಾಜರುಗಳು ಆಳುತ್ತಿದ್ದರು. ಇಲ್ಲಿ ಬೃಂದಾವನಸ್ಥರಾಗಿರುವ ಶ್ರೀ ಸತ್ಯಬೋಧ ಸ್ವಾಮಿಗಳು ರಾಯಚೂರಿನ ಹರಿ ಆಚಾರ್ಯ ಮತ್ತು ಸರಳಾದೇವಿಯ ಪುತ್ರರು. ಇವರು ಶ್ರೀ ಅಹೋಬಲ ನರಸಿಂಹ ಸ್ವಾಮಿಯವರ ಕೃಪೆಯಿಂದ 1710ರಲ್ಲಿ ಜನಿಸಿದರು. ರಾಮನೆಂಬುದು ಅವರ ಪೂರ್ವಾಶ್ರಮದ ಹೆಸರು. ಸತ್ಯಪ್ರಿಯತೀರ್ಥ ಸ್ವಾಮಿಗಳಿಂದ ಅನುಗ್ರಹಿಸಲ್ಪಟ್ಟು ಸತ್ಯಬೋಧ ತೀರ್ಥರೆನಿಸಿದರು. ಮಾನಾ ಮಧುರೈನಲ್ಲಿ ತಮ್ಮ ಗುರುಗಳು ಬೃಂದಾವನಸ್ಥರಾದಾಗ ಉತ್ತರಾಧಿಮಠದ ಪೀಠಕ್ಕೆ ಉತ್ತರಾಧಿಕಾರಿಗಳಾದರು. ಸುಮಾರು 41 ವರ್ಷ ಉತ್ತರಾಧಿ ಮಠದ ಪೀಠವನ್ನು ಆಳಿ ಆಸೇತುಹಿಮಾಚಲದವರೆಗೆ ಮಧ್ವ ಸಿದ್ಧಾಂತದ ಪತಾಕೆ ಯನ್ನು ಹಾರಿಸಿದರಲ್ಲದೆ, ಶ್ರೀಮಠದ ಕೀರ್ತಿಯನ್ನು ಮೆರೆಸಿದರು. ಸತ್ಯಬೋಧರ ಕಾಲವೆಂದರೆ ಶ್ರೀಮಠದ ಮಹದೈಶ್ವರ್ಯದ ಕಾಲ. ನವರತ್ನಗಳನ್ನು 9 ಬಂಗಾರದ ಕೊಡಗಳಲ್ಲಿ ತುಂಬಿಟ್ಟು ರಾಮಚಂದ್ರ ದೇವರಿಗೆ ರತ್ನಾಭಿಶೇಕ ಮಾಡುತ್ತಿದ್ದ ಕಾಲ. ಅವರಿದ್ದಾಗಲೇ ಮತ್ತು ಅನಂತರ ಉತ್ತರಾಧಿ ಮಠಕ್ಕೆ ಸತ್ಯಭೋಧ ಮಠವೆಂದೇ ಪರ್ಯಾಯ ಹೆಸರಿತ್ತು. ತಮ್ಮ ಚಾಣಾಕ್ಷತನ ದಿಂದ ರಾಮನಾಥಪುರ, ತಂಜಾವೂರು, ಆರಣಿ, ಶ್ರೀರಂಗಪಟ್ಟಣ, ಪುಣೆ ಹಾಗೂ ಸವಣೂರು ರಾಜಮನೆತನಗಳೊಡನೆ ಉತ್ತಮ ಬಾಂಧವ್ಯವನ್ನು ಇಟ್ಟುಕೊಂಡಿದ್ದರು. ಹೈದರಾಲಿ ಇವರನ್ನು ಬರಮಾಡಿಕೊಂಡು ಗೌರವಿಸಿ ಆನೆಕಾಣಿಕೆ ಕೊಟ್ಟಿದ್ದನು. ಖಂಡೇರಾವ್ ಎಂಬವನ ಧರ್ಮಶ್ರದ್ಧೆಯನ್ನು ಕಂಡು ಅವನು ದಿವಾನನಾಗುತ್ತಾನೆ ಎಂದು ಆಶೀರ್ವಾದಿಸಿದರು. ಹಾಗೆಯೇ ಮುಂದೆ ಆತ ಸವಣೂರಿನ ದಿವಾನನಾದನು. ಅಬ್ದುಲ್ ರವೂಫ್‌ಖಾನನ ಮಗ ಅಬ್ದುಲ್ ಹಕಿಂಖಾನ್ ಸಂಸ್ಥಾನದ ಸೂತ್ರ ವಹಿಸಿಕೊಂಡಿದ್ದಾಗ ಸಂಸ್ಥಾನದ ಅದೃಷ್ಟವೋ ಎಂಬಂತೆ ಸತ್ಯಭೋಧಸ್ವಾಮಿಗಳ ಆಗಮನ ಸವಣೂರಿಗೆ ಆಯಿತು. ಅಲ್ಲಿಂದ ಮುಂದೆ ಅರಮನೆಗೆ ನಂಟು ಬೆಳೆದು ಅವನೇ ಸವಣೂರಿನ ಮಧ್ಯಭಾಗದಲ್ಲಿ ಸತ್ಯಭೋಧರ ಮಠ ಕಟ್ಟಿಸಲು ಸಹಾಯಕನಾದನು. ಸವಣೂರಿನ ದಿವಾನ ಖಂಡೇರಾಯ, ಮರಾಠಸರದಾರ ಜಾನೋಜಿ ನಿಂಬಾಳ್ಕರ್, ಗೋಪಾಲರಾವ್ ಪಟವರ್ಧನ್, ಜಿಂಜಿಯ ಮುರಾರಿರಾಯ

ಮೊದಲಾದವರು ಶ್ರೀಗಳವರ ನಿಕಟ ಭಕ್ತರಾಗಿದ್ದರು. ವ್ಯಾಸಕೂಟದ ನೂರಾರು ಪಂಡಿತರು ಶ್ರೀ ಗಳವರ ಹತ್ತಿರ ಪಾಠಕ್ಕಿದ್ದರು. ಅವರಲ್ಲಿ ನಾಲ್ವರು ಅಂದರೆ, ಶ್ರೀ ಸತ್ಯಸಂಧರು, ಶ್ರೀ ಸತ್ಯ ವರರು, ಶ್ರೀ ಸತ್ಯಧರ್ಮರು ಹಾಗೂ ಶ್ರೀ ಸತ್ಯ ಸಂಕಲ್ಪರು. ಆ ಮುಂದೆ ಉತ್ತರಾದಿ ಮಠದ ಪೀಠವನ್ನು ಏರಿದವರು. ಸಮಕಾಲೀನ ಶ್ರೀ ರಾಯರಮಠದ ಶ್ರೀ ಧೀರೇಂದ್ರರು, ಶ್ರೀ ವರದೇಂದ್ರರು, ಹಾಗೂ ಬಿಡಿ ಸನ್ಯಾಸಿಗಳಾದ ಮಾದನೂರಿನ ಶ್ರೀ ವಿಷ್ಣುತೀರ್ಥರು ಶ್ರೀಗಳವ ರೊಂದಿಗೆ ಅನ್ಯೋನ್ಯವಾಗಿದ್ದರು. ಪ್ರಮುಖ ಹರಿದಾಸರಾದ ಶ್ರೀ ವಿಜಯದಾಸರು, ಶ್ರೀ ಗೋಪಾಲದಾಸರು, ಮೋಹನದಾಸರು, ಶ್ರೀ ಜಗನ್ನಾಥ ದಾಸರು ಅವರ ಮಹಿಮೆಯನ್ನು ತಮ್ಮ ಕೀರ್ತನೆಗಳಲ್ಲಿ ಕೊಂಡಾಡಿರುವರಲ್ಲದೆ ಅವರೊಡನೆ ನಿಕಟ ಸಂಪರ್ಕವನ್ನು ಇಟ್ಟುಕೊಂಡಿದ್ದರು. ಶ್ರೀಗಳವರು ಬ್ರಾಹ್ಮಣರಿಗೆ ದಕ್ಷಿಣೆ ರೂಪದಲ್ಲಿ ತಾವೆ ಟಂಕಸಾಲೆಯಲ್ಲಿ ತಯಾರಿಸಿದ ಚಿನ್ನದ ಹಾಗೂ ಬೆಳ್ಳಿಯ ನಾಣ್ಯಗಳನ್ನು ಕೊಡುತ್ತಿದ್ದರು. ಈ ಕೆಲವು ನಾಣ್ಯ ಗಳು ಈಗಲೂ ಉತ್ತರಾದಿಮಠದಲ್ಲಿ ಹಾಗೂ ಕರ್ನಾಟಕದ ಹಳೆಯ ಮಾಧ್ವ ಪಂಡಿತರ ಮನೆಗಳಲ್ಲಿ ನಿತ್ಯಪೂಜೆಯ ವಸ್ತುಗಳಾಗಿವೆ.

ಊರಿನ ಮಧ್ಯೆ ಇರುವ ಸ್ಥಳದಲ್ಲಿ ಸತ್ಯಭೋಧರ ಮಠವಿದೆ. ಅಲ್ಲಿಗೆ ಹೋಗುವ ರಸ್ತೆಗೆ ಸತ್ಯಬೋಧ ಮಠದ ರಸ್ತೆ ಎಂದೇ ಹೆಸರಿಟ್ಟಿದ್ದಾರೆ. ಮಠ ಮಾತ್ರ ಹಳೇ ಕಾಲದ ತೊಟ್ಟಿ ಮನೆಯಂತೆ ಇದೆ. ತೊಟ್ಟಿಯ ಮನೆಯ ಮಧ್ಯದಲ್ಲಿ ಕೂರ್ಮಪೀಠದ ಮೇಲೆ ಶ್ರೀ ಸತ್ಯಭೋಧರ ಮೂಲ ಬೃಂದಾವನವಿದೆ. ಅದರ ಮೂರು ಕಡೆಯೂ ಬಾಗಿಲುಗಳಂತಿರುವ ಭಾಗಗಳಿದ್ದು ಸುಲಭವಾಗಿ ಬೃಂದಾವನ ದರ್ಶನ ಮಾಡಬಹುದು. ಬೃಂದಾವನದ ಎದುರಿನಲ್ಲಿ ದೇವರ ಮನೆ ಇದೆ. ಅಲ್ಲಿಯೇ ಕೃಷ್ಣ ಮತ್ತು ಮದ್ವಾಚಾರ್ಯರ ಪ್ರತಿಮೆಗಳನ್ನು ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದ ತೀರ್ಥರು 1997ರಲ್ಲಿ ಪ್ರತಿಷ್ಠಾಪಿಸಿದ್ದಾರೆ. ಮಠದ ಒಳಗೆ ನಾಲ್ಕಾರು ಮೆಟ್ಟಿಲು ಇಳಿದರೆ ಪಾತಾಳದಂತೆ ಕಾಣುವ ಪಾದತೀರ್ಥವೆಂಬ ಕಲ್ಯಾಣಿ ಇರುವುದು. ಮತ್ತೊಂದು ಪಕ್ಕದಲ್ಲಿ ಅವರ ಆರಾಧ್ಯದೇವತೆ ಲಕ್ಷ್ಮೀನರಸಿಂಹ, ರುದ್ರದೇವ ಹಾಗೂ ಪ್ರಾಣದೇವರ ವಿಗ್ರಹಗಳಿವೆ. ಅದೇ ಶ್ರೀ ಸತ್ಯಭೋಧರು ಪ್ರತಿದಿನ ಪೂಜೆ, ಪಾಠ ಪ್ರವಚನಗಳಿಗಾಗಿ ಕೂರುತ್ತಿದ್ದ ಜಾಗ. ವಯಸ್ಸಾಗಿ ಮೆಟ್ಟಿಲು ಹತ್ತಿ ಇಳಿಯಲು ಆಗದಾಗ ಶ್ರೀ ಲಕ್ಷ್ಮೀನರಸಿಂಹನೇ ಕಾಣಿಸಿಕೊಂಡು ತಾನು ಇನ್ನು ಮೇಲೆ ಮಠದ ಒಳಗಿನ ಮರದ ಕಂಬದ ಬಳಿ ಮೂಡುವೆನೆಂದು ತಿಳಿಸಿದನಂತೆ. ಅದರಂತೆ ಮಠದ ಒಳಗಿನ 2ನೇ ಕಂಬದ ಬಳಿ ಕಾಣಿಸಿಕೊಂಡನಂತೆ. ಆ ಸ್ಥಳದಲ್ಲಿ ಈಗ ಪೀಠವನ್ನು ರಚಿಸಿರುವರು. ಅದಲ್ಲದೆ ಮಠದಲ್ಲಿ ಪೂಜೆಯನಂತರ ಮಂತ್ರಾಕ್ಷತೆ ಕೊಡುವ ಬೋಗೋಣಿಯು ಶ್ರೀ ಸತ್ಯಭೋಧರು ಮಂತ್ರಾಕ್ಷತೆ ಕೊಡುತ್ತಿದ್ದ ಪಾತ್ರೆ, ಶ್ರೀ ಖಂಡೇ ರಾಯರ ಪ್ರಾರ್ಥನೆಯಂತೆ ಅಲ್ಲಿ ಸ್ಥಾಪಿಸಲ್ಪಟ್ಟ ಪಂಚಲೋಹದ ಪ್ರತಿಮೆಯೂ ಕೂಡ ಶ್ರೀಮಠದ ಗರ್ಭಗುಡಿಯಲ್ಲಿದ್ದು ಅದರ ಚರಿತ್ರಾರ್ಹ ಅಂಶವನ್ನು ಹೊರಗೆಡಹುತ್ತಿದೆ. ದೂರವಾಣಿ : 65544 / 08378.

## 209. ವಿಷ್ಣುತೀರ್ಥ :

ಸವಣೂರಿಗೆ 3 ಕಿ. ಮಿ. ದೂರದಲ್ಲಿ ವಿಷ್ಣುತೀರ್ಥವೆಂಬ ಪುಣ್ಯ ತೀರ್ಥವಿರುವುದು. ಅದು ಮೂಲತಃ ಒಂದು ಬಾವಿ. ಒಮ್ಮೆ ಶ್ರೀಗಳವರ ಕನಸಿನಲ್ಲಿ ಭಾಗೀರಥಿಯು ಬಂದು 'ನೀನು ಕಾಶಿಗೆ ಬರಬೇಡ ನಾನೇ ಬಂದು ನಿನ್ನ ಮೇಲೆ ಪ್ರೋಕ್ಷಣೆ ಮಾಡುವೆ' ಎಂದು ಹೇಳಿ, ತಾನು ಬರುವ ಸ್ಥಳ ತಿಳಿಸಿದಳಂತೆ. ಅಂದು ಘಟಿಕಾಕಾರರ ಬಾವಿಯ ಬಳಿ ಜಾತ್ರೆಯೇ ನೆರೆಯಿತು. ಭಾವಿಯ ಪಕ್ಕದ ಆಲದ ಮರದ ಕೆಳಗೆ ನಿಂತಾಗ ಭಾಗೀರಥಿ ಶ್ರೀಗಳವರ ಮೇಲೆ ಸುರಿದಳಂತೆ. ಆ ಸ್ಥಳಧ ಬಾವಿಗೆ ವಿಷ್ಣುತೀರ್ಥ ಎನ್ನುವರು. ಈ ಸ್ಥಳ ತಲುಪಲು ಬಲು ಪ್ರಯಾಸ. ಅಲ್ಲಿ ನೀರು ಕೂಡ ಈಗ ಕಾಣದಾಗಿದೆ.

ಇತರ ರಾಜಕೀಯ, ಚಾರಿತ್ರಿಕ, ನೈಸರ್ಗಿಕ ವಿಷಯದಲ್ಲಿ ಆಸಕ್ತಿ ಇರುವವರಿಗೆ ಒಂದು ಸುದ್ದಿ, ಸವಣೂರು ರಾಜರ ಅರಮನೆ, ಮೋತಿತಲಾಬ್ ಎಂಬ ಕೆರೆ, ಇದರ ಜೊತೆಗೆ ಗೊಡ್ಡುಹುಣಸೇಮರವೆಂಬ ವೃಕ್ಷ ಸಮೂಹ (3 ಮರಗಳು). ಇದು ಜಗತ್ತಿನಲ್ಲೇ ದೊಡ್ಡದಾಗಿ ಬೆಳೆಯುವ ಬಾಂಬಿಕೇಶಿಯ ಎಂಬ ವರ್ಗಕ್ಕೆ ಸೇರಿದೆ. ಶ್ರೀಕೃಷ್ಣನು ಆಫ್ರಿಕದಿಂದ ಭಾರತಕ್ಕೆ ಇದನ್ನು ತಂದಿದ್ದನಂತೆ. ಇವುಗಳು 15 ಮೀಟರ್ ಸುತ್ತಳತೆಯಿಂದ ಹಿಡಿದು 12 ಮೀಟರ್‌ವರೆಗೆ ಇದೆ. ಅವುಗಳ ಕೆಳಗೆ ಕುಳಿತರೆ ಅತಿ ತಂಪು. ಯಾವ ಆಹಾರ ಪದಾರ್ಥವೂ ಅದರ ಕೆಳಗೆ ಕೊಳೆಯುವುದಿಲ್ಲ (Fridge Like).

## 210. ಕರ್ಜಗಿ :

ಸವಣೂರು ಸಮೀಪದ ವರದಾನದಿ ತೀರದಲ್ಲಿರುವ ನಿಸರ್ಗಸುಂದರವಾದ ಚಿಕ್ಕ ಊರು. ಜಗನ್ನಾಥ ದಾಸರು ಅಲ್ಲಿ ಕೆಲವು ಕಾಲ ಬಿಡಾರ ಹೂಡಿದ್ದರು. ಅವರಿಂದ ಪ್ರಭಾವಿತರಾದ ದಾಸಪ್ಪ ಎಂಬುವರು ಕರ್ಜಗಿ ದಾಸರೆಂದು ಪ್ರಖ್ಯಾತರಾಗಿದ್ದರು. ಇಲ್ಲಿನ ಅಧ್ಯಯನ ಮಂದಿರದಲ್ಲಿ ಅಧ್ಯಯನ ಮಾಡಿದ ಅಧ್ಯಾಪಕರು, ಅಗ್ನಿಹೋತ್ರಿಗಳು, ಪ್ರವಚನಕಾರರು ಬಹುಮಂದಿ. ಇವರಿಗೆಲ್ಲಾ ದಿವಾನ ಖಂಡೇರಾಯನ ಆಶ್ರಯವಿತ್ತು.

## 211. ಕದರ ಮಂಡಲಗಿ :

ರಾಣಿಬೆನ್ನೂರಿನಿಂದ 9 ಕಿ. ಮಿ. ಬ್ಯಾಡಗಿಯಿಂದ 3 ಕಿ. ಮಿ. ಇಲ್ಲಿ ಪ್ರಸಿದ್ಧವಾದ ಪ್ರಾಣದೇವರ ಗುಡಿ ಇದೆ. ಅಲ್ಲಿ ನೆಲೆಸಿರುವ 'ಕಾಂತೇಶ' ಪ್ರಾಣದೇವರು ಅನೇಕ ದಾಸರುಗಳಿಗೆ ಅನುಗ್ರಹ ಮಾಡಿರುವರು. ಅದರಲ್ಲಿ ಕದರಮಂಡಲಗಿ ದಾಸರು ಒಬ್ಬರು.

## 212. ಹೊಸರಿತ್ತಿ :

ಹಾವೇರಿಗೆ 12 ಕಿ. ಮಿ. ಈ ಸ್ಥಳಕ್ಕೆ ಸವಣೂರಿನಿಂದಲೂ ಹೋಗಬಹುದು. ವರದಾನದಿ ದಡದಲ್ಲಿರುವ ಈ ಕ್ಷೇತ್ರದಲ್ಲಿ ರಾಯಮಠದ ಶ್ರೀ ಧೀರೇಂದ್ರತೀರ್ಥರ ಹಾಗೂ ಸುಶೀಲೇಂದ್ರ ತೀರ್ಥರ ಬೃಂದಾವನಗಳಿವೆ. ಧೀರೇಂದ್ರರ ಆರಾಧನೆ ಪಾಲ್ಗುಣ ಶುದ್ಧ ತ್ರಯೋದಶಿ, ಸುಶೀಲೇಂದ್ರರದು ಆಶಾಡಶುದ್ಧ ತೃತೀಯ.

## 213. ಕಾಗಿನೆಲೆ :

ಹಿರೇಕೆರೂರು ತಾಲ್ಲೂಕು. ಹಾವೇರಿಯಿಂದ 11 ಕಿ. ಮೀ. ಬ್ಯಾಡಗಿಯಿಂದ 15 ಕಿ. ಮಿ. ಬೆಂಗಳೂರು 323 ಕಿ. ಮಿ. ದಾರವಾಡದಿಂದ 112 ಕಿ. ಮಿ., ಒಂದೂವರೆ ಅಡಿ ಎತ್ತರದ ಕನಕನಿಗೆ ಸ್ಫೂರ್ತಿಯಾದ ಆದಿಕೇಶವನ ದೇವಾಲಯವಿದೆ. ಇದನ್ನು ಬಾಡ ಗ್ರಾಮ ದಿಂದ ತರಲಾಯಿತೆಂದು ಪ್ರತೀತಿ. ಈ ದೇವಾಲಯ ಈಗ ಭಂಡಾರಕೇರಿ ಸ್ವಾಮಿಯವರಿಗೆ ಸೇರಿದೆ. ಕಾಗಿನೆಲೆಯಲ್ಲಿ ತಿರುಪತಿ ಮೊದಲಾದ ಕ್ಷೇತ್ರಗಳಲ್ಲಿ ನಡೆಯುವಂತೆ ಪೂಜಾಪದ್ಧತಿಗಳನ್ನು ಕನಕದಾಸರು ಏರ್ಪಡಿಸಿದ್ದರು. ಕಾಲಕ್ರಮದಲ್ಲಿ ಆ ಸುತ್ತಲಿನ ಜನ ತಿರುಪತಿಗೆ ಸಲ್ಲಿಸುವ ಮುಡುಪನ್ನು ಕಾಗಿನೆಲೆಯ ಆದಿ ಕೇಶವನಿಗೆ ಸಲ್ಲಿಸಲು ಪ್ರಾರಂಭಿಸಿ ದರು. ಇದರಿಂದ ಕಾಗಿನೆಲೆ ಉತ್ತರಕರ್ನಾಟಕದ ತಿರುಪತಿ ಎಂಬ ಹೆಸರನ್ನು ಪಡೆಯಿತು. ಅಲ್ಲಿನ ಕೆರೆದಂಡೆಯ ಮೇಲೆ ಕನಕದಾಸರ ಸಮಾಧಿ ಇದೆ ಎಂದು ಹೇಳುವರು. ಮತ್ತೆ ಕೆಲವರು ತಮ್ಮ ಮನೆ ದೇವರಾದ ತಿರುಪತಿಯ ತಿಮ್ಮಪ್ಪನನ್ನು ಕಾಣಲು ಹೋದಾಗ ಅಲ್ಲಿಯೇ ಅದೃಶ್ಯರಾದರು ಎಂದು ಹೇಳುವರು. ಇನ್ನು ಕೆಲವರು ಅವರ ಅಂಕಿತ ದೇವರಾದ ಆದಿಕೇಶವನ ಪಾದಾರವಿಂದದಲ್ಲಿ ಪ್ರಾಣಬಿಟ್ಟರು ಎನ್ನುವರು. ಕದರ ಮಂಡಲಿಗೆಯ ಹನುಮಂತನನ್ನು ಕೊಂಡಾಡುತ್ತಾ ಕಣ್ಣುಮುಚ್ಚಿರಬಹುದು ಎನ್ನುವ ಅಭಿಪ್ರಾಯವೂ ಇದೆ.

## 214. ಹಳೇ ರಾಣಿಬೆನ್ನೂರು :

ಹರಿಹರದಿಂದ 23 ಕಿ. ಮಿ. ಬೆಂಗಳೂರು-ಹುಬ್ಬಳ್ಳಿ ರೈಲುಮಾರ್ಗದ ರೈಲ್ವೆ ನಿಲ್ದಾಣ. ಇಲ್ಲಿನ ಕೋಟೆಯಲ್ಲಿ ಸತ್ಯಾಭಿಜ್ಞರ ಬೃಂದಾವನ, ಲಕ್ಷ್ಮಿನರಸಿಂಹ ದೇವರ ಗುಡಿ ಇದೆ. ಕೃಷ್ಣಮೃಗ ಅಭಯಾರಣ್ಯವೂ ಮತ್ತೊಂದು ಇಲ್ಲಿನ ಆಕರ್ಷಣೆ. ಸುಬ್ಬರಾಯದಾಸರ ಶಿಷ್ಯರು ಗಳಲ್ಲಿ ಒಬ್ಬರಾದ ಶ್ರೀಮದ್ವಾಂತರ್ಗತ ವಿಠಲ ದಾಸರು ಸನ್ಯಾಸಾಶ್ರಮ ಸ್ವೀಕರಿಸಿ ಶ್ರೀ ಕೂಡ್ಲಿ ಅಕ್ಷೋಭ್ಯ ತೀರ್ಥರ ಕರಕಮಲ ಸಂಜಾತರಾಗಿ ಶ್ರೀ ಹೃಶಿಕೇಶ ತೀರ್ಥ ಶ್ರೀಪಾದಂಗಳ ವರು ಎಂದು ಖ್ಯಾತರಾಗಿ ಈಗ ಇಲ್ಲಿಯೇ ವೃಂದಾವನಸ್ಥರಾಗಿದ್ದಾರೆ.

## 215. ಗುತ್ತಲು :

ಪ್ರಾಣದೇವರ ಗುಡಿ, ರಾಘವೇಂದ್ರರ ಮಠ ಇವುಗಳನ್ನು ಸಂದರ್ಶಿಸಬಹುದು.

# ಗದಗ್ ಜಿಲ್ಲೆ

## 216. ಗದಗ :

ದಾರವಾಡದಿಂದ 80 ಕಿ. ಮಿ., ಬೆಂಗಳೂರಿನಿಂದ 479 ಕಿ. ಮಿ., ಹುಬ್ಬಳ್ಳಿ ಬಳ್ಳಾರಿ ರೈಲ್ವೇಮಾರ್ಗದ ಸ್ಥಳ. ಇಲ್ಲಿ ಅನೇಕ ದೇವಾಲಯಗಳಿವೆ. ತ್ರಿಕೂಟೇಶ್ವರ, ವೀರನಾರಾಯಣ ದೇವಾಲಯ ಮುಖ್ಯವಾದುದು. ವೀರನಾರಾಯಣ ಸ್ವಾಮಿಯು ಕುಮಾರವ್ಯಾಸ ಭಾರತ (ಗದುಗಿನ ಭಾರತ) ಎಂಬ ಗ್ರಂಥಕ್ಕೆ ನಾರಣಪ್ಪನಿಗೆ ಸ್ಫೂರ್ತಿ. ಆ ದೇವರ ಅಂಕಿತದಲ್ಲೇ ಅವನು ಭಾರತ ರಚಿಸಿದ ಇತಿಹಾಸವಿದೆ.

## 217. ವೆಂಕಟಾಪುರ :

ಗದಗ್ ಸಮೀಪದಲ್ಲೇ 18 ಕಿ. ಮಿ. ಬೆಟ್ಟವೊಂದರ ಮೇಲೆ ತಿರುಮಲೆಯಂತೆ ವೆಂಕಟೇಶ್ವರ ದೇವಾಲಯವಿರುವುದು. ಪ್ರಸಿದ್ಧ ಯಾತ್ರಾಸ್ಥಳ. ಹೆಚ್ಚು ಯಾತ್ರಿಕರು ಇದನ್ನು ಸಂದರ್ಶಿಸುವರು. ಬಸ್ಸಿನ ಅನುಕೂಲ ನಿರಂತರವಾಗಿದೆ. ತಂಗಲು ಸ್ಥಳವಿರುವುದು.

## 218. ಮುಂಡರಗಿ :

ಗದಗ್‌ನಿಂದ 39 ಕಿ. ಮಿ. ಕನಕ ನರಸಿಂಹ, ಕೋಟೆ ಹನುಮಂತ, ವಿಠಲ ರುಕ್ಮಾಯಿಯ ಗುಡಿಗಳಿವೆ. ಸ್ವಾತಂತ್ರ್ಯ ವೀರ ಮುಂಡರಗಿ ಭೀಮರಾಯನ ಜನ್ಮಸ್ಥಳ.

## 219. ಕಿರೀಟ ಗಿರಿ :

ಗದಗ್ ತಾಲ್ಲೂಕಿನ ಒಂದು ಹಳ್ಳಿ. ಸೇವಕನಾಗಿದ್ದ ಬ್ರಾಹ್ಮಣನೊಬ್ಬ ದೇಸಾಯಿ ಪದವಿಗೆ ಬಂದಮೇಲೆ ರಾಘವೇಂದ್ರಸ್ವಾಮಿಗಳು ಮಾವಿನ ಹಣ್ಣಿನ ಸೀಕರಣೆಯಲ್ಲಿ ಬಿದ್ದು ಮೃತ ನಾಗಿದ್ದ ಅವರ ಮಗನನ್ನು ಬದುಕಿಸಿದ ಸ್ಥಳ. ಕಿರೀಟಗಿರಿ ಗ್ರಾಮ. ಆಗ ಸ್ವಾಮಿಗಳಿಗೆ ದಾನ ಮಾಡಿದ್ದ ಈಗಲೂ ಶ್ರೀಮಠದ ಜಹಗೀರಾಗಿ ಉಳಿದಿದೆ.

## 220. ಲಕ್ಕುಂಡಿ :

ಗದಗ್‌ನಿಂದ 12 ಕಿ.ಮಿ. ಇದು ಕನ್ನಡಕವಿ ರನ್ನನ ಆಶ್ರಯದಾತೆ ಅತ್ತಿಮಬ್ಬೆಯ ಊರು.

ಕಾಶಿವಿಶ್ವೇಶ್ವರ, ಮಲ್ಲಿಕಾರ್ಜುನ ವಿರೂಪಾಕ್ಷ ನಾರಾಯಣ ದೇವಾಲಯಗಳಿವೆ. ಇಲ್ಲಿ ಸೋಪಾನ ಬಾವಿಗಳು ಕಲಾತ್ಮಕವಾಗಿ ರಚಿತವಾಗಿವೆ.

## 221. ಬಿದರಹಳ್ಳಿ :

ಮುಂಡರಗಿಗೆ 30 ಕಿ. ಮಿ. ಗದಗ್ ಜಿಲ್ಲೆಯ ಮುಂಡರಗಿ ತಾಲ್ಲೂಕಿನ ತುಂಗಭದ್ರಾ ತೀರದಲ್ಲಿರುವ ಪುಣ್ಯಸ್ಥಳ. ಇದನ್ನು ವೇಣುಗ್ರಾಮವೆಂದು ಕರೆಯುತ್ತಿದ್ದರು. ಇಲ್ಲಿನ ಅಶ್ವತ್ಥವೃಕ್ಷದಲ್ಲಿ ಅಶ್ವತ್ಥ ನಾರಾಯಣನ ಸನ್ನಿಧಾನವಿದೆ. ವಾದಿರಾಜರು ಹೇಳಿರುವಂತೆ ಬಿದರಹಳ್ಳಿ ಅಶ್ವತ್ಥನಾರಾಯಣನ ದರ್ಶನದಿಂದ ಪುಷ್ಕರಾದಿ ಕ್ಷೇತ್ರಗಳ ದರ್ಶನದಿಂದ ಉಂಟಾಗುವ ಪುಣ್ಯವೇ ಉಂಟಾಗುವುದು. ಪುರುಷಸೂಕ್ತದಲ್ಲಿ ಹೇಳಿರುವಂತೆ ಈ ಅಶ್ವತ್ಥವೃಕ್ಷದ ಬೇರುಗಳಲ್ಲಿ ಶ್ರೀಮನ್‌ನಾರಾಯಣನ ಅನಂತ ಪಾದಗಳು ವೃಕ್ಷದ ಮಧ್ಯದಲ್ಲಿ ಶ್ರೀ ಹರಿಯ ಉದರವೂ, ಮರದ ತುದಿಯಲ್ಲಿ ಅನಂತ ಮುಖಗಳೂ, ಕೊಂಬೆಗಳ ತುದಿಯಲ್ಲಿ ಅಸಂಖ್ಯಾತ ಕೈಗಳು ಸನ್ನಿಹಿತವಾಗಿವೆ. ಶಿರೂರು ಮಠದ ಶ್ರೀ ಲಕ್ಷ್ಮಿಮನೋಹರ ತೀರ್ಥರು ಸುರಪುರದ ಶ್ರೀ ವೆಂಕಟೇಶಾಚಾರ್ಯರಿಗೆ ಆಶ್ರಮಕೊಟ್ಟು ಮಾಧವತೀರ್ಥರೆಂದು ಕರೆದು, ಶುಕ್ಲಯಜುರ್ವೇದ ಶಿಷ್ಯರಾಗಿ ಪ್ರತ್ಯೇಕ ಮಠವೊಂದನ್ನು ಸ್ಥಾಪಿಸಿದರಷ್ಟೆ. ಆ ಮಠದ ಯತಿಗಳಾಗಿದ್ದ ಶ್ರೀ ವಿದ್ಯಾಭೂಷಣ ತೀರ್ಥರ ಬೃಂದಾವನವು ಈ ಊರಿನಲ್ಲಿದೆ. ಇದು ಪ್ರಸಿದ್ಧ ಟಿಪ್ಪಣಿಕಾರರಾಗಿದ್ದ ಹಾಗೂ ಶ್ರೀ ಯಾದವಾರ್ಯರ ಶಿಷ್ಯರಾದ ಬಿದರಹಳ್ಳಿ ಶ್ರೀನಿವಾಸ ತೀರ್ಥರ ಕಾರ್ಯಕ್ಷೇತ್ರವೂ ಆಗಿತ್ತು.

# ಕೊಪ್ಪಳ ಜಿಲ್ಲೆ – ರಾಯಚೂರು ಜಿಲ್ಲೆ

## 222. ಮಾನ್ವಿ :

ಮಾನ್ವಿ ರಾಯಚೂರಿನಿಂದ 44 ಕಿ. ಮಿ. ಪುರಂದರ ದಾಸರಿಂದ ಪುನರುದ್ಧಿತವಾದ ಭಾಗವತ ಧರ್ಮಕ್ಕೆ ನವ ಚೈತನ್ಯವನ್ನು ಉಂಟುಮಾಡಿದ ಮಹಾಪುರುಷ ಜಗನ್ನಾಥ ದಾಸರು. ಜಗನ್ನಾಥ ದಾಸರ ಜನ್ಮಸ್ಥಳ ಮಾನ್ವಿ. ಗುರು ಜಗನ್ನಾಥ ದಾಸರ ತಂದೆ ನರಸಪ್ಪ, ತಾಯಿ ಲಕ್ಷ್ಮಕ್ಕ. ದಾಸರ ತಂದೆ ತಾಯಿಗಳಿಗೆ ಬಹುಕಾಲ ಮಕ್ಕಳಿರಲಿಲ್ಲ. ಇಭ ರಾಮಪುರದ ಅಪ್ಪಾರವರ ಅನುಗ್ರಹದಿಂದ ಸ್ವಾಮಿ ರಾಯನ ಜನನವಾಯಿತು. ಆ ಶಿಶು ಶ್ರೀಮಂತನ ಏಕಮಾತ್ರ ಪುತ್ರನಾಗಿದ್ದುದರಿಂದ ಆತನ ಉಪಟಳ ಅಸಾಧ್ಯವಾಯಿತು. ಆದರೆ ಒಮ್ಮೆ ಒಬ್ಬರು ಈತನ ಕಾರ್ಯವನ್ನು ಖಂಡಿಸಿ, ಬೇಸರದಿಂದ ಗದರಿಸಿದಾಗ ಅವರ ಮನಪರಿವರ್ತನೆ ಯಾಯಿತು. ಕಲಿಯಬೇಕೆಂಬ ಬಯಕೆ ಚಿಗುರೊಡೆದು, ಜ್ಞಾನದಾಹ ಹೆಚ್ಚಾಯಿತು. ಸೋದರ ಮಾವನ ಬಳಿ ವಿದ್ಯಾಭ್ಯಾಸಮಾಡಲು ತಕ್ಷಣವೇ ಕಲ್ಲೂರಿಗೆ ಹೋದಾಗ ಅವರಲಿಲ್ಲದ್ದಿದ್ದುದ ರಿಂದ ವೇಳೆ ವ್ಯಯಮಾಡದೆ ವಾಯು ದೇವರನ್ನು ಒಲಿಸಿಕೊಳ್ಳಲು ಕಠಿಣವಾದ ಸೇವೆ ಮಾಡ ಲಾರಂಭಿಸಿದರು. ಸುಪ್ರೀತರಾದ ಪ್ರಾಣ ದೇವರು ಆ ಬಾಲಕನ ನಾಲಿಗೆಯ ಮೇಲೆ ಬೀಜಾಕ್ಷರ ಬರೆದರು. ಮತ್ತು ಮಂತ್ರಾಲಯ ಪ್ರಭುಗಳಿಂದ ಜ್ಞಾನಾರ್ಜನೆಯಾಗುವುದೆಂದು ಸೂಚಿಸಿದರು. ಮಂತ್ರಾಲಯ ಪ್ರಭುಗಳಿಗೆ ಉದಯ ರಾಗ ಹಾಡಿ, ನಿರಂತರ ಗುರುಸೇವೆ ಮಾಡಿ ರಾಯರ ಅನುಗ್ರಹಕ್ಕೆ ಪಾತ್ರರಾದರು. ಅವರು ವರಕವಿಯಾದರು. ಮಹಾ ಜ್ಞಾನಿಯಾದರು. ಕೋಶಗಿ ಆಚಾರ್ಯರೆಂದು ಕರೆಯಲ್ಪಟ್ಟರು.

ಇವರು ತಮ್ಮ ಸ್ವಪ್ನದಲ್ಲಿ ಗೋಪಾಲದಾಸರಿಂದ 'ಗುರು ಜಗನ್ನಾಥವಿಠಲ'ನೆಂಬ ಅಂಕಿತ ಪಡೆದು ಅಪರೋಕ್ಷ ಜ್ಞಾನಿಗಳಾದರು. ನಂತರ ದೇಶಪರ್ಯಾಟನ ಮಾಡುತ್ತಾ ಸೋದೆ, ತಿರುಪತಿ, ಕರ್ಜಗಿ, ಸವಣೂರು, ಬೇಲೂರು, ಮೇಲುಕೋಟೆ, ಶ್ರೀರಂಗಪಟ್ಟಣ, ಮೈಸೂರು, ಈ ಸ್ಥಳಗಳಿಗೆಲ್ಲಾ ಹೋದರು ಮತ್ತು ಕೃತಿಗಳನ್ನು ರಚಿಸುತ್ತಾ ಹೋದರು. ಅವರ ಪ್ರಥಮ ಕೀರ್ತನವು ಚೀಕಲ ಪರವಿಯಲ್ಲಿ ವಿಜಯದಾಸರ ಸನ್ನಿಧಿಯಲ್ಲಾಯಿತು. ಅವರು ರಚಿಸಿದ ಮೇರುಕೃತಿ ಹರಿಕಥಾಮೃತಸಾರ. ಶಿಷ್ಯ ಸಂಪತ್ತನ್ನೂ ಸಂಪಾದಿಸಿದರು. ಇವರ ಬಳಿ 60 ಜನ ಶಿಷ್ಯರಿದ್ದರೆಂದು ಹೇಳುತ್ತಾರೆ. ಹೀಗೆ ಶ್ರೀ ಜಗನ್ನಾಥ ದಾಸರು ಹರಿ ಗುರುಗಳ ಬಲದಿಂದ ಭಕ್ತರ ಅಜ್ಞಾನಾಂಧಕಾರವನ್ನು ನಿವಾರಿಸಿ ಜ್ಞಾನದೀಪ ಬೆಳಗಿಸಿದರು. ಅವರು 81 ವರ್ಷದ ತುಂಬು ಜೀವನ ನಡೆಸಿ ಭಾದ್ರಪದ ಶುದ್ಧ ನವಮಿ ಭಾನುವಾರದಂದು ಶ್ರೀ ಹರಿಯನ್ನು

ಸ್ಮರಿಸುತ್ತಾ ತಮ್ಮ ಪಾರ್ಥಿವ ಶರೀರವನ್ನು ತ್ಯಜಿಸಿದರು. ಜಗನ್ನಾಥದಾಸರು ವಾಸ ಮಾಡುತ್ತಿದ್ದ ಮನೆ ಈಗ ದಾಸರ ದೇವಾಲಯವಾಗಿದೆ. ಯಾವ ಸ್ಥಳದಲ್ಲಿ ಗ್ರಂಥರಚನೆಗೆ ಕೂರುತ್ತಿದ್ದರೋ ಆ ಸ್ಥಳವನ್ನು ದಾಸರ ಸನ್ನಿಧಾನವೆಂದು ಮುಖವಾಡವಿಟ್ಟು ಪೂಜಿಸುತ್ತಿದ್ದಾರೆ. ಅವರು ಕೂರುತ್ತಿದ್ದ ಸ್ಥಳ ದಾಸರ ಕಂಭವೆಂದು ಪ್ರಸಿದ್ಧವಾಗಿದೆ. ಅವರು ನುಡಿಸುತ್ತಿದ್ದ ತಾಳ, ತಂಭೂರಿ, ದೇವರ ಪ್ರತಿಮೆಗಳು, ಸಾಲಿಗ್ರಾಮ, ಮೈಸೂರು ಅರಸರ ಮನೆತನದವರು ಕೊಟ್ಟ ಮೇನೆ ಬದಿಯಲ್ಲಿರುವ ಪೂಜಕರ ಮನೆಯಲ್ಲಿದೆ. ಕೋಸಗಿಮುತ್ಯನೆಂದು ಕರೆಯಲ್ಪಡುವ ಇವರನ್ನು ಭಜಿಸಿದರೆ ಭವದ ಕತ್ತಲೆ ನಾಶವಾಗುವುದೆಂದು ಅವರ ಶಿಷ್ಯರಾದ ಶ್ಯಾಮಸುಂದರದಾಸರು ಅಂದರೆ ಮಾನ್ವಿ ಗುಂಡಾ ಚಾರ್ಯರು ಅವರ ಗುರುಗಳ ಮಹಿಮೆಯನ್ನು ಹೊಗಳಿದ್ದಾರೆ. ಅವರ ಆರಾಧನೆ ಪ್ರತಿ ಭಾದ್ರಪದ ಶುದ್ಧ ನವಮಿ.

## 223. ಕಲ್ಲೂರು :

ಮಾನ್ವಿಯಿಂದ 17 ಕಿ. ಮಿ. ಆದಿಲ್‌ಷಹಾನ ಕಾಲದಲ್ಲಿ ವಿಜಾಪುರದ ಲಕ್ಷ್ಮೀಕಾಂತಾಚಾರ್ಯರೆಂಬ ವಿದ್ವಾಂಸರಿದ್ದರು. ಅವರ ಕುಲದೇವತೆ ಕೊಲ್ಲಾಪುರದ ಮಹಾಲಕ್ಷ್ಮಿ. ಕಲ್ಲೂರಿನಲ್ಲಿ ನೆಲೆಯಾಗಿದ್ದರು. ವಯಸ್ಸಾದಾಗ (88 ವರ್ಷ) ಕೊಲ್ಲಾಪುರದಂಥಹ ದೂರದ ಪ್ರಯಾಣದ ಬಗ್ಗೆ ಚಿಂತಿಸತೊಡಗಿದರು. ಆಗ ಬೆಳಗಿನ ಜಾವದ ಸ್ವಪ್ನದಲ್ಲಿ ಲಕ್ಷ್ಮೀದೇವಿಯು ದೂರದ ಊರಾದ ಕೊಲ್ಲಾಪುರಕ್ಕೆ ಪ್ರಯಾಸಪಟ್ಟು ಬರಬಾರದೆಂತಲೂ ನಾನೇ ಆ ಕಾರಣ ನಿಮ್ಮಲ್ಲೇ ನೆಲಸುತ್ತೇನೆ ಎಂದು ಹೇಳಿದಂತಾಯಿತು. ಅದರಂತೆ ಬೆಳಿಗ್ಗೆ ಸಾಣೇಕಲ್ಲು ತೇಯಲು ಎತ್ತಿದಾಗ ಅದರ ಮೇಲೆ ದೇವಿಯ ಸಾಕ್ಷಾತ್ ರೂಪಮೂಡಿತ್ತು. ಆ ಸಾಣೇಕಲ್ಲಿನ ಮೇಲೆ ಮೂಡಿದ ಮಹಾಲಕ್ಷ್ಮಿಯನ್ನು ಕಲ್ಲೂರಿನಲ್ಲಿ ದರ್ಶನಮಾಡಬಹುದು. ಮಮದಾಪುರದ ಹೊಲದಲ್ಲಿ ಶ್ರೀ ವೆಂಕಟೇಶ್ವರನ ವಿಗ್ರಹ ಸಿಕ್ಕಿ, ಅದೂ ಕೂಡ ಲಕ್ಷ್ಮಿಯ ಬಲಪಕ್ಕದಲ್ಲಿ ಸ್ಥಾಪನೆಯಾಗಿದೆ. ಇಲ್ಲಿ ಭಕ್ತಾದಿಗಳು ಜೋಡು ತೆಂಗಿನಕಾಯಿ ಸಮರ್ಪಿಸಿ, ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ದೇವಿಯ ಪೂಜೆ ನೆರವೇರಿಸಿ ಅವಳ ಅನುಗ್ರಹ ಪಡೆಯುತ್ತಿದ್ದಾರೆ. ಲಕ್ಷ್ಮೀಕಾಂತಾಚಾರ್ಯರ ವಂಶಸ್ಥರೇ ಇಂದಿಗೂ ಅಲ್ಲಿ ಪೂಜೆ ಮಾಡುವವರು. ಈ ವಂಶದ ಪೂರ್ವಜರೇ ಪ್ರಾತಃ ಸ್ಮರಣೀಯರಾದ ಶ್ರೀ ಉತ್ತರಾಧಿಮಠಾಧೀಶರಾಗಿದ್ದ ಶ್ರೀ ಸತ್ಯಜ್ಞಾನ ತೀರ್ಥರು.

ಈ ಸ್ಥಳದಲ್ಲಿ ಮಾರ್ಕಂಡೇಶ್ವರ, ಭಾರಿಪ್ರಮಾಣದ ಗರುಡ ಗಂಬ, ಮತ್ತು ಸುಂದರವಾಗಿ ಕಟ್ಟಿದ ಭಾವಿಗಳನ್ನು ಕಾಣಬಹುದು. Phone 52701 / 08538

## 224. ಚೀಕಲ ಪರವಿ :

ಮಾನ್ವಿಯಿಂದ 12 ಕಿ. ಮಿ. ವಿಜಯದಾಸರು 1682 ರಲ್ಲಿ ತುಂಗ ಭದ್ರೆಯ ದಡದಲ್ಲಿರುವ ಚೀಕಲ ಪರವಿಯಲ್ಲಿ ಜನ್ಮವೆತ್ತಿದರು. ಇವರ ಮೊದಲ ದಾಸಪ್ಪ. ಶ್ರೀನಿವಾಸಪ್ಪ ಕೂಸಮ್ಮ ದಂಪತಿಗಳ ಪ್ರೇಮದ ಪುತ್ರನಾದರೂ ಬಡನತದ ದೆಸೆಯಿಂದ ಕೂಸಿ ಮಗ ದಾಸನಾಗಿ ಕಾಣಿಸುತ್ತಿದ್ದರು, ಸಾಂಸಾರಿಕ ಕ್ಲೇಶಗಳಿಂದ ಮನನೊಂದರು.

20 ವರ್ಷಗಳ ಅಲೆದಾಟ, ಜಂಜಾಟ ಅವಮಾನಗಳ ನಂತರ ಹಿಂದಿರುಗಿದ ಮೇಲೆ ಅರಳಮ್ಮನ ಜೊತೆ ಮದುವೆಯಾದರು. 16 ವರ್ಷ ಸಂಸಾರ ಮಾಡಿದ ನಂತರ 34 ನೆ ವಯಸ್ಸಿನಲ್ಲಿ ದ್ವಿತೀಯ ಕಾಶೀಯಾತ್ರೆಗೆ ಹೋದರು. ಒಂದು ರಾತ್ರಿ ಸ್ವಪ್ನದಲ್ಲಿ ಶ್ರೀ ಹರಿ ಪುರಂದರ ದಾಸರ ರೂಪದಿಂದ ಅವರನ್ನು ಗಂಗೆಯ ಆಚೆ ಇರುವ ವ್ಯಾಸಕಾಶಿಗೆ ಕರೆದುಕೊಂಡು ಹೋಗಿ, ಅಲ್ಲಿ ವ್ಯಾಸದರ್ಶನ ಮಾಡಿ ಅತನ ನಾಲಿಗೆಯ ಮೇಲೆ 'ವಿಜಯ ವಿಠಲ' ಎಂಬ ಬೀಜಾಕ್ಷರಗಳನ್ನು ಬರೆದು, ಅಂಕಿತ ದಾನ ಮಾಡಿದರು: ಆ ನಿಮಿಷದಿಂದ ದಾಸಪ್ಪನ ದೃಷ್ಠಿಯೇ ಬದಲಾಯಿಸಿತು. ಆಡಿದ ಮಾತು ಹಾಡಾಯಿತು. ಅಂದಿನಿಂದ ವಿಜಯ ದಾಸ ರಾದರು. ಅವರನ್ನು ಸೇವಿಸುವ, ವಂದಿಸುವ, ಸಾಮಾನ್ಯ ಜನರಲ್ಲದೆ, ಕಾಶಿಮಹಾರಾಜನೇ ಮೇನೆ, ಪಲ್ಲಕ್ಕಿ ಮತ್ತು ವಸ್ತ್ರಗಳನ್ನು ತಂದೊಪ್ಪಿಸಿದನು. ಇವರು ಹೀಗೆ ಸಿದ್ಧಪುರುಷರಾದರು. ವಿಜಯ ದಾಸರು ಭೃಗುಮುನಿಗಳ ಅವತಾರವೆಂದು ಅನೇಕ ಹರಿದಾಸರು ನಂಬಿದ್ದಾರೆ. ಅವರ ಜನ್ಮಸ್ಥಳ ಚೀಕಲಪರವಿಯಲ್ಲಿ ಶ್ರೀಪಾದರಾಜರು ಪ್ರತಿಷ್ಠಿಸಿದ ಅಶ್ವತ್ಥವಿದೆ. (ಬ್ರಹ್ಮಾಶ್ವತ್ಥ, ವಿದುರಾಶ್ವತ್ಥವಿದ್ದಂತೆ) ಇದನ್ನು ಪ್ರತಿಷ್ಠಿತ ನರಸಿಂಹಕ್ಷೇತ್ರವೆನ್ನುವರು. ಅಲ್ಲಿರುವ ದೊಡ್ಡ ಕಟ್ಟೆಗೆ ವಿಜಯ ದಾಸರ ಕಟ್ಟೆ ಎಂದು ಹೆಸರಾಗಿದೆ. ಅವರು ವಾಸಿಸುತ್ತಿದ್ದ ಮನೆ, ಕುಳಿತುಕೊಳ್ಳುತ್ತಿದ್ದ ಸ್ಥಳ, ಅವರು ಕಾಶಿಯಿಂದ ತಂದ ಬೀಸುವಕಲ್ಲು, ಗೋಪಾಳ ಬುಟ್ಟಿ, ಮತ್ತು ಕಾಲಿನ ಗೆಜ್ಜೆ, ಇವುಗಳನ್ನು ಅಲ್ಲಿ ಈಗಲೂ ನೋಡಬಹುದು. 73 ವರ್ಷಗಳ ಸಾರ್ಥಕ ಜೀವನ ನಡೆಸಿದ ಇವರು ಗುಂತಕಲ್ಲಿನ ಬಳಿಯ ಚಿಪ್ಪಗಿರಿಯಲ್ಲಿ 1755 ರಲ್ಲಿ ಹರಿಪದವನ್ನೈದಿದರು.

## 225. ಗಬ್ಬೂರು :

ದೇವದುರ್ಗ ತಾಲ್ಲೂಕು, ಇಲ್ಲಿ ಪ್ರಸಿದ್ಧ ವೆಂಕಟೇಶ್ವರ ದೇವಾಲಯವಿದೆ. ಹೊರ ಗೋಡೆಗಳ ಮೇಲೆ ದೇವತೆಗಳ, ಪ್ರಾಣಿಗಳ ಚಿತ್ರಣವಿದ್ದು ಬಲು ಸೊಗಸಾಗಿದೆ. ಸಾತ್‌ಬಾವಡಿ ಎಂಬ ಕಲ್ಯಾಣಿಯ ನೋಟ, ರಚನೆ ಅದ್ಭುತ.

## 226. ಗಾಣದಾಳು :

ರಾಯಚೂರಿನಿಂದ 20 ಕಿ. ಮಿ. ಇಲ್ಲಿ ರಾಘವೇಂದ್ರರು ತಪಸ್ಸುಮಾಡುತ್ತಿದ್ದ ಗುಹೆ ಇದೆ. ಮತ್ತು ಪಂಚಮುಖಿ ಆಂಜನೇಯನ ವಿಗ್ರಹವಿದೆ.

## 227. ನಾರದ ಗೆಡ್ಡೆ :

ರಾಯಚೂರಿಗೆ ವಾಯುವ್ಯದಲ್ಲಿ 18 ಕಿ. ಮಿ. ದೂರದಲ್ಲಿದೆ. ಇಲ್ಲಿ ಭೀಮಾನದಿ ಕೃಷ್ಣಾ ವನ್ನು ಸೇರುವುದು. ಕೃಷ್ಣಾನದಿಯಲ್ಲಿ ದ್ವೀಪದಂತಿರುವ ಕೆಲವು ಸ್ಥಾನಗಳಿವೆ. ಅದರಲ್ಲಿ ಒಂದು ನಾರದಗೆಡ್ಡೆ. ಇದನ್ನು ತಲುಪಲು ಮೂರು ಮಾರ್ಗಗಳಿವೆ. ಕೃಷ್ಣಾ ರೈಲು ನಿಲ್ದಾಣ ದಿಂದ, ರಾಯಚೂರಿನಿಂದ ಹಾಗೂ ಹೈದರಾಬಾದಿನಿಂದ. ಬೆಂಗಳೂರು ರೈಲು ಮಾರ್ಗದಲ್ಲಿ ದೇವರ ಕದ್ರಾ ರೈಲು ನಿಲ್ದಾಣದ ಮಕ್ತಲ್ ಮೂಲಕ ನದಿದಾಟಿ ಹೋಗಬೇಕು. ಇದು ನಾರದ ತಪಗೈದ ಸ್ಥಾನ.

## 228. ಕೊಪ್ಪರ :

ದೇವದುರ್ಗ ತಾಲ್ಲೂಕು, ರಾಯಚೂರು - ದೇವದುರ್ಗ 55 ಕಿ. ಮಿ. ದೇವದುರ್ಗದಿಂದ – ಕೊಪ್ಪರ 12 ಕಿ. ಮಿ. ಕಾರ್ಪರ ಕ್ಷೇತ್ರವೆಂದು ಕರೆಯಲ್ಪಡುವ ಈ ಸ್ಥಳವು ಪುರಾಣದಲ್ಲಿ ಕಾರ್ಪರ ಎಂಬ ಋಷಿಗಳು ಕೃತಯುಗದಲ್ಲಿ ಈ ನೆಲದಲ್ಲಿ ತಪಸ್ಸು ಮಾಡಿದರೆಂದು ಹೇಳಲ್ಪಟ್ಟಿದೆ. ಇಲ್ಲಿ ಭಗವಂತ ತಾನು ಪ್ರಕಟವಾದ ಮೂಲರೂಪದಲ್ಲಿ ವಾಸಿಸದೆ, ಅಶ್ವತ್ಥ ವೃಕ್ಷದ ರೂಪದಲ್ಲಿ ನೆಲೆಸಿದ್ದಾನೆ.

ಸ್ಥಳಪುರಾಣದಂತೆ, ಮೂಲ ಅರ್ಚಕರಾದ ನಾರಪ್ಪಯ್ಯ ಎಂಬುವರು ತಿರುಪತಿಗೆ ಹೋಗಿ ಬೆಟ್ಟ ಹತ್ತಿ ಸ್ವಾಮಿಯ ದರ್ಶನ ಮಾಡಲು ನಿರ್ಧರಿಸಿದಾಗ ಶ್ರೀನಿವಾಸದೇವರು ಒಪ್ಪದೆ ಯಾವ ಕಾರಣಕ್ಕೂ ಬೆಟ್ಟ ಹತ್ತಕೂಡದು ಎಂದು ಕಟ್ಟಾಜ್ಞೆ ಮಾಡಿ ಕಾರ್ಪರಕ್ಷೇತ್ರದಲ್ಲಿ ಶ್ರೀ ದೇವಿ ಭೂದೇವಿ ಸಹಿತ ಸುಂದರವಾದ ಗುಂಡಿನ ಮೇಲೆ ಒಡಮೂಡಿದ್ದಾರೆ. ಇದನ್ನು ಗುಂಡಿನ ತಿಮ್ಮಪ್ಪನೆಂದು ಕರೆಯುವರು. ಇದು ಮೊದಲು ಕುರ್ಕಿಹಳ್ಳಿ ಬಳಿ ಇದ್ದು ನಂತರ ನದಿಯ ದಂಡೆಯ ಅಶ್ವತ್ಥ ವೃಕ್ಷದ ಬಳಿಯಲ್ಲಿ ಸ್ಥಾಪನೆಯಾಗಿದೆ.

ಈ ಪ್ರದೇಶದ ಗೋಪಾಲಕರಿಗೆ ಭಯವುಂಟಾದಾಗ ಇದರ ನಿವಾರಣೆಗೆ ನಾರಪ್ಪಯ್ಯನವರು ಅಂಗಾರದಿಂದ ಹನುಮಪ್ಪನನ್ನು ಚಿತ್ರಿಸಿದರಂತೆ. ಅಲ್ಲಿ ಅಂಗಾರದಿಂದ ಚಿತ್ರಿಸಿದ ಹನುಮಪ್ಪ ಒಡಮೂಡಿರುವರು. ಅದನ್ನು ಇಂದಿಗೂ ಹಟ್ಟಿ ಹನುಮಪ್ಪನೆನ್ನುವರು. ಇದೂ ಕೂಡ ತುಂಬಾ ಪೂಜಾರ್ಹವಾದ ಸ್ಥಳ.

ಆ ಸ್ಥಳದಲ್ಲಿ ಕಾರ್ಪರ ಋಷಿಗಳು ಲಿಂಗರೂಪದಲ್ಲಿ ಲೀನವಾದರು. ಈ ಲಿಂಗ ಆ ದಂಡೆಯ ಮೇಲಿದ್ದು ಮತ್ತೊಂದು ಪವಿತ್ರ ಸ್ಥಳವೆನಿಸಿದೆ. ಇಲ್ಲಿ ಬಿಜಾಪುರದ ಆದಿಲ್‌ಷಾ ಬಾದ್‌ಷಹ ಮಂದಿರ, ಮತ್ತು ಕಟ್ಟೆಗಳನ್ನು ನಿರ್ಮಿಸಿದನು.

ಇಲ್ಲಿರುವ ಮೂಲ ಅಶ್ವತ್ಥ ವೃಕ್ಷವು ಪುರಾಣಕಾಲದಿಂದಲೂ ಅತ್ಯಂತ ಪ್ರಾಚೀನವಾಗಿದ್ದು ದಿನನಿತ್ಯ ಅದರಿಂದ ಟೊಂಗೆಗಳು ಬೀಳಲಾರಂಭಿಸಿದುವಂತೆ. ವಿಚಿತ್ರವೆಂದರೆ ಅದರಿಂದ ನರಸಿಂಹದೇವರ ಸಾಲಿಗ್ರಾಮಗಳು ಉದುರ ತೊಡಗಿದುವಂತೆ. ನಂತರ ಮೂಲವೃಕ್ಷದಲ್ಲಿರುವ ಅಗ್ನಿಯೇ ಜ್ವಾಲಾಗ್ನಿಯಂತೆ ಸ್ಫೋಟವಾಗಿ ಶೋಡಷ ಬಾಹುನರಸಿಂಹ ದೇವರ ಸಾಲಿಗ್ರಾಮ ಉದ್ಭವವಾಯಿತು. ಇದೇ ಸಾಲಿಗ್ರಾಮ ಶಿಲೆಯಲ್ಲಿ ಸ್ವಯಂವ್ಯಕ್ತವಾದ ಶೋಡಷ ಬಾಹು ನರಸಿಂಹದೇವರು. ಇದನ್ನು ಎರಡನೇ ವೃಕ್ಷದ ಮುಂಭಾಗದಲ್ಲಿ ಪ್ರತಿಷ್ಠಾಪಿಸಿದ್ದಾರೆ.

ಈ ಪವಿತ್ರ ಕ್ಷೇತ್ರದಲ್ಲಿ ಶ್ರೀ ವೇದವ್ಯಾಸದೇವರನ್ನು ಕೂರ್ಮರೂಪದಲ್ಲಿ ಪಡೆದ ಉತ್ತರಾಧಿಮಠದ ಶ್ರೀ ರಘುನಾಥ ತೀರ್ಥರು ಕೆಲಕಾಲ ನೆಲೆಸಿದ್ದರು.

ಅವರು ಇಲ್ಲಿದ್ದಾಗ ವಿಭುದೇಂದ್ರ ತೀರ್ಥ, ಶ್ರೀಪಾದರಾಯರು, ಬ್ರಹ್ಮಣ್ಯತೀರ್ಥರು, ಶ್ರೀ ವ್ಯಾಸರಾಯರು, ಹಾಗೂ ಶ್ರೀ ವಿಜಯಧ್ವಜ ತೀರ್ಥರೂ ಕೂಡಿ ಹೀಗೆ ಐದು ಯತಿಗಳ ಸಮಾಗಮವಾಗಿತ್ತೆಂದು ತಿಳಿದುಬರುತ್ತದೆ. ಇದಲ್ಲದೇ ರಾಯರ ಮಠದ ವಿಭುದೇಂದ್ರ ತೀರ್ಥರು ಲಕ್ಷ್ಮೀನಾರಾಯಣ ಯೋಗಿಗಳೊಂದಿಗೆ ಸಂಚಾರಮಾಡುತ್ತಾ ಇದೇ ಕ್ಷೇತ್ರದಲ್ಲಿ ಚಾತುರ್ಮಾಸ ಸಂಕಲ್ಪಕ್ಕೆ ಕುಳಿತ ಐತಿಹ್ಯವಿದೆ.

## 229. ಮೊದಲ ಕಲ್ಲು (ಮೊಸರು ಕಲ್ಲು) :

ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕು, ಆದಿಶಿಲೆಯೆಂಬ ಹೆಸರೂ ಇದಕ್ಕೆ ಉಂಟು. ಇದು ದೇವದುರ್ಗದ ಬಳಿಯ ಒಂದು ಚಿಕ್ಕ ಹಳ್ಳಿ. ಭಕ್ತಿಯಲ್ಲಿ ಭಾಗಣ್ಣ ಎಂದು ಹೆಸರು ಪಡೆದ ಗೋಪಾಲದಾಸರ ಜನ್ಮಸ್ಥಳ (1721). ಅವರು ಕೆಲಕಾಲ ಗದ್ವಾಲ್ ಸಂಸ್ಥಾನ ದಲ್ಲಿನ ಸಂಕಾಪುರದಲ್ಲಿದ್ದು ನಂತರ ಉತ್ತನೂರಿಗೆ ಬಂದು ಸ್ವಲ್ಪ ಕಾಲ ವಾಸಮಾಡಿದರು. ಅಲ್ಲಿದ್ದಾಗ ಅಲ್ಲಿ ಕೋಟಿ ಗಾಯತ್ರಿ ಪುನಶ್ಚರಣೆಯಿಂದ ವಾಕ್‌ಶುದ್ಧಿ ಸಿದ್ಧಿಗಳನ್ನು ಗಳಿಸಿದರು. ಜಗನ್ನಾಥ ದಾಸರಾಗಿದ್ದ ಪೂರ್ವದಲ್ಲಿ ಮಾನ್ವಿ ನರಸಿಂಹಾ ಚಾರ್ಯರಿಗೆ ಬಂದಿದ್ದ ಉದರ ಶೂಲೆಯನ್ನು ಪರಿಹರಿಸಿ ತಿರುಪತಿಯಲ್ಲಿ ಮತ್ತೆ ತಮ್ಮ ಆಯಸ್ಸಿನ 40 ವರ್ಷಗಳನ್ನು ಅವರಿಗೆ ದಾನಮಾಡಿದರು. ಇವರು ಚಿತ್ರಲೇಖನದಲ್ಲಿ ಚತುರರು. ಬ್ರಹ್ಮಾಂಡದ ಚಿತ್ರಣ ಅವರ ಅದ್ಭುತ ರಚನೆಗಳಲ್ಲಿ ಒಂದು. ಅದು ಇವರ ವಂಶೀಕರ ರಕ್ಷಣೆಯಲ್ಲಿದೆ ಎಂದು ಹೇಳುವರು. ಅವರ ಶಿಷ್ಯರಲ್ಲಿ ಹೆಳವನ ಕಟ್ಟೆ ಗಿರಿಜಮ್ಮ ಮತ್ತು ಶೇಷದಾಸರು ಮುಖ್ಯರು. ಉತ್ತನೂರಿ ನಲ್ಲಿ ಇವರು 1765ರಲ್ಲಿ ಶ್ರೀ ವಿಠಲನನ್ನು ಸೇರಿದರು.

ತುಂಗ ಭದ್ರಾ ಕೃಷ್ಣಾನದಿಗಳ ಸಂಗಮ ಭೂಮಿ. ಮೊದಲ ಕಲ್ಲು ಶೇಷದಾಸರ ತಪೋ ಭೂಮಿಯೂ ಅಹುದು. ದರೂರಿನಲ್ಲಿ ಜನ್ಮವೆತ್ತಿದ ಶ್ರೀ ಶೇಷದಾಸರು ಇಲ್ಲಿಗೆ ಬಂದು ಕೆಲ ಕಾಲ ಇದ್ದು, ತಪಸ್ಸನ್ನಾಚರಿಸಿ, ಹೆಸರಾದವರು. ರುದ್ರಾನುಗ್ರಹದಿಂದ ಬಿಂಬ ಪರೋಕ್ಷ ವಾಗುವುದು ಎಂದು ಹೇಳಿದ ವಿಜಯ ದಾಸರ ಆಜ್ಞಾನುಸಾರ ಇಲ್ಲಿನ ಪುರಾತನ ಶಿವ ದೇವಾಲಯದಲ್ಲಿ ಮಹಾದೇವನನ್ನು ಕುರಿತು ತಪಸ್ಸನ್ನಾಚರಿಸಿದರು. ಇವರು ವಾಸ ಮಾಡು ತ್ತಿದ್ದ ಸ್ಥಳದಲ್ಲಿ ಈಗ ಶಿಲಾಮಂದಿರವೊಂದು ನಿರ್ಮಾಣವಾಗಿದೆ. ಏಕಾಂತದಲ್ಲಿ ಕೂಡಲು ಅನುಕೂಲವಾಗಿರುವಂತೆ ಮಂಟಪದ ಮೇಲುಭಾಗದಲ್ಲಿ ಒಂದು ಕೋಣೆ ರಚಿತವಾಗಿದೆ. ಈ ಊರಿಗೆ ಒಂದು ಮೈಲು ದೂರದಲ್ಲಿ ಗುಡ್ಡವೊಂದರ ಮೇಲೆ ಸ್ವಯಂವ್ಯಕ್ತ ಶ್ರೀನಿವಾಸ ದೇವಾಲಯವಿದೆ. ಇಲ್ಲಿ ಸ್ವಾಮಿ ಪುಷ್ಕರಿಣಿ ತೀರ್ಥಕೊಳವೂ ಉಂಟು.

## 230. ವೇಣೀ ಸೋಮಪುರ :

ರಾಯಚೂರು ಬಳಿ. ಗೋಪಾಲ ದಾಸರ ಊರಾದ ಮೊಸರುಕಲ್ಲಿನ ಸಮೀಪವಿದೆ. ರಾಘವೇಂದ್ರ ಮಠದ ಭುವನೇಂದ್ರ ತೀರ್ಥರಿಂದ ಆಶ್ರಮ ಪಡೆದ ಇವರನ್ನು ವಿಜಿ ಸ್ವಾಮಿಗಳೆಂದು ಕರೆಯುತ್ತಿದ್ದರು. ಇವರು ಚಿಂತಲವೇಲಿ ಪ್ರಾಣದೇವರನ್ನು 12 ವರ್ಷ ಸೇವಿಸಿದ ಇವರು ಪೀಠವನ್ನೇನೂ ಆಳದೆ ವಿಭುದೇಂದ್ರ ತೀರ್ಥರಿಗೆ ಸ್ವಪ್ನ ಲಬ್ಧವಾದ ಷೋಡಷ ಬಾಹು ಶ್ರೀ ನರಸಿಂಹ ದೇವರನ್ನಷ್ಟೆ ಪೂಜಿಸುತ್ತಿದ್ದರು. ಇವರು ವಾಸುದೇವ ವಿಠಲ ಎಂಬ ಅಂಕಿತದಿಂದ ನೂರಾರು ಕೃತಿಗಳನ್ನು ರಚಿಸಿದ್ದಾರೆ. ಮಾದನೂರು ವಿಷ್ಣುತೀರ್ಥರು ಇವರ ವಿದ್ಯಾಶಿಷ್ಯರು. ಇಲ್ಲಿ ಅವರು ಸ್ಥಾಪಿಸಿದ ಶ್ರೀಕೃಷ್ಣನಿದ್ದಾನೆ. ಇವರು ವ್ಯಾಸ ತತ್ವಜ್ಞ ತೀರ್ಥರೆಂಬುದಾಗಿ ಕರೆಸಿಕೊಂಡಿದ್ದರು. ಇವರ ಬೃಂದಾವನ ಇಲ್ಲಿದೆ.

## 231. ಚಿತ್ತಾಪುರ (ನವಲಿ) :

ಲಿಂಗಸುಗೂರು ತಾಲ್ಲೂಕು, ಉತ್ತರಾಧಿಮಠದ ಸ್ವಾಮಿಗಳಾದ ಶ್ರೀ ಸತ್ಯಪರಾಕ್ರಮ ತೀರ್ಥರ ಬೃಂದಾವನವಿದೆ. ಇವರ ಆರಾಧನೆ ಆಶ್ವೀಜ ಶುದ್ಧ ಅಷ್ಟಮಿ.

## 232. ಕುಷ್ಟಗಿ :

ಹೊಸಪೇಟೆ-ಕುಷ್ಟಗಿ ರಸ್ತೆ, N.H. 13 ಹೆದ್ದಾರಿಯಲ್ಲಿದೆ. ಕೊಪ್ಪಳ ಜಿಲ್ಲೆ. ಪ್ರಾಣದೇವರ ಗುಡಿಇದೆ.

## 233. ಇಟಗಿ :

ಬನ್ನಿಕೊಪ್ಪ ರೈಲುನಿಲ್ದಾಣದಿಂದ ದಕ್ಷಿಣಕ್ಕೆ 5 ಕಿ.ಮಿ. ಕಲ್ಯಾಣಿಚಾಲುಕ್ಯರ ಆರನೇ ವಿಕ್ರಮಾದಿತ್ಯನ ಮಹಾದೇವ ದಂಡನಾಯಕನಿಂದ ಮಹಾದೇವ ಮಂದಿರವೆಂಬ ಅದ್ಭುತ ದೇವಾಲಯದ ರಚನೆಯಾಗಿದೆ. (1112) ಇದನ್ನು ದೇವಾಲಯಗಳ ಚಕ್ರವರ್ತಿ ಎನ್ನುವರು. ನವರಂಗದಲ್ಲಿ 68 ಕಂಬಗಳಿವೆ. ಹಳೇ ಬೀಡು ದೇವಾಲಯ ಬಿಟ್ಟರೆ ಇದೇ ಅತ್ಯಂತ ಸುಂದರ ದೇವಾಲಯ.

## 234. ಕನಕಗಿರಿ :

ಗಂಗಾವತಿ ತಾಲ್ಲೂಕು ಗಂಗಾವತಿ - ಲಿಂಗ ಸೂಗೂರು ರಸ್ತೆ, ಗಂಗಾವತಿಗೆ 25 ಕಿ. ಮಿ. 374 ಕಿ. ಮಿ. ಬೆಂಗಳೂರು. ಇದು ಕನಕನೆಂಬ ಋಷಿ ತಪಸ್ಸುಮಾಡಿದ ಸ್ಥಳ. ಕನಕಾಚಲ ಸ್ವಾಮಿಯ ದೇವಾಲಯದ ವಾಸ್ತುಶಿಲ್ಪ ರಚನೆ ಅದ್ಭುತ. ಲಕ್ಷ್ಮೀನರಸಿಂಹ ಸ್ವಾಮಿಯ ಗುಡಿ ಮತ್ತೊಂದು. ವೆಂಕಟಪ್ಪನಾಯಕನ ಭಾವಿ ಸಂದರ್ಶನಕ್ಕೆ ಯೋಗ್ಯ. ಈ ಬಾವಿಯ ಮಂಟಪದ 2 ಕಂಬಗಳಿಗೆ ಸಿಂಹದ ತೆರೆದ ಬಾಯಿಗಳಲ್ಲಿ ಕಲ್ಲುಗುಂಡು ಇದೆ. ಅದನ್ನು ಒಳಗಿನಿಂದಲೇ ಉರುಳಿಸಬಹುದು. ಕಣ್ಣಿದ್ದವರು ಕನಕಗಿರಿ ಸಂದರ್ಶಿಸಲೇ ಬೇಕೆಂಬುದು ಆಡುನುಡಿ ಯಾಗಿದೆ. ಇಲ್ಲಿ ವಿಜಯ ದಾಸರು ತಮ್ಮ ಕ್ಷೇತ್ರ ಸುಳಾದಿಗಳಲ್ಲಿ ಇದರ ವಿಚಾರ ಮಾಡಿದ್ದಾರೆ.

## 235. ಆನೆಗೊಂದಿ :

ಗಂಗಾವತಿ ತಾಲ್ಲೂಕು, ಬೆಂಗಳೂರು 389 ಕಿ. ಮಿ. ತುಂಗಭದ್ರಾ ನದಿಯ ಎಡದಂಡೆಯ ಸ್ಥಳ. ಆನೆ ಕಟ್ಟುತ್ತಿದ್ದ ಜಾಗವಾದ್ದರಿಂದ ಆನೆಗೊಂದಿ ಎಂಬ ಹೆಸರು ಬಂದಿದೆ. ಇದು ಪೌರಾಣಿಕವಾಗಿ ರಾಮಾಯಣ ಕಾಲದ ಕಿಷ್ಕಿಂಧೆಯಾಗಿತ್ತೆಂದು ತಿಳಿದುಬರುತ್ತದೆ. ಇದು ವಾಲಿಸುಗ್ರೀವರ ಕಾಳಗ ನಡೆದ ಸ್ಥಳ. ಪಂಪಾಸರೋವರದ ದಂಡೆಯಲ್ಲಿ ಜಯಲಕ್ಷ್ಮಿ ದೇವಾಲಯವಿದೆ. ಶಬರಿಯ ಗುಹೆಯೆಂದು ಕರೆಯುವ ಸ್ಥಳವಿದೆ. ಬೃಹತ್ ರಂಗನಾಥ

ದೇವಾಲಯ, ಚಿಂತಾಮಣಿ ಮಠದ ಎದುರಲ್ಲಿ ಸನ್ಯಾಸಿ, ಗುಂಡು ಇವುಗಳನ್ನು ನೋಡ ಬಹುದು. ಇದು ಚಾರಿತ್ರಿಕವಾಗಿ ಚಿಕ್ಕ ಸಂಸ್ಥಾನವಾಗಿತ್ತು. ಕುಮಾರರಾಮ (ಮಲ್ಲಿಕಾಫರ್‌ನನು ಎದುರಿಸಿದ ವೀರ) ಇಲ್ಲಿಯವನು.

## 236. ಗಂಗಾವತಿ :

ಕೊಪ್ಪಳಕ್ಕೆ 48 ಕಿ. ಮಿ.

ಕೊಪ್ಪಳ-ರಾಯಚೂರು ಮಾರ್ಗ. ಇದಕ್ಕೆ ನೀಲಾವತಿ ಎಂಬ ಹೆಸರಿತ್ತು. ಇಲ್ಲಿ ಶ್ರೀ ವೆಂಕಟೇಶದೇವಾಲಯವಿದೆ. ಕೋಟೆಯ ಒಳಭಾಗದಲ್ಲಿ ಪುರಾತನ ಹಾಗೂ ಪ್ರಸಿದ್ಧ ಸುಂಕದಕಟ್ಟೆ ಪ್ರಾಣದೇವನಿದ್ದಾನೆ. ಇಲ್ಲಿ ರಾಘವೇಂದ್ರ ಮಠ ಹಾಗೂ ಉತ್ತರಾದಿಮಠಗಳಿವೆ

## 237. ಮಾದನೂರು :

ಕೊಪ್ಪಳ ತಾಲ್ಲೂಕಿನ ಮಾದನೂರು ಮೋದ ಪುರವೆಂದು ಕರೆಯಲ್ಪಟ್ಟಿತ್ತು. ಇದನು ದಕ್ಷಿಣ ಬದರಿ ಎನ್ನುವರು. ಇಲ್ಲಿ ಬೃಂದಾವನಸ್ಥರಾಗಿರುವ (1828) ಶ್ರೀ ವಿಷ್ಣುತೀರ್ಥರ ಬಾಳಾಚಾರ್ಯ ಮತ್ತು ಭಾಗೀರತಿ ಎಂಬುವರ ಪುತ್ರರು. ಜಯತೀರ್ಥರನ್ನು ಸೇವಿಸಿ ಪುತ್ರನನು ಪಡೆದ (ಕ್ರಿ.ಶ. 1678) ಇವರಿಗೆ ಜಯತೀರ್ಥರೆಂದೇ ಪೂರ್ವನಾಮ. ಇವರು ಐಜಿ ಆಚಾ ರೆಂಬುವರ ಬಳಿ ಶಿಷ್ಯರಾಗಿ 6 ಶಾಸ್ತ್ರಗಳಲ್ಲಿ ಪಂಡಿತರಾದರು. ನಂತರ ಸ್ವಲ್ಪಕಾಲ ಗೃಹಸ್ಥಾಶ್ರಮಿ ಗಳಾಗಿದ್ದು, ಸತ್ಕಾಲಕ್ಷೇಪ ಮಾಡುತ್ತಿದ್ದರು. ಒಂದು ದಿನ ಮಧ್ಯಾಹ್ನದ ಸಮಯದಲ್ಲಿ ಅದೇ ತಾನೆ ಊಟ ಮುಗಿಸಿ ತಾಂಬೂಲವನ್ನು ಮೆಲ್ಲುತ್ತ ಮಂಚದ ಮೇಲೆ ಮಲಗಿದ್ದರು ಸುತ್ತಲೂ ನಿಲುವುಗನ್ನಡಗಳಿದ್ದವು. ಪಕ್ಕದಲ್ಲಿ ಪತ್ನಿ ಪಾದಸೇವೆಯಲ್ಲಿ ತೊಡಗಿದ್ದರು. ಈ ವಿಶ್ರಾಂತಿಯ ಸಮಯದಲ್ಲಿ ಒಬ್ಬ ದಾಸನು ಬಾಗಿಲಲ್ಲಿ ನಿಂತು "ಮಂಚ ಬಾರದು, ಮಡದಿ ಬಾರಳು, ಕಂಚು ಕನ್ನಡಿ ಬಾರದು, ಸಂಚಿತಾರ್ಥವು ಮತ್ತೆ ಬಾರದು ಮುಂದೆ ಮಾಡಿದ ಧರ್ಮವೇ" ಎಂದು ಹಾಡು ಹೇಳಿದನು. ಈ ದಾಸನ ಹಾಡಿನಿಂದ ಜ್ಞಾನೋದಯವಾ ಸಂಸಾರಸುಖ ನಶ್ವರ ಎಂದು ತಿಳಿದು ಮನೆ ಮಕ್ಕಳನ್ನು ತ್ಯಜಿಸಿ ಅವಧೂತ ವೃತ್ತಿಯನು ಕೈಗೊಂಡು ಮಲಾಪಹಾರ ನದಿ ತೀರದ ಮುನವಳ್ಳಿ ಗ್ರಾಮದಲ್ಲಿ ನೆಲೆಸಿದರು. ಅಲ್ಲಿ ಸುಮಧ್ವವಿಜಯದ ಪಾರಾಯಣ, ಮಕ್ಕಳಿಗೆ ಗುರುಕುಲ, ಶಿಷ್ಯರಿಗೆ ಪಾಠ ಇವುಗಳಲ್ಲಿ ಕೆಲವು ಕಾಲ ಕಳೆದರು. ಆ ಕಾಲದಲ್ಲಿ ಅಲ್ಲಿಗೆ ಉತ್ತರಾಧಿಮಠಾಧೀಶರಾದ ಶ್ರೀ ಸತ್ಯವರ ತೀರ್ಥರ ಆಗಮಿಸಿ ಅವರ ಪಾಂಡಿತ್ಯವನ್ನು ಮೆಚ್ಚಿ ಅವರಿಗೆ ಆಶ್ರಮ ಸ್ವೀಕಾರ ಮಾಡಿಸಿದರು. ಜಯ ತೀರ್ಥರು ವಿಷ್ಣುತೀರ್ಥರಾದರು. ಮತ್ತೆ ಕಿನ್ನಾಳ ಗ್ರಾಮಕ್ಕೆ ಬಂದು ಅಲ್ಲಿಂದ ಆ ಗ್ರಾಮದ ಸಮೀಪದ ಕುಶಾವತಿ ನದಿ ತೀರದ ಮೋದಪುರ (ಮಾದನೂರು) ನಲ್ಲಿ ನೆಲೆಸಿದರು. ಊರ ದೂರದ ಅಡವಿಯಲ್ಲಿ ಇರುತ್ತಿದ್ದ ಕಾರಣ ಅವರನ್ನು ಅರಣ್ಯಾಚಾರ್ಯರು, ಅಡವಿ ಆಚಾರ್ಯರ ಎಂದು ಕರೆದಿದ್ದಾರೆ. ಇವರು ರುದ್ರಾಂಶ ಸಂಭೂತರೆಂದು ಹೆಸರಾಗಿದ್ದಾರೆ. ಬದರಿ

ನಾರಾಯಣನ ಯಾತ್ರೆಗೆ ಹೋಗಲಾಗದೆ ಇದ್ದಾಗ ಆಶ್ರಮದ ಹತ್ತಿರ ಭೂಮಿಯಲ್ಲಿ ಸುಂದರವಾದ ಬದರೀನಾರಾಯಣನ ವಿಗ್ರಹ ಸಿಕ್ಕಿತು. ಈ ವಿಗ್ರಹ ಈಗ ಬೃಂದಾವನದ ಹಿಂದೆ ಸ್ಥಾಪಿತವಾಗಿದೆ.

ಇವರು ಅಮರ ಕೃತಿಯಾದ 1800 ಶ್ಲೋಕಗಳನ್ನು ಒಳಗೊಂಡ ಭಾಗವತವನ್ನು ಕೇವಲ 365 ಶ್ಲೋಕಗಳಲ್ಲಿ ರಚಿಸಿದರು. ಭಗವದ್ಗೀತೆಯನ್ನು ಕೇವಲ 20 ಶ್ಲೋಕಗಳಲ್ಲಿ ಬರೆದು ಭಕ್ತರಿಗೆ ಒದಗಿಸಿದ್ದಾರೆ. ಇವರ ಆರಾಧನೆ. ಮಾಘ ಬಹುಳದಲ್ಲಿ ನಡೆಯುವುದು.

# ಧಾರವಾಡ ಜಿಲ್ಲೆ

## 238. ಧಾರವಾಡ :

ಬೆಂಗಳೂರಿಗೆ 369 ಕಿ. ಮಿ. ಇಲ್ಲಿ ಕಟ್ಟಿರುವ ಪುರಾತನ ಕೋಟೆ 76 ಎಕರೆ ಪ್ರದೇಶವನ್ನು ಆಕ್ರಮಿಸಿಕೊಂಡಿದೆ. ಇಲ್ಲಿ ದುರ್ಗಾದೇವಿಯ, ಪಾಂಡುರಂಗ ದೇವರ ದೇವಾಲಯಗಳು ಇವೆ. ರಾಘವೇಂದ್ರರ ಬೃಂದಾವನ ಸ್ಥಳವೂ ಇದಾಗಿದೆ.

## 239. ಹಳೇ ಹುಬ್ಬಳ್ಳಿ :

ಧಾರವಾಡದಿಂದ 19 ಕಿ. ಮಿ. ಮೀರಜ್ - ಬೆಂಗಳೂರು ರೈಲುಮಾರ್ಗದ ಮಧ್ಯದ ನಿಲ್ದಾಣ. ಶ್ರೀ ಕೃಷ್ಣಮಠ ಮತ್ತು ಸತ್ಯಭೋದ ಸ್ವಾಮಿಗಳ ಮಠಗಳಿವೆ. ಇದರ ಈಶಾನ್ಯದಲ್ಲಿರುವ ಬೆಟ್ಟವನ್ನು ನೃಪತುಂಗ ಬೆಟ್ಟವೆಂದು ಕರೆಯುವರು. ಇದು ಪ್ರವಾಸಿ ಕೇಂದ್ರ.

## 240. ಬಂಕಾಪುರ :

ಹುಬ್ಬಳ್ಳಿಯಿಂದ 32 ಕಿ. ಮಿ. ಇಲ್ಲಿಯ ಆದಿದೇವತೆ ಕೇಶವ. ಈ ವಿಗ್ರಹವು ವಿಶೇಷ ಶಾಸ್ತ್ರೋಕ್ತವಾಗಿ ರಚಿಸಿರುವುದರಿಂದಲೇ ಅಲ್ಲಿ ಕೇಶವನ ವಿಶೇಷ ಸನ್ನಿಧಾನವಿದೆ. ವಾದಿ ರಾಜರು ವರ್ಣಿಸಿದಂತೆ ದೇವರ ಮೇಲಿನ ಕೈಯಲ್ಲಿ ಶಂಖ, ಕೆಳಕೈಯಲ್ಲಿ ಪದ್ಮ ಎಡಭಾಗದ ಮೇಲಿನ ಕೈಯಲ್ಲಿ ಸುದರ್ಶನ, ಕೆಳಕೈಯಲ್ಲಿ ಗಧಾಧಾರಿಯಾಗಿದ್ದಾನೆ. ಬ್ರಹ್ಮಾದಿದೇವತೆ ಗಳಿಂದ ಸ್ಥಾಪಿಸಲ್ಪಟ್ಟು, ತನ್ನ ಸೇವಾಸಕ್ತರಾದ ಲಕ್ಷ್ಮಣ ಆಂಜನೇಯರಿಂದ ಅಲಂಕಾರ, ಪೂಜೆ, ಉತ್ಸವಗಳನ್ನು ಸ್ವೀಕರಿಸಿ ತನ್ನ ಕೃಪಾದೃಷ್ಟಿಯಿಂದ ಭಕ್ತರ ಭಯಗಳನ್ನು ಓಡಿಸಿ ಸಂಪತ್ಕಾರಕನಾಗಿದ್ದಾನೆಂದು ತೀರ್ಥಪ್ರಬಂಧದಲ್ಲಿ ತಿಳಿಸಿರುತ್ತಾರೆ.

## 241. ಸಾತೇನ ಹಳ್ಳಿ :

ಬ್ಯಾಡಗಿ ತಾಲ್ಲೂಕಿನ ಒಂದು ಹಳ್ಳಿ. ಈ ಗ್ರಾಮ ಪ್ರಸಿದ್ಧಿಗೆ ಬಂದಿರುವುದು ಅಲ್ಲಿಯ ಶಾಂತೇಶನೆಂಬ ಹೆಸರಿನ ಹನುಮಂತ ದೇವರಿಂದಾಗಿ. ವ್ಯಾಸರಾಯರ ಗುರುಗಳಾದ ಪೂಜ್ಯ ಶ್ರೀ ಬ್ರಹ್ಮಣ್ಯ ತೀರ್ಥರಿಂದ ಈ ಶಾಂತೇಶನು ಪ್ರತಿಷ್ಠೆಗೊಂಡನೆಂದು ಇತಿಹಾಸವಿದೆ.

# ಬೆಳಗಾಂ ಜಿಲ್ಲೆ

## 242. ಬೆಳಗಾಂ :

ಬೆಂಗಳೂರಿಗೆ 502 ಕಿ. ಮಿ. ಮೀರಜ್–ಬೆಂಗಳೂರು ರೈಲು ರಸ್ತೆಯಲ್ಲಿ ರೈಲು ನಿಲ್ದಾಣ. ಬೆಳಗಾವಿ ಕೋಟೆ 100 ಎಕರೆ ವಿಸ್ತಾರವಿದ್ದು, ಪ್ರವಾಸಿಗರಿಗೆ ಒಂದು ಸಂದರ್ಶನ ಸ್ಥಳವಾಗಿದೆ. ಕ್ಯಾಂಪ್ ಪ್ರದೇಶದಲ್ಲಿ 'ಮಿಲಿಟರಿ ಮಹದೇವ' ಎಂದು ಕರೆಯಲಾಗಿರುವ ಶಿವಮಂದಿರವಿದೆ. ಹತ್ತಿರದ ಗೋಕಾಕ್‌ನಿಂದ ವಾಯುವ್ಯ 20 ಕಿ. ಮಿ. ದೂರದಲ್ಲಿ ಸುಂದರ ರಮಣೀಯ ಗೋಕಾಕ್ ಜಲಪಾತವಿದೆ. ಘಟಪ್ರಭಾ ನದಿಯು ಇಲ್ಲಿ 180 ಅಡಿಯಿಂದ ಧುಮುಕುತ್ತದೆ. ಇದರ ಶಬ್ದ 3 ಕಿ. ಮಿ.ವರೆಗೂ ಕೇಳಿಸುತ್ತದೆ. ಇದನ್ನು ಕರ್ನಾಟಕದ ನಯಾಗರ ಎನ್ನುವರು. ದರ್ಶನಕ್ಕೆ ಸೂಕ್ತಕಾಲ ಅಕ್ಟೋಬರ್‌ನಿಂದ ಡಿಸೆಂಬರ್. ಇಲ್ಲಿ ಗೋಕಾಕ್ ಗಿರಣಿ ಯವರು ನಿರ್ಮಿಸಿರುವ 201 ಮಿ. ಉದ್ದದ ತೂಗು ಸೇತುವೆ ಇದೆ. ಇದೂ ಕೂಡ ಒಂದು ಹೆಚ್ಚಿನ ಆಕರ್ಷಣೆ.

## 243. ಹಲಸಿ :

ಬೆಳಗಾಂನಿಂದ 40 ಕಿ. ಮಿ.

ಇದು ಬನವಾಸಿ ಕದಂಬರ ಎರಡನೇ ರಾಜಧಾನಿ. ಅತಿ ಪ್ರಸಿದ್ಧ ಚಾರಿತ್ರಕ ಸ್ಥಳ. ಇಲ್ಲಿ ಭೂವರಾಹ ನರಸಿಂಹ (1170) ಸುವರ್ಣೇಶ್ವರ, ಕಲ್ಲೇಶ್ವರ ಗುಡಿಗಳಿವೆ.

## 244. ಅಥಣಿ :

ಬಿಜಾಪುರದಿಂದ 53 ಕಿ. ಮಿ. ಇಲ್ಲಿ ಭೀಮದಾಸ ರಾಘವೇಂದ್ರ ಮಠವೆಂಬ ಆಧುನಿಕ ದೇಗುಲ ನಿರ್ಮಾಣವಾಗಿದೆ.

# ಬಾಗಲಕೋಟೆ ಜಿಲ್ಲೆ

## 245. ಬಾಗಲ ಕೋಟೆ :

ಬಿಜಾಪುರದಿಂದ 98 ಕಿ. ಮಿ. ಹುಬ್ಬಳ್ಳಿ ರಸ್ತೆ. ಬೆಳಗಾಂನಿಂದ 140 ಕಿ.ಮಿ. ಬೆಳಗಾಂ ರಾಯಚೂರು ರಸ್ತೆ. ಬೆಂಗಳೂರು 500 ಕಿ. ಮಿ. ಇಲ್ಲಿನ ಸಂದರ್ಶನದ ಸ್ಥಳಗಳೆಂದರೆ, ಆನಂದರಾವ್ ಭಿಕ್ಕೋಜಿ ಇದ್ದ ಮನೆ. ಪಾನಿ ಮಹಲ್, ಟಂಕಸಾಲೆ, ಕೊತ್ತಳದಲ್ಲಿ ಹನುಮಂತ ದೇವರ ಮೂರ್ತಿ, ಈ ಪ್ರಾಣದೇವರನ್ನು ಕೊತ್ತಲೇಶ ಎಂದು ಕರೆಯವರು. ಸಿಮೆಂಟ್ ಕಾರ್ಖಾನೆಯವರಿಂದ ಸತ್ಯಂ ಶಿವಂ ಸುಂದರಂ ದೇವಾಲಯ ಇತ್ತೀಚೆಗೆ ನಿರ್ಮಾಣ ವಾಗಿದೆ. ರಾಯರ ಮಠ, ಅಂಬಾಭವಾನಿ ಗುಡಿ ಇವು ವೀಕ್ಷಿಸತಕ್ಕ ಇತರ ಸ್ಥಳಗಳು.

ಈ ಊರು ಶ್ರೀ ಪ್ರಸನ್ನ ವೆಂಕಟದಾಸರ ಜನ್ಮಸ್ಥಳ. ಕೋಟೆ ಒಳಭಾಗದಲ್ಲಿ ಅವರ ಮನೆ ಇದೆ. ದೇವರ ಮೂರ್ತಿಗಳು, ತಂಬೂರಿ ಇವುಗಳು ದಾಸರ ಜ್ಞಾಪಕ ತರುತ್ತವೆ. ಅವರ ಹಾಡುಗಳನ್ನು ಹಾಡುತ್ತಿದ್ದವರಲ್ಲಿ ಧಾರವಾಡದ ಮುದವೀಡು ಕೃಷ್ಣರಾಯರು ಒಬ್ಬರು. ಅವರು ಯಾವುದಾದರೊಂದು ಮರದೆಡೆ ಕುಳಿತು ಭಾಗವತದ ಆದ್ಯಂತವನ್ನು ವೃತ್ತವಾಗಿ, ದ್ವಿಪದಿಗಳಾಗಿ ಹಾಡುವುದರ ಜೊತೆಗೆ ಪ್ರಸನ್ನ ವೆಂಕಟದಾಸರ ಪದಗಳನ್ನು ಸುಂದರವಾಗಿ ಹಾಡುತ್ತಿದ್ದರು. ಈ ದಾಸರು ಹುಲಿಗಳೊಡನೆ ಸರಸವಾಡುತ್ತಿದ್ದ ಕಥೆ ಜನಜನಿತವಾಗಿದೆ. ದಾಸರು ದಾರಿಯಲ್ಲಿ ಸಿಕ್ಕಿದ ಹುಲಿಗೆ ಅಂಗಾರ ಹಚ್ಚಿ ಕಳುಹಿಸಿದ್ದರಂತೆ. ಆ ಹುಲಿ ಮತ್ತೆ ಯಾವ ಗೋವುಗಳನ್ನೂ ಆಕ್ರಮಣ ಮಾಡುತ್ತಿರಲಿಲ್ಲವಂತೆ. ಅವರನ್ನು ಅದಕ್ಕಾಗಿಯೇ ಅಂಗಾರದ ದಾಸರೆಂದು ಕರೆಯುತ್ತಿದ್ದರು. ಇವರಿಂದ 203 ಕೀರ್ತನೆಗಳು 3 ಸುಳಾದಿ, 3 ಉಗಾ ಭೋಗಗಳು, ರಚಿಸಲ್ಪಟ್ಟಿದೆ. ದೀರ್ಘಕೃತಿಗಳಾದ ಸಮಸ್ತ ನಾಮಮಣಿಗಣಷಟ್ಕಿರಣ, ಪದ್ಯಮಾಲ, ನಾರದರು ಕೊರವಂಜಿ ವೇಶ ತಾಳ್ದ ಚರಿತ್ರೆ, ನಾರಾಯಣ ಪಂಜರ, ಸತ್ಯಭಾಮಾ ವಿಲಾಸ' ಇವು ಮುಖ್ಯ.

## 246. ಶೂರ್ಪಾಲಿ :

ವಿಜಾಪುರ ಜಿಲ್ಲೆ, ಜಮಖಂಡಿ ತಾಲ್ಲೂಕು, ಚಿಕ್ಕಗ್ರಾಮ. ಜಮಖಂಡಿಯಿಂದ 8 ಕಿ. ಮಿ. ದೂರದಲ್ಲಿರುವ ಕಡಕೋಳವರೆಗೆ ಬಸ್ಸು ಹಾಗೂ 9 ಕಿ. ಮಿ. ಇರುವ ಕಂಕನವಾಡಿಯ ವರೆಗೆ ಬಸ್ಸು (ಕೇವಲ ನದಿಯವರೆಗೆ) ನಂತರ ಹರಿಗೋಲಿನ ಮೂಲಕ ಶೂರ್ಪಾಲಿ ಸೇರ ಬೇಕು. ಹಾಗಲ್ಲದೆ ಜಮಖಂಡಿಯಿಂದ ಪಡಸಲಗಿ ಸೇತುವೆಯ ಮೇಲಿಂದ ಹಾಯ್ದು ದೂರದ

ಮಾರ್ಗ ಕ್ರಮಿಸಿ ಕ್ಷೇತ್ರದ ಮುಂದೆ ಹೋಗುವ ದೂರದಾರಿಯ ಬಸ್ಸಿನಲ್ಲಿ ಪ್ರಯಾಣಿಸಬೇಕು. ಇದಲ್ಲದೆ, ನದಿಯವರೆಗೆ ಜಮಖಂಡಿಯಿಂದ ಟೆಂಪೋ, ಟ್ಯಾಕ್ಸಿ, ಟಾಂಗಗಳ ಅನುಕೂಲವಿದೆ. ನಂತರ ನದಿ ದಾಟಿಸಲು ದೋಣಿ ಸಿದ್ಧವಿರುವುದು.

ಕೃಷ್ಣಾದಂಡೆಯಮೇಲೆ ಭವ್ಯವಾದ ಶ್ರೀ ಲಕ್ಷ್ಮಿನರಸಿಂಹ ದೇವಾಲಯವಿದೆ. ಇದರ ಪಕ್ಕದಲ್ಲಿ ವರಾಹದೇವರು, ಶ್ರೀರಾಮದೇವರ ಗುಡಿಗಳಿವೆ. ಈ ವಿಗ್ರಹದ ಕೆಳಭಾಗದಲ್ಲಿ ಆಂಜನೇಯಸ್ವಾಮಿ ನಿಂತಿದ್ದಾನೆ. ಮೂಲದೇವರಾದ ಶ್ರೀ ಲಕ್ಷ್ಮಿನರಸಿಂಹ ದೇವರ ಗುಡಿ ವಿಶಾಲವಾದ ಕಟ್ಟೆಯ ಸ್ಥಳದ ಮಧ್ಯದಲ್ಲಿದ್ದು, ಎತ್ತರವಾದ ಗೋಪುರವನ್ನು ಹೊಂದಿದೆ. ಗರ್ಭಗುಡಿಯಲ್ಲಿ ದಕ್ಷಿಣಾಭಿಮುಖವಾಗಿ ಕಮಲಾಕಾರದ ದಿವ್ಯವಾದ ಶಿಲಾಮಯಪೀಠದಲ್ಲಿ ಶ್ರೀ ಲಕ್ಷ್ಮಿನರಸಿಂಹ ದೇವರು ಇದ್ದು, ಅವರ ವಾಮಾಂಕದಮೇಲೆ ಲಕ್ಷ್ಮಿದೇವಿ ವಿರಾಜಮಾನ ಳಾಗಿದ್ದಾಳೆ. ನರಸಿಂಹನ ವದನದ ಮೇಲೆ ಸಿಂಹದ ಗಾಂಭೀರ್ಯವಿದೆ. ಶಂಖ, ಚಕ್ರ, ಗಧಾ ಪದ್ಮಧಾರಿಯಾಗಿರುವ ಪ್ರತಿಮೆಯ ಮೈಮೇಲಿನ ರೇಖೆಗಳು, ಕಿರೀಟ, ಕಂಠಾಭರಣ, ಚರಣಾಭರಣಗಳು ಎದ್ದು ಕಾಣುತ್ತವೆ. ಈ ಮೂರ್ತಿಯ ಕೆಳಭಾಗದಲ್ಲಿ ಬಿಳಿಶಿಲೆಯಿಂದ ನಿರ್ಮಿತ ವಾದ ಚಿಕ್ಕಮಾರುತಿ ರಾಯನಿದ್ದಾನೆ. ದೇವರ ಬಲಪಾರ್ಶ್ವದಲ್ಲಿ ಕೊಳಲೂದುತ್ತಾ ನಿಂತ ಶ್ರೀ ಕೃಷ್ಣನ ವಿಗ್ರಹವಿದೆ. ಎಡಪಾರ್ಶ್ವದಲ್ಲಿ ಶ್ರೀ ವೆಂಕಟೇಶ್ವರನಿದ್ದಾನೆ. ಈ ಮೂರ್ತಿಯ ಪಕ್ಕದಲ್ಲಿ ಪುಟ್ಟ ಶ್ರೀ ನರಸಿಂಹನ ವಿಗ್ರಹವಿದೆ. ಶ್ರೀ ಲಕ್ಷ್ಮಿನರಸಿಂಹದೇವರ ಎದುರಿಗೆ ಪುರಾತನವಾದ ಅಶ್ವತ್ಥವೃಕ್ಷವಿದ್ದು, ಸುತ್ತಲೂ ಕಟ್ಟೆ ಕಟ್ಟಲಾಗಿದೆ.

ಗರ್ಭಗುಡಿಯ ಹಿಂಭಾಗದ ಭಿತ್ತಿಯ ಮಧ್ಯದ ಚಿಕ್ಕದಾದ ಮಂಟಪದಲ್ಲಿ ಶ್ರೀವಿದ್ಯಾಧೀಶರಿಂದ ಸ್ಥಾಪನೆಗೊಂಡ ಪ್ರಾಣದೇವರಿದ್ದಾರೆ. ಇದಲ್ಲದೆ ನಾರದ ಮೂರ್ತಿ, ಗಣಪತಿ, ನಂದಿಗಳಿವೆ. ಪಕ್ಕದಲ್ಲಿಯ ಬಯಲಿನಲ್ಲಿ ಛಿದ್ರ ಛಿದ್ರವಾದ ಶಿಲೆಯಲ್ಲಿ ರೂಪುಗೊಂಡ ಬೈಲೇಶ್ವರನಿದ್ದಾನೆ. ಹತ್ತಿರವೇ ಈಶ್ವರನ ಲಿಂಗವಿದೆ. ಹರಕೆಹೊತ್ತವರು ಈ ಮಹಾದೇವನಿಗೆ ಬುತ್ತಿಯ ಪೂಜೆಯನ್ನು ನಡೆಸುತ್ತಾರೆ.

ಇದಲ್ಲದೆ ಪಾದಗಟ್ಟೆಗೆ ಹೋಗುವ ಮಾರ್ಗದಲ್ಲಿ ಎಡಬದಿಗೆ ಸಣ್ಣ ನರಸಿಂಹದೇವರು, ಮತ್ತು ಪ್ರಾಣದೇವನಿದ್ದಾನೆ. ಈತನನ್ನು ಪುಟ್ಟ ಹನುಮಪ್ಪನೆನ್ನುವರು. ಊರ ಮಧ್ಯದಲ್ಲಿ ಶ್ರೀ ವೆಂಕಟೇಶ್ವರನ ದೇವಾಲಯವಿದೆ. ಈ ದೇವಾಲಯದ ಪಕ್ಕದ ಅಂಗಳದಲ್ಲಿ ಕೂಡಲಿ ಅಕ್ಷೋಬ್ಯತೀರ್ಥ ಮಠದ ಶ್ರೀ ರಘುಪ್ರಮತಿ ತೀರ್ಥರ ವೃಂದಾವನವಿದೆ. ಅಲ್ಲದೆ ಗ್ರಾಮದ ಅತಿಪುರಾತನ ಕಾಲದ ಬೃಹತ್‌ಗಾತ್ರದ ಪ್ರಾಣದೇವರ ಗುಡಿ ಇದೆ.

ಇಲ್ಲಿನ ಇತರ ಪವಿತ್ರಸ್ಥಳಗಳೆಂದರೆ ಅಷ್ಟತೀರ್ಥಗಳು. ಇವುಗಳೇ ಕೋಟಿತೀರ್ಥ, ಚಕ್ರತೀರ್ಥ, ಕಂಕತೀರ್ಥ, ಉತ್ತುಂಗ ತೀರ್ಥ, ಚಲಕ ತೀರ್ಥ, ಪಿತೃತೀರ್ಥ ಹಾಗೂ ಋಣ ವಿಮೋಚನ ತೀರ್ಥ. ಪೌರಾಣಿಕವಾಗಿ ಇಲ್ಲಿ ಪರಶುರಾಮನು ಇಲ್ಲಿಯ ಕೃಷ್ಣಾನದಿ ತೀರದಲ್ಲಿ ವಾಸಮಾಡಿ ಕೃಷ್ಣೆಯ ಸೊಬಗನ್ನು ನೋಡಿ ಆನಂದಬಾಷ್ಪ ಸುರಿಸಿದನಂತೆ. ಅದರಿಂದಲೇ ಎಲೆ ಕಾಂಡಗಳಿಂದ ಕೂಡಿದ ಆಶ್ಚರ್ಯಕರವಾದ ಒಂದು ಅಶ್ವತ್ಥವೃಕ್ಷ ಉದ್ಭವವಾಯಿತು. ದೇವತೆಗಳಿಂದ ಪೂಜಿತವಾದ ಈ ವೃಕ್ಷವು ಪರಶುರಾಮ ದೇವರ ಪ್ರತಿಮೆ. ಇಲ್ಲಿ ಬಲರಾಮ ದೇವರು ಯಾತ್ರಾರ್ಥಿಯಾಗಿ ವಾಸಮಾಡಿದ್ದನಂತೆ. ತ್ರೇತಾಯುಗದಲ್ಲಿ ಶ್ರೀರಾಮನು ಸೀತಾ

ಲಕ್ಷ್ಮಣರೊಂದಿಗೆ ಸಂಚರಿಸುತ್ತಾ ಇಲ್ಲಿಗೆ ಬಂದಿದ್ದರಂತೆ. ದ್ವೈತ ದುಂದುಭಿಯನ್ನು ಮೊಳಗಿಸಿದ ಶ್ರೀ ವಿದ್ಯಾಧೀಶರು, ಶ್ರೀ ಯಾದವಾರ್ಯರು, ಕುಮಾರವ್ಯಾಸ, ಮಹೀಪತಿ ದಾಸರು ಇಲ್ಲಿಗೆ ಭೇಟಿನೀಡಿದ್ದು ಕೆಲಕಾಲ ಇಲ್ಲಿಯೇ ವಾಸವಾಗಿದ್ದರು.

ಇಲ್ಲಿ ನಡೆಯುವ ಉತ್ಸವಗಳೆಂದರೆ ನಿತ್ಯೋತ್ಸವ, ಶ್ರೀ ರಾಮಜಯಂತಿ, ಹನುಮಜಯಂತಿ, ಅಕ್ಷಯ ತೃತೀಯಾ ಹಾಗೂ ನರಸಿಂಹ ಜಯಂತಿ ಪುರಂದರದಾಸರ ಪುಣ್ಯದಿನ, ಮಧ್ವನವಮಿ ಗಳು. ಸಂವತ್ಸರ ಮಹೋತ್ಸವವು ವೈಶಾಖದಲ್ಲಿ ನಡೆಯುವುದು. ವೈಶಾಖ ಶುದ್ಧ ಪೌರ್ಣಿಮಾ ರಥೋತ್ಸವ. ವೈಕುಂಠ ಚತುರ್ದಶಿ ದಿನ ತೆಪ್ಪೋತ್ಸವ.

ಈ ಕ್ಷೇತ್ರದ ಮಹಿಮೆ ಅಪಾರವಾದದ್ದು. ಇಲ್ಲಿ ಮಾಡಿದ ಸ್ನಾನ ದಾನಾದಿಗಳು ಅನಂತ ಫಲನೀಡುತ್ತವೆ. ಇಲ್ಲಿ ವಿಸರ್ಜನೆ ಮಾಡಿದ ಅಸ್ತಿಗಳು 6 ತಿಂಗಳಲ್ಲಿ ಶಂಖದಂತಾಗುವುವು. ಇಲ್ಲಿಯ ಋಣವಿಮೋಚನ ತೀರ್ಥದಲ್ಲಿ ಋಣಾಪಹರಣ ಮಾಡಿದರೆ ಋಣ ಪರಿಹಾರವು ಇಲ್ಲಿ ಸುಲಭವಾಗಿ ಆಗುತ್ತದೆ. ಇಲ್ಲಿ ಶ್ರಾದ್ಧಮಾಡಿದರೆ ನೂರು ಗಯಾಶ್ರಾದ್ಧ ಮಾಡಿದ ಫಲದೊರೆಯುವುದು. ಒಟ್ಟಿನಲ್ಲಿ ಈ ಕೆಳಗೆ ಕಂಡ ಮಾತುಗಳು ಸತ್ಯ.

**ಸಕಲಸ್ತ್ರೀಯರಲ್ಲಿ ಲಕ್ಷ್ಮಿ ಶ್ರೇಷ್ಠ. ದೇವತೆಗಳಲ್ಲಿ ವಿಷ್ಣುಶ್ರೇಷ್ಠ,**
**ಹರಿಭಕ್ತರಲ್ಲಿ ಶಿವನು ಶ್ರೇಷ್ಠ**
**ಅದರಂತೆ ಎಲ್ಲ ಕ್ಷೇತ್ರಗಳಲ್ಲಿ ಶೂರ್ಪಾಲಿಯು ಶ್ರೇಷ್ಠ.**

## 247. ಮುಧೋಳ :

ಬಾಗಲಕೋಟೆ ಜಿಲ್ಲೆ ಬಿಜಾಪುರದಿಂದ 81 ಕಿ. ಮಿ. ಮಲಪ್ರಭಾ ದಂಡೆಯ ಮೇಲಿರುವ ಊರು. ಇದು ಪ್ರಸಿದ್ಧ ಕವಿ ರನ್ನನ ಜನ್ಮಸ್ಥಳ. ಇಲ್ಲಿಯ ಶಿವದೇವಾಲಯವೊಂದು ಭೂಮಿಯ ಮಟ್ಟಕ್ಕಿಂತ ಕೆಳಗೆ ನಿರ್ಮಿತವಾಗಿದೆ. ರಾಮ, ಮಾರುತಿ, ದತ್ತಾತ್ರೇಯ ರಾಘವೇಂದ್ರರ ಗುಡಿಗಳಿವೆ.

# ಬಿಜಾಪುರ ಜಿಲ್ಲೆ

## 248. ಬಿಜಾಪುರ :

ಬೆಂಗಳೂರಿನಿಂದ 589 ಕಿ. ಮಿ. ಮೈಸೂರಿನಿಂದ 625 ಕಿ.ಮಿ. ಮೊದಲ ಹೆಸರು ವಿಜಯ ಪುರ ಜಿಲ್ಲಾ ಕೇಂದ್ರ ಹಾಗೂ ಐತಿಹಾಸಿಕ ಸ್ಥಳ. ಇಲ್ಲಿ ರಾಷ್ಟ್ರಕೂಟ, ಚಾಲುಕ್ಯ ಮತ್ತು ಆದಿಲ್‌ಷಾಹಿ ಕಾಲದ ದೇವಸ್ಥಾನ, ಕೋಟೆ, ಕೊತ್ತಲ, ಬುರುಜು, ಮಸೀದಿ, ಗೋಪುರ, ಬಾಗಿಲುವಾಡ, ಕ್ರೀಡಾಗೃಹ, ಜಲಮಂದಿರ, ವಿಲಾಸಗೃಹಗಳಿಂದ ಕಂಗೊಳಿಸುತ್ತಿದೆ. ಕೋರ್ಟಿನ ಬದಿಯಲ್ಲಿ ಶ್ರೀ ನರಸಿಂಹ ಮಂದಿರವಿದೆ. ಇಲ್ಲಿ ಪ್ರಾರ್ಥನೆ ಸಲ್ಲಿಸಲು ಆದಿಲ್‌ಷಾ ಆಗಮಿಸುತ್ತಿದ್ದನಂತೆ. ಮತ್ತು ಜಹಗೀರು ಕೊಟ್ಟಿದ್ದನಂತೆ. ಈ ದೇವಾಲಯದ ಜಗುಲಿಯಲ್ಲಿಯೇ ಮಹಿಪತಿ ದಾಸರು ಪುರಾಣ ಹೇಳಲು ಕೂಡುತ್ತಿದ್ದರಂತೆ.

## 249. ತೊರವಿ :

ಬಿಜಾಪುರದ ಪಶ್ಚಿಮಕ್ಕೆ 8 ಕಿ. ಮಿ. ಅಥಣಿಗೆ ಹೋಗುವ ಮಾರ್ಗ. ಇದು ಬಿಜಾಪುರದ ಬಳಿಯ ಒಂದು ಗ್ರಾಮ. ಇದಕ್ಕೆ ಪೌರಾಣಿಕ ಕಾಲದಲ್ಲಿ 'ತ್ವರಿತಾಲಯ' ಎಂದೂ, ಐತಿಹಾಸಿಕ ಕಾಲದಲ್ಲಿ 'ನೌಲಖಪುರ' ಎಂದೂ ಕರೆಯುತ್ತಿದ್ದರು. ಒಂದು ಕಾಲದಲ್ಲಿ ಇದು ಬಹಳ ದೊಡ್ಡ ಜನಸಂಖ್ಯೆಯ ಪಟ್ಟಣವಾಗಿದ್ದು, ಈ ನರಸಿಂಹದೇವನನ್ನು ಆದಿಲ್‌ಷಾ ಕೂಡ ಭಕ್ತನಾಗಿ ಆರಾಧಿಸುತ್ತಿದ್ದನೆಂದು ಹೇಳುತ್ತಾರೆ.

ಈ ದೇವಾಲಯ ಅತ್ಯಂತ ರಮ್ಯವಾಗಿದೆ. ಇದು ವಿಶಿಷ್ಟರೀತಿಯಲ್ಲಿ ರಚನೆಯಾಗಿರು ವುದು. ಮಹಾದ್ವಾರ ಪ್ರವೇಶಿಸಿದನಂತರ 8 -10 ಅಡಿ ತಗ್ಗಿನ ನೆಲಮಾಳಿಗೆಯಲ್ಲಿ ಗುಹಾ ನಿರ್ಮಾಣವಾಗಿದೆ. ಮಂಡಿಯೂರಿ ಯಾತ್ರಿಕರು ಗುಹಾಮಾರ್ಗದ ಮೂಲಕ ಪ್ರವೇಶಿಸಬೇಕು. ಅಲ್ಲಿಯ ಭೂಗರ್ಭದಲ್ಲಿ ಗರ್ಭಗುಡಿಯಿದೆ. ಇಲ್ಲಿ ನಾವು ಶ್ರೀ ನರಸಿಂಹ ದೇವರನ್ನು (3 ಅಡಿ ಎತ್ತರದ) ಕಾಣುತ್ತೇವೆ. ದೇವರು ಎಡಗಾಲು ಮಡಚಿ ಬಲಗಾಲು ಕೆಳಗೆ ಬಿಟ್ಟು ಗರುಡನ ಮೇಲೆ ಕುಳಿತಿದ್ದು ತೊಡೆಯ ಮೇಲೆ ಹಿರಣ್ಯಕಶಿಪುವನ್ನು ಮಲಗಿಸಿ ಅವನ ಹೊಟ್ಟೆ ಯನ್ನು ಸೀಳಿ ಎರಡು ಕೈಗಳಿಂದ ಕರುಳನ್ನು ಮೇಲಕ್ಕೆ ಎಳೆದಿರುವನು. ಉಳಿದ ಆರುಕೈಯಲ್ಲಿ ಶಂಖಚಕ್ರಾದಿ ಆಯುಧಗಳಿವೆ. ಪೀಠ ಪ್ರಭಾವಳಿಯಲ್ಲಿ ಬಲಗಡೆಗೆ ಶ್ರೀ ಲಕ್ಷ್ಮಿವಿಗ್ರಹವೂ ಎಡಗಡೆಗೆ ಪ್ರಹ್ಲಾದರಾಜರ ವಿಗ್ರಹವೂ ಮೇಲ್ಭಾಗದಲ್ಲಿ ಸುತ್ತಲೂ ಮತ್ಸ್ಯಕೂರ್ಮಾದಿ ದಶಾವತಾರ ವಿಗ್ರಹಗಳೂ ಇರುವುವು. ಹಿಂಭಾಗದಲ್ಲಿ ದೊಡ್ಡ ಚಕ್ರವಿರುವುದು. ಮೂರ್ತಿಯು ಸಾಲಿಗ್ರಾಮ ಶಿಲೆಯಿಂದ ಮಾಡಲ್ಪಟ್ಟಿದೆ.

ಈ ದೇವರು ಇರುವ ಜಾಗದಲ್ಲಿ ಮೊದಲು ನರಸಿಂಹದೇವರ ದೊಡ್ಡ ಸಾಲಿಗ್ರಾಮವಿತ್ತು. ಅದಕ್ಕೆ ನಿತ್ಯವೂ ದೊಡ್ಡ ಪ್ರಮಾಣದ ಹಯಗ್ರೀವ ನೈವೇದ್ಯ ಆಗಲೇಬೇಕಿತ್ತು. ಅರ್ಚಕರು ಈ ಸಮಸ್ಯೆಯನ್ನು ದಿನವೂ ಬಹಳ ಶ್ರಮದಿಂದ ಎದುರಿಸುತ್ತಿದ್ದಾಗ ಅವರಿಗೆ ಕನಸಿನಲ್ಲಿ ಶ್ರೀನರಸಿಂಹದೇವರು ಕಾಣಿಸಿಕೊಂಡು ಅದನ್ನು ಕೃಷ್ಣಾನದಿಯಲ್ಲಿ ವಿಸರ್ಜಿಸಬೇಕೆಂದು ನಂತರ ದಕ್ಷಿಣ ದಿಕ್ಕಿಗೆ ನದಿಯ ಪಾತ್ರದಲ್ಲಿ ನಡೆದು ದಾರಿಯಲ್ಲಿ ಹಸಿಹುಲ್ಲನ್ನು ಚೆಲ್ಲುತ್ತಾ ಯಾವ ಸ್ಥಳದಲ್ಲಿ ಹಸಿಹುಲ್ಲು ಜ್ವಲಿಸುವುದೋ ಅಲ್ಲಿ ಭೂಗತವಾದ ಒಂದು ಮೂರ್ತಿ ಸಿಗುವುದೆಂದು ತಿಳಿಯ ಹೇಳಿದರು. ಅರ್ಚಕರು ಅದರಂತೆ ಮಾಡಿದಾಗ ಬಾಗೇವಾಡಿ ತಾಲ್ಲೂಕಿನ ಚಿಮ್ಮಲಗಿ ಗ್ರಾಮದ ಹದ್ದಿನಲ್ಲಿರುವ ದೇಶಪಾಂಡೆ ಎಂಬುವರ ಮನೆತನಕ್ಕೆ ಸೇರಿದ ಹೊಲದಲ್ಲಿ ಒಂದೆಡೆ ಹಸಿಹುಲ್ಲಿಗೆ ಬೆಂಕಿ ಹತ್ತಿಕೊಂಡಿತು. ಆ ಸ್ಥಳವನ್ನು ಅಗೆದಾಗ ಈ ಮೂರ್ತಿ ಶ್ರೀ ಲಕ್ಷ್ಮಿ ನರಸಿಂಹ ದೇವರು ದೊರೆಯಿತು. ಅದೇ ತಾನೆ ಪೂಜೆ ಮಾಡಿದಂತೆ ಆ ಮೂರ್ತಿಯ ಮೇಲೆ ಹಸಿಯಾದ ಗಂಧ, ಅಕ್ಷತೆ, ತುಳಸಿ, ಪುಷ್ಪಾದಿಗಳು ಕಂಡುಬಂದುವಂತೆ. ಇದನ್ನು ನಂತರ ತೊರವಿಯಲ್ಲಿ ಪ್ರತಿಷ್ಠೆ ಮಾಡಲಾಯಿತು. ಇಲ್ಲಿಯೇ ಕುಳಿತು ಕುಮಾರವಾಲ್ಮೀಕಿ ತೊರವೆ ರಾಮಾಯಣವನ್ನು ಬರೆದದ್ದು. ಭೂಗತವಾಗಿದ್ದ ಈ ದೇವರ ಪೂಜೆಯನ್ನು ರುದ್ರಾಂಶರಾದ ದೂರ್ವಾಸಮುನಿಗಳು ಪೂಜೆ ಮಾಡುತ್ತಿದ್ದರಂತೆ. ಇದರ ಪ್ರತೀಕವಾಗಿ ಗರ್ಭಗುಡಿಯ ಎದುರಿಗೆ ಕಟ್ಟೆಯ ಮೇಲೆ ಈಶ್ವರ ಲಿಂಗವನ್ನು ಕೂಡ ಪ್ರತಿಷ್ಠಾಪಿಸ ಲಾಗಿದೆ. ಈ ಲಿಂಗಕ್ಕೆ ಭೀಮಾಶಂಕರನೆನ್ನುತ್ತಾರೆ. ದೇವಸ್ಥಾನದ ಹತ್ತಿರದಲ್ಲಿ ಗಂಗೆಯ ಸಾನ್ನಿಧ್ಯವಿರುವ ಶ್ರೀ ನರಸಿಂಹತೀರ್ಥವೆಂಬ ಕಲ್ಯಾಣಿಯೂ ಇದೆ.

ಪ್ರತಿವರ್ಷ ವೈಶಾಖ ಶುದ್ಧ ಅಷ್ಟಮಿಯಿಂದ ವೈಶಾಖ ವದ್ಯ ಪ್ರತಿಪದೆಯವರೆಗೂ ಉತ್ಸವ ನಡೆಯುವುದು. ಸನ್ನಿದಾನದಲ್ಲಿರುವ ಮಹಾಲಕ್ಷ್ಮಿ ಗ್ರಾಮದೇವತೆಯಾಗಿದ್ದು ಹಲವಾರು ಪವಾಡಗಳ ಮೂಲಕ ತನ್ನ ಮಹಿಮೆಯನ್ನು ವ್ಯಕ್ತಪಡಿಸಿದ್ದು ಜನತೆಯನ್ನು ತನ್ನ ಕೃಪೆಯಿಂದ ರಕ್ಷಿಸುತ್ತಿದ್ದಾಳೆ.

ಹೀಗೆ ತೊರವೆ ಕ್ಷೇತ್ರವು ಬಹು ಪ್ರಾಚೀನಕಾಲದಿಂದಲೂ ಅತ್ಯಂತ ಪಾವನ ಕ್ಷೇತ್ರವಾಗಿದೆ.

## 250. ಕಾಖಂಡಿಕಿ :

ಬಿಜಾಪುರಕ್ಕೆ 35 ಕಿ.ಮಿ. ಮಹೀಪತಿ ದಾಸರೆಂಬ ಹರಿದಾಸರು ಇದ್ದು ಬೃಂದಾವನಸ್ಥರಾದ ಸ್ಥಳ. ಇವರು ಅಥಣಿ ತಾಲ್ಲೂಕಿನ ಐಗಳಿ ಗ್ರಾಮದಲ್ಲಿ ಜನ್ಮವೆತ್ತಿದ್ದರು. ಸಾರವಾಡದ ಭಾಸ್ಕರ ಸ್ವಾಮಿಗಳ ಬಳಿ ಯೋಗಾಭ್ಯಾಸದಲ್ಲಿ ತೊಡಗಿದರು. ನಂತರ ಕಾಖಂಡಿಕಿಯಲ್ಲಿ ನೆಲೆಸಿದರು. ಇವರು ಮಹಾಮಹಿಮರು. ಯೋಗಿಗಳು, ಸಂಸ್ಕೃತ, ಕನ್ನಡ, ಉರ್ದು, ಪಾರ್ಸಿ, ಭಾಷೆಗಳಲ್ಲಿ ಪಂಡಿತರಾಗಿ ಪುರಾಣದ ಆಚಾರ್ಯರಾಗಿ ಪ್ರಸಿದ್ಧಿಪಡೆದವರು. ಬಿಜಾಪುರದಲ್ಲಿನ ನರಸಿಂಹದೇವಾಲಯವೇ ಇವರ ಪುರಾಣಕಟ್ಟೆ. ಮುಸಲ್ಮಾನ್ ಪ್ರಭುವಾದ ಮಹಮದ್ ಷಹ ಬಾದ್‌ಶಹನಿಗೆ ಪಾರ್ಸಿ ಭಾಷೆಯಲ್ಲಿ ಪುರಾಣಶ್ರವಣ ಮಾಡಿಸಿದ ಕೀರ್ತಿ ಇವರದು. ಇದರಿಂದ ಸುಪ್ರೀತನಾದ ನವಾಬ ಇವರನ್ನು ತಮ್ಮ ಖಾಸಗಿ ಖಜಾನೆದಾರ ಪದವಿಯನ್ನು ಕೊಟ್ಟಿದ್ದು, ಕುದುರೆ, ಪಹರೆ, ಮಹಲು, ಪಲ್ಲಕ್ಕಿ, ಈ ವೈಭವ ಇವರಿಗೆ ಕೆಲವು ಕಾಲ

ಇತ್ತು. ಮಹಾವಜೀರನನ್ನು ಬಿಟ್ಟರೆ ಎರಡನೆ ಅಧಿಕಾರವೇ ರಾಯರದಾಗಿತ್ತು. ಮುಂದೆ ಅಧಿಕಾರದಿಂದ ಬೇಸತ್ತು ಸರ್ವವನ್ನೂ ದಾನಮಾಡಿ, ದಾಸರಾದರು. ಇವರು ಸಾವಿರಾರು ಸುಂದರ ದೇವರ ನಾಮಗಳನ್ನು ರಚಿಸಿದ್ದರು. ಇವರ ಕೃತಿಗಳನ್ನು ಕೇಳಿ ಸಂತೋಷಪಟ್ಟವರಲ್ಲಿ ವಿಜಯದಾಸರೂ ಒಬ್ಬರು ಮತ್ತು ಅವರು "ಇದು ಕಾಖಿಂಡಿಕೆಯ ಕಾಕಂಬಿ" (ಮಿಠಾಯಿ) ಎನ್ನುತ್ತಿದ್ದರಂತೆ. ಈ ಕೃತಿಗಳೆಲ್ಲಾ ಈಗ ಇವರ ವಂಶೀಕರ ಬಳಿಯಲ್ಲಿದೆ. ಬಿಜಾಪುರ ಜಿಲ್ಲೆಯ ಕೊಲ್ಹಾರಕ್ಕೆ ಹೋಗಿ ನೆಲೆಸಿ 1681ರಲ್ಲಿ 80 ವರ್ಷಗಳ ಬಾಳಿನನಂತರ ಅಲ್ಲಿಯೇ ಕೊನೆ ಯುಸಿರು ಎಳೆದರು. ಅವರ ಹೆಸರಿನಲ್ಲಿ ಕೊಲ್ಹಾರದಲ್ಲಿ ವೃಂದಾವನವಿದೆ. ಕಾಖಿಂಡಿಕೆ ಯಲ್ಲಿ ದಾಸರು ಪೂಜಿಸುತ್ತಿದ್ದ ಸಾಲಿಗ್ರಾಮದ ಮೇಲೆ ಬೃಂದಾವನವಿರುವುದು, ಇವರಿಗೆ ಹಿಂದೂಗಳಲ್ಲದೆ ಮುಸಲ್ಮಾನರೂ ಶಿಷ್ಯರಿದ್ದಾರೆ. ಇವರ ಆರಾಧನೆಯನ್ನು ಪ್ರತಿವರ್ಷ ಮಾರ್ಗಶಿರ ಪೂರ್ಣಿಮೆ ನಡೆಸುತ್ತಾರೆ. ನೂರಾರು ಜನ ಅವರ ಆರಾಧನೆಗೆ ಸೇರುವರು.

## 251. ಕೋರವಾರ :

ಬಿಜಾಪುರ – ಸಿಂದಗಿಯ ರಸ್ತೆಯ ಮದ್ಯದ ದೇವರ ಹಿಪ್ಪರಿಗೆಯಿಂದ 8 ಕಿ. ಮಿ. ಸಿಂದಗಿಯಿಂದ 15 ಕಿ.ಮಿ. ಇಲ್ಲಿರುವ ದೇವರಿಗೆ ಕೋರವಾರೇಶ, ಕೋರವಾರ ಹನುಮಪ್ಪ ನೆನ್ನುವರು. ಸ್ಥಳಪುರಾಣದಂತೆ ಈ ದೇವರ ವಿಗ್ರಹವನ್ನು ಅಗಸ್ತ್ಯ ಋಷಿಗಳು ಪ್ರತಿಷ್ಠಾಪಿಸಿ ದರು. ಇದು ಆಳೆತ್ತರದ ಸುಂದರವಾದ ವಿಗ್ರಹ. ಕಣ್ಣಿನಲ್ಲಿ ತೇಜ, ವೀರಾವೇಶದ ನಿಲುವು ಈ ದೇವರದ್ದು. ಶ್ರೀ ವಾದಿರಾಜರು ಇಲ್ಲಿ ತಂತ್ರ ಸಾರೋಕ್ತ ವಿಧಿನಿಯಮಗಳಿಂದ ಈ ದೇವರನ್ನು ಸ್ಥಾಪಿಸಿದ್ದಾರೆ. ಇದು ಸಾಲಿಗ್ರಾಮ ಶಿಲೆಯಲ್ಲಿ ರೂಪಿತವಾದ ಸುಂದರ ಮೂರ್ತಿ.

ಈ ದೇವರ ಸ್ಥಾಪನೆಯ ಹಿಂದೆ ಒಂದು ಚರಿತ್ರೆಯೇ ಇದೆ. ಶ್ರೀ ವಾದಿರಾಜ ಸ್ವಾಮಿಗಳು ಸಂಚಾರದಲ್ಲಿದ್ದಾಗ ಇಲ್ಲಿಯ ಕೋಕಿಲಾಪುರದಲ್ಲಿ ವಾಸವಾಗಿದ್ದರು. ಅವರಿಗೆ ಮುಖ್ಯ ಪ್ರಾಣ ದೇವರು ಸ್ವಪ್ನದಲ್ಲಿ ತಾನು ಅಲ್ಲಿಯ ದೈವಿ ತೀರ್ಥದ ದಿಣ್ಣೆಯಲ್ಲಿ ಭೂವಾಸ ಮಾಡುತ್ತಿದ್ದೇ ನೆಂದೂ ಅದನ್ನು ಹತ್ತಿರದ ಕೋರವಾರದ ಯಜ್ಞ ವೇದಿಕೆಯಲ್ಲಿ ಪ್ರತಿಷ್ಠಾಪಿಸಬೇಕೆಂದು ಹೇಳಿದಂತಾಯಿತು. ಅದನ್ನು ವಾದಿರಾಜರು ಕಂಡು ಅಲ್ಲಿಯ ಗ್ರಾಮಸ್ಥರ ಸಹಾಯದಿಂದ ಆ ವಿಗ್ರಹವನ್ನು ಹೊರತೆಗೆದು ಕೋರವಾರದಲ್ಲಿ ಪ್ರತಿಷ್ಠಾಪನೆ ಮಾಡಿದರಂತೆ.

ಉತ್ತರಾದಿಮಠದ ಸ್ವಾಮಿಗಳಾದ ಸತ್ಯಜ್ಞಾನ ತೀರ್ಥರು ಈ ದೇವರನ್ನು ಸಾಕ್ಷಾತ್ಕರಿಸಿ ಕೊಂಡಿದ್ದವರಾಗಿದ್ದರು. ಒಮ್ಮೆ ಸ್ವಾಮಿಗಳ ಪೂಜಾ ಕಾಲದಲ್ಲಿ ಕೋರವಾರೇಶನು ಗಾಳಿ ರೂಪದಲ್ಲಿ ಪೂಜೆ ನಡೆದ ಸ್ಥಳಕ್ಕೆ ಬಂದು ಮಹಾಮಂಗಳಾರತಿಯಾದ ಮೇಲೆ ಹಿಂತಿರುಗಿ ಹೋಗಿದ್ದ ಘಟನೆಯನ್ನು ಅನೇಕರು ಕಣ್ಣಾರೆ ಕಂಡಿದ್ದಾರೆ. ಈ ದೇವರ ಉತ್ಸವವು ಚೈತ್ರಮಾಸದಲ್ಲಿ ಆಗಮೋಕ್ತರೀತಿಯಲ್ಲಿ ನಡೆಯುವುದು. ಈ ರೀತಿಯ ಉತ್ಸವವು ದಕ್ಷಿಣ ಭಾರತದಲ್ಲಿ ಇದೊಂದೇ ಸ್ಥಳದಲ್ಲಿ ಎಂಬ ವಿಚಾರವಿದೆ. ಚೈತ್ರಶುದ್ಧ ದಶಮಿ ಇಲ್ಲಿ ರಥೋತ್ಸವ.

## 252. ಯಲಗೂರು :

ಮುದ್ದೇಬಿಹಾಳ ತಾಲ್ಲೂಕು. ಮುದ್ದೇ ಬಿಹಾಳದಿಂದ 5 ಕಿ.ಮಿ. ಕೃಷ್ಣಾನದಿಯ ದಂಡೆಯ ಮತ್ತೊಂದು ತೀರ್ಥಕ್ಷೇತ್ರ. ಇದು ವಾಯುಕ್ಷೇತ್ರ. ಏಳುಊರಪ್ಪ ಎಂದು ಖ್ಯಾತನಾದ ಯಲಗುರೇಶ. ಇವರ ಗುಡಿ ಊರ ಉತ್ತರಕ್ಕೆ ಇದೆ. ಕಾರ್ತಿಕ ಮಾಸದಲ್ಲಿ ಉತ್ಸವವಾಗುವುದು.

## 253. ತುಳಸೀ ಗೇರಿ :

ಬಾಗಲಕೋಟೆಯ ಪಶ್ಚಿಮಕ್ಕೆ 32 ಕಿ. ಮಿ.

ಇಲ್ಲಿ ಹನುಮಂತ ದೇವರ ಗುಡಿ ಇದೆ. ಈ ಆಂಜನೇಯ ತಿರುಪತಿ ವೆಂಕಟರಮಣನ ಪ್ರತಿ ರೂಪದಂತಿದೆ. ವೆಂಕಟರಮಣನಂತೆ ಆಂಜನೇಯನ ಬಲಗೈಯ ಮೇಲ್ಭಾಗದಲ್ಲಿ ಚಕ್ರ, ಎಡಗೈ ಮೇಲ್ಭಾಗದಲ್ಲಿ ಶಂಖ, ಹಣೆಯಲ್ಲಿ ತ್ರಿನಾಮವಿದೆ. ಕಾರ್ತಿಕಮಾಸದಲ್ಲಿ ಜಾತ್ರೆಯಾಗುವುದು.

## 254. ಬಾದಾಮಿ :

ಬಿಜಾಪುರ 113 ಕಿ. ಮಿ. ಬೆಂಗಳೂರು 499 ಕಿ. ಮಿ. ಪ್ರಾಚೀನ ಚಾಲುಕ್ಯರ ರಾಜಧಾನಿ. ಇಲ್ಲಿ ಚಾಲುಕ್ಯಶಿಲ್ಪದ ಮಹತ್ತರ ದೇವಾಲಯ ಮಾದರಿಗಳಿವೆ. ಬಾದಾಮಿ ಕೋಟೆ, ಗುಹಾಲಯಗಳು ಇಲ್ಲಿಯ ಸಂದರ್ಶನ ಸ್ಥಳಗಳು.

ಶ್ರೀ ಪ್ರಸನ್ನ ವೆಂಕಟದಾಸರು ತಮ್ಮ ಅಂತ್ಯಕಾಲದಲ್ಲಿ ಬಾದಾಮಿಯಲ್ಲಿದ್ದರು. ಪೂರ್ವಕ್ಕಿರುವ ಗುಡ್ಡದ ಕೆಳಗೆ ಕಲ್ಯಾಣಿಯೊಂದರ ದಡದಲ್ಲಿರುವ ಕಟ್ಟೆಯನ್ನು ಪ್ರಸನ್ನ ವೆಂಕಟದಾಸರ ಕಟ್ಟೆ ಎನ್ನುವರು. ಆ ಕಟ್ಟೆಯ ಬಳಿಯೇ (12 ನೆ ಶತಮಾನ) ದಾಸರು ನಿರ್ಯಾಣಹೊಂದಿದರೆಂದು ತಿಳಿದುಬರುತ್ತದೆ. ಬಾದಾಮಿಯಲ್ಲಿ ಅವರಿಗೆ ಸೇರಿದ ಮನೆ ಇತ್ತೆಂದು ಹೇಳುವರು. ಅವರ ಆರಾಧನೆ ಬಾದ್ರಪದ ಶುದ್ಧ ದ್ವಾದಶಿ.

# ಗುಲಬರ್ಗಾ ಜಿಲ್ಲೆ

## 255. ಮಳಖೇಡ :

ಸೇಡಂ ತಾಲ್ಲೂಕು, ಗುಲ್ಬರ್ಗದಿಂದ 35 ಕಿ. ಮಿ. ರಾಯಚೂರಿನಿಂದ ರೈಲಿನಲ್ಲಿ ಸೇಡಂ ರೈಲು ನಿಲ್ದಾಣದಲ್ಲಿ ಇಳಿದು 15 ಕಿ. ಮಿ. ಬಸ್ಸಿನಲ್ಲಿ ಕ್ರಮಿಸಬೇಕು. ಈ ಪುಣ್ಯ ಕ್ಷೇತ್ರದಲ್ಲಿ ಶ್ರೀ ರಾಮನ ಮಗನಾದ ಕುಶನು ತಪಸ್ಸು ಮಾಡಿದ್ದನೆಂದು ಹೇಳುತ್ತಾರೆ. ಪೌರಾಣಿಕವಾಗಿ ಇದು ಅಗಸ್ತ್ಯಮುನಿಗಳು ತಪಸ್ಸುಮಾಡಿದ ಸ್ಥಳ. ಇದಕ್ಕೆ ಪರ್ಜನ್ಯಪುರ ಎಂಬ ಹೆಸರಿತ್ತು. ಮಾನ್ಯಖೇಟ ಎಂಬ ಹೆಸರಿನ ಚಾರಿತ್ರಿಕ ಸ್ಥಳ ಇದು. ಹಿಂದೆ ರಾಷ್ಟ್ರಕೂಟ ಸಾಮ್ರಾಜ್ಯದ ರಾಜಧಾನಿಯಾಗಿತ್ತು. ನೃಪತುಂಗ, ಪಂಪ, ಪೊನ್ನ, ರನ್ನ, ಜಯತೀರ್ಥ ಇಂತಹ ಕವಿಗಳ ಕಾರ್ಯಕ್ಷೇತ್ರವಾಗಿತ್ತು. ಈ ಊರಿನ ಸುತ್ತ ಕೋಟೆ ಕೊತ್ತಲಗಳಿವೆ. ಕೋಟೆಯ ಪ್ರದೇಶದಲ್ಲಿ ಕೊತ್ತಲ ಪ್ರಾಣದೇವರ ಗುಡಿ ಇದೆ. ಅಲ್ಲದೆ ಅಕ್ಷೋಬ್ಯ ತೀರ್ಥರ ಮಂಟಪ, ಮಲಯಾದ್ರಿ ಮಾಧವನ ಗುಡಿ, ಸಂತಾನ ಗೋಪಾಲಕೃಷ್ಣನ ಮಂದಿರಗಳಿವೆ.

ಊರಿಗೆ ಸ್ವಲ್ಪ ದೂರದಲ್ಲಿ ಕಾಗಿನಿ ನದಿ ಇದೆ (ಕರ್ಕುವೇಣಿ). ಅಗಸ್ತ್ಯ ಮುನಿಗಳ ಕಮಂಡಲ ದಲ್ಲಿ ಭಾರತದ ಸಕಲಪುಣ್ಯ ತೀರ್ಥಗಳು ಸಂಗ್ರಹವಾಗಿದ್ದುದರಿಂದ ಕಾಗಿನಿ ನದಿಯಲ್ಲಿ ಸ್ನಾನ ಮಾಡುವವರಿಗೆ ಗಂಗಾದಿ ಸಕಲ ನದಿಗಳ ಸ್ನಾನಫಲವಿದೆ. ಅದರ ತೀರದಲ್ಲಿ ಜಯ ತೀರ್ಥರ, ಅಕ್ಷೋಬ್ಯ ತೀರ್ಥರ ಮೂಲ ಬೃಂದಾವನಗಳಿವೆ. ಅಲ್ಲದೆ ಈ ಮಠದ 16 ಮಂದಿ ಸ್ವಾಮಿಗಳಿಗೆ ನಿತ್ಯ ಹಸ್ತೋದಕವಾಗುವುದು. ಇಲ್ಲಿ ನಡೆಯುವ ಮುಖ್ಯ ಉತ್ಸವ ಗಳೆಂದರೆ, ಮದ್ವನವಮಿ, ಅಕ್ಷೋಬ್ಯ ತೀರ್ಥರ ಹಾಗೂ ಟೀಕಾರಾಯರರೆಂದು ಪ್ರಸಿದ್ಧಿಗೊಂಡ ಶ್ರೀ ಜಯತೀರ್ಥರ ಆರಾಧನೆಗಳು ನಡೆಯುತ್ತವೆ.

ಜಯತೀರ್ಥರ ಬಗ್ಗೆ ಒಂದು ಮಾತು. ಶ್ರೀಮದ್ವಾಚಾರ್ಯರ ತರುವಾಯ ದ್ವೈತವೇದಾಂತದ ನಭೋಮಂಡಲದಲ್ಲಿ ಬೆಳಗಿದ ಧ್ರುವತಾರೆ ಶ್ರೀ ಜಯತೀರ್ಥರು. ಭಗವಂತನ ಅವತಾರದ ಶ್ರೀ ವೇದವ್ಯಾಸರು ಸೂತ್ರಕಾರರಾದರೆ, ಶ್ರೀಮದ್ವಾಚಾರ್ಯರು ಬಾಷಣಕಾರರು, ಶ್ರೀ ಜಯತೀರ್ಥರು ಟೀಕಾಕಾರರು, ಅದಕ್ಕಾಗಿಯೇ ಅವರಿಗೆ ಟೀಕಾರಾಯ ನೆಂಬ ಬಿರುದು. ವಾಯುವಿನ ಅಂಶರಾದ ಭೀಮಸೇನ ದೇವರೇ ಮದ್ವರಾಗಿದ್ದಾರೆ. ಇಂದ್ರಾಂಶದ ಅರ್ಜುನರೇ ಶ್ರೀಜಯತೀರ್ಥರು ಎಂಬುದು ಮಾಧ್ವರ ಮತ. ಅವರ ಪೂರ್ವಾಶ್ರಮದ ಚರಿತ್ರೆಯನ್ನು ವೀಕ್ಷಿಸಿದರೆ ಅವರು ಪಂಡರಪುರದ ಹತ್ತಿರದ ಮಂಗಳ ವೇಡೆಯ ದೇಶಪಾಂಡೆ ಮನೆತನ ದವರು ಅವರ ಮೂಲ ಹೆಸರು ಧೊಂಡೊ ರಘುನಾಥ. ಕುದುರೆಯ ಮೇಲೆ ಕುಳಿತೇ

ನೀರು ಕುಡಿಯುವ ಅವರನ್ನು ಕಂಡ ಶ್ರೀ ಅಕ್ಷೋಭ್ಯತೀರ್ಥರು ಅವರನ್ನು ಗುರುತಿಸಿ ತಮ್ಮ ಶಿಷ್ಯ ರನ್ನಾಗಿ ಮಾಡಿಕೊಂಡರು. 22 ವರ್ಷ ಸರ್ವಜ್ಞ ಪೀಠವನ್ನು ಆಳಿ ಕಾಗಿನಿ ತೀರದ ಮಳಖೇಡ ದಲ್ಲಿ ತಮ್ಮ ಗುರುಗಳ ಹತ್ತಿರ (1387) ರಲ್ಲಿ 43ರ ಹರೆಯದಲ್ಲಿ ವೃಂದಾವನಸ್ಥರಾದರು. ಇವರು 22 ಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿರುವರು. ಅವರ ಆರಾಧನಾ ದಿನ ಆಷಾಢ ವದ್ಯ ಪಂಚಮಿ.

## 256. ರಾಸಣಗಿ :

ದೇವರ್ಗಿಯಿಂದ 16 ಕಿ. ಮಿ. ಇಲ್ಲಿ ಬೀಮಾನದಿ ಉತ್ತರ ದಕ್ಷಿಣಾಭಿಮುಖವಾಗಿ ಹರಿಯುತ್ತದೆ. ಇಲ್ಲಿ ಪುರಾತನವಾದ ಹನುಮಂತದೇವರ ಮಂದಿರವಿದೆ. ಉದ್ಭವಮೂರ್ತಿ ಎಂದು ಜನರ ನಂಬಿಕೆ ಇದೆ.

## 257. ಮಣೂರು :

ಗುಲ್ಬರ್ಗದಿಂದ 85 ಕಿ. ಮಿ. ಅಫುಸಲಪುರದ ಮೂಲಕ ಪ್ರಯಾಣ. ಇದು ಭೀಮಾದಂಪೆಯಲ್ಲಿರುವ ಒಂದು ಪುಣ್ಯಕ್ಷೇತ್ರ. ಇದು ಮೊದಲಿನಿಂದಲೂ ಅನೇಕ ಋಷಿಗಳ, ಪಂಡಿತರುಗಳ ಸ್ಥಳ. ಹಾಗಾಗಿ ಇದನ್ನು ಮಣಿಗಣಪುರ ಎಂದು ಕರೆದಿರುವಲ್ಲಿ ಆಶ್ಚರ್ಯ ವೇನಿಲ್ಲ. ಮಧ್ವಾಚಾರ್ಯರ ನೇರ ಶಿಷ್ಯರಲ್ಲಿ ಒಬ್ಬರಾದ ಶ್ರೀ ಮಾಧವ ತೀರ್ಥರು ಪೂರ್ವಾ ಶ್ರಮದ ವಿಷ್ಣುಶಾಸ್ತ್ರಿಗಳು. ಶ್ರೀ ನರಹರಿ ತೀರ್ಥರ ನಂತರ ಸರ್ವಜ್ಞ ಪೀಠವನ್ನು ಅಲಂಕರಿಸಿ ಮಧ್ವ ಮತ ಪ್ರಸಾರಕ್ಕೆ ಬಹಳ ಕೆಲಸಮಾಡಿದರು. ಇವರೇ ಮೊದಲು ಪೂರ್ವಾಶ್ರಮದಲ್ಲಿ ಮಧ್ವಾಚಾರ್ಯರ ಜೊತೆ ವಾದಮಾಡಿ ಸೋತು ಅವರ ಶಿಷ್ಯರಾಗಿದ್ದು. ಅವರೇ ಉಡುಪಿಗೆ ಬಂದು ಕೃಷ್ಣದರ್ಶನ ಮಾಡಿಕೊಂಡು ಪಾಠಪ್ರವಚನಗಳಲ್ಲಿ ಆಸಕ್ತಿತೋರಿಸಿದುದರ ಪರಿಣಾಮ ವಾಗಿ ಆಚಾರ್ಯರು ಅವರನ್ನು ವೇದಗಳಿಗೆ ಭಾಷ್ಯ ರಚಿಸುವಂತೆ ಆದೇಶಿಸಿದರು. ಹೀಗೆ ಏಕೈಕ ವೇದ ಭಾಷ್ಯಾಕಾರರೆನಿಸಿರುವ ಶ್ರೀ ಮಾಧವತೀರ್ಥರು ನಂತರ ಪಂಪಾಕ್ಷೇತ್ರಕ್ಕೆ ಬಂದು ಅಲ್ಲಿ ಶ್ರೀ ವಿದ್ಯಾರಣ್ಯರ ಜೊತೆ ವಾದವಿವಾದಗಳನ್ನು ನಡೆಸಿದರು. ವಾದಮಾಡಿದುದಲ್ಲದೆ ಯಾವಾಗಲೂ ಜಯವನ್ನು ಅವರು ಸಂಪಾದಿಸುತ್ತಿದ್ದ ಗುಟ್ಟೇನು ಎಂದು ವಿದ್ಯಾರಣ್ಯರಿಗೆ ಅರಿವಾದದ್ದು ಅಲ್ಲಿಯೇ. ಮಾಧವ ತೀರ್ಥರ ವಿಜಯಕ್ಕೆ ಶ್ರೀರಾಮನ ಪ್ರತಿಮೆಯೇ ಕಾರಣ ವಾಗಿತ್ತು. ಆ ರಾಮನೇ ದಿಗ್ವಿಜಯರಾಮನಾಗಿ ಮುಂದೆ ಆ ಮಠದ ಆರಾಧ್ಯದೇವರಾಗಿ ಪೂಜೆಗೊಳ್ಳುತ್ತಿರುವುದು ಎಲ್ಲರಿಗೂ ಗೊತ್ತಿರುವ ವಿಚಾರ.

ಜೈನ ಧರ್ಮದ ಅತಿ ಪ್ರಬಲ ಕೇಂದ್ರಗಳಲ್ಲಿ ಮಣೂರೂ ಒಂದಾಗಿತ್ತು ಎಂಬುದನ್ನು ಅರಿತು ಶ್ರೀಮಾಧವ ತೀರ್ಥರು ವೈದಿಕ ಧರ್ಮದ ಪುನರ್‌ಸ್ಥಾಪನೆಗಾಗಿ ಅಲ್ಲಿಗೆ ಬಂದು ನೆಲೆಸಿದರು. ನೆಲೆಸಲು ಮತ್ತೊಂದು ಕಾರಣವೇನೆಂದರೆ ಅದು ಉತ್ತಾನಪಾದರಾಯನ ಮಗ ಧ್ರುವನಿಗೆ ದೇವರು ಕೇಶವನಾಗಿ ದರ್ಶನವನ್ನಿತ್ತ ಸ್ಥಳ. ಅಲ್ಲಿಯೇ ಪ್ರತಿಮಾ ರೂಪನಾಗಿ ನಿಂತಿರುವ ಕೇಶವನ ಪೂಜೆ ಮಾಡುವ ಯೋಗವಿದ್ದುದರಿಂದ ಅಲ್ಲಿ ನೆಲೆಸಿದರು. ಇಲ್ಲಿರುವ ಕೇಶವ ಸಾಲಿಗ್ರಾಮದ ಶಿಲೆಯಲ್ಲಿ ಮೂಡಿಬಂದಿದೆ. 4 ಅಡಿ ಎತ್ತರವಿದ್ದು ಭವ್ಯವೂ

ಸುಂದರವೂ ಆಗಿದೆ. ಕೇಶವ ಶಂಖ, ಚಕ್ರ ಗಧಾಪದ್ಮಧಾರಿಯಾಗಿದ್ದಾನೆ. ಕೊರಳಲ್ಲಿ ಕೌಸ್ತುಭಮಣಿಯನ್ನು ಬಲಭುಜದಲ್ಲಿ ಯಜ್ಞೋಪವೀತವನ್ನೂ ಧಾರಣೆಮಾಡಿದ್ದಾನೆ. ವಿಗ್ರಹದ ಮೇಲುಭಾಗದಲ್ಲಿ ಅರ್ಧ ಚಂದ್ರಾಕಾರವಾಗಿ ದಶಾವತಾರ ಶಿಲ್ಪ ಮೂಡಿ ಬಂದಿದೆ. ಪಾದದಡಿ ಗರುಡ ಹಾಗೂ ಪ್ರಾಣದೇವರು ಕೇಶವನ ಸೇವೆ ಮಾಡುತ್ತಿದ್ದಾರೆ. ಭಾರತೀದೇವಿ ಆರತಿ ಬೆಳಗುತ್ತಿದ್ದಾಳೆ. ಶ್ರೀದೇವಿ ಭೂದೇವಿಯರು ಚಾಮರ ಬೀಸುತ್ತಿದ್ದಾರೆ. ವಿಗ್ರಹದ ಮತ್ತೊಂದು ವೈಚಿತ್ರ್ಯವೇನೆಂದರೆ ಕುದಿಯುತ್ತಿರುವ ಬಿಸಿನೀರನ್ನು ಅಭಿಷೇಖ ಮಾಡಿದರೆ ಅದು ಪಾದದ ಬಳಿಗೆ ಬರುವಷ್ಟರಲ್ಲಿ ತಣ್ಣಗಾಗಿರುತ್ತದೆ. ಈ ದೇವರ ಪೂಜೆಯನ್ನು ಅಗಸ್ತ್ಯ ಋಷಿಗಳು ಮಾಡಿದ್ದರೆಂದು ಪ್ರತೀತಿ. ನದಿಯ ದಂಡೆಯಲ್ಲಿದ್ದ ವಿಗ್ರಹವನ್ನು ಈಗ ಊರ ಒಳಭಾಗದಲ್ಲಿ ಪ್ರತಿಷ್ಠಾಪನೆ ಮಾಡಲಾಗಿದೆ.

ಶ್ರೀಮಾಧವ ತೀರ್ಥರು ಕೆಲ ಕಾಲ ಮಣೂರಿನಲ್ಲಿ ವಾಸವಾಗಿದ್ದು ಅಲ್ಲಿಯೇ ವೃಂದಾವನಸ್ಥರಾದರೆಂದು ತಿಳಿದುಬಂದಿದೆ. ಅವರ ಮೂಲಬೃಂದಾವನವು ಉತ್ತರಾದಿಮಠದ ಶ್ರೀವೇದೇಶ ತೀರ್ಥರ ಬೃಂದಾವನದ ಪಕ್ಕದಲ್ಲಿದೆ. ಮಧುಹರಿ ತೀರ್ಥರೆಂಬುವರು ನಂತರ ಕೆಲವು ಕಾಲ ತಮ್ಮ ಗುರುಗಳಾದ ಮಾಧವತೀರ್ಥರನ್ನೂ ಸೇವಿಸಿದರೆಂದು ತಿಳಿದು ಬರುತ್ತದೆ.

## 258. ಛಾಯಾ ಭಾಗವತಿ :

ಗುಲ್ಬರ್ಗದಿಂದ ಸುಮಾರು 115 ಕಿ.ಮಿ. ಯಾದ್ಗಿರಿ ಹತ್ತಿರದ ರೈಲ್ವೆ ನಿಲ್ದಾಣ. ನಾರಾಯಣಪುರಕ್ಕೆ ಸಮೀಪ. ಕೃಷ್ಣಾನದಿಯ ದಡದ ಕ್ಷೇತ್ರ. ಇಲ್ಲಿ ಕೃಷ್ಣಾನದಿಯು ಒಂದು ಸ್ಥಳದಲ್ಲಿ ಧುಮುಕಿ ನಂತರ ಒಂದು ಪ್ರಾಕೃತಿಕ ಗುಹೆಯನ್ನು ಪ್ರವೇಶಿಸಿ ಹೊರಬರುತ್ತದೆ. ಇಲ್ಲಿ ಸೂರ್ಯನ ಪತ್ನಿ ಛಾಯ ಭಗವತಿಯ ದೇವಾಲಯವಿದೆ. ವೈಶಾಖ ಶುದ್ಧ ತದಿಗೆ ಇಲ್ಲಿ ಉತ್ಸವ.

ಶ್ರೀರಾಮಚಂದ್ರ ವನವಾಸಕ್ಕೆ ಬಂದಿದ್ದಾಗ ಇಲ್ಲಿಗೆ ಬಂದಿದ್ದನೆಂದೂ ಇಲ್ಲಿನ ತೀರ್ಥವೊಂದರಲ್ಲಿ ಸ್ನಾನ ಮಾಡಿದನೆಂದೂ ಸ್ಥಳಪುರಾಣ ಸಾರುತ್ತದೆ.

## 259. ದೇವಲ – ಗಾಣಗಾಪುರ :

ಗುಲ್ಬರ್ಗದಿಂದ 55 ಕಿ. ಮಿ. ಮದರಾಸು - ಮುಂಬೈ ರೈಲುಮಾರ್ಗದಲ್ಲಿ ಗಾಣಗಾಪುರ ರೈಲು ನಿಲ್ದಾಣಕ್ಕೆ 16 ಕಿ. ಮಿ. ದತ್ತಾತ್ರೇಯ ಇಲ್ಲಿಯ ಆರಾಧ್ಯ ದೇವತೆ. ದತ್ತ ಮಹಾರಾಜರ ಪಾದುಕೆಗಳು ಇಲ್ಲಿವೆ. ಫೆಬ್ರುವರಿಯಲ್ಲಿ ಜಾತ್ರೆ ನಡೆಯುವುದು.

## 260. ಜಿತಾಮಿತ್ರ ಗೆಡ್ಡೆ :

ಷಹಾಪುರ ತಾಲ್ಲೂಕು. ಇದು ಕೃಷ್ಣಾನದಿಯ ನಡುಗಡ್ಡೆ. ಜಿತಾಮಿತ್ರರೆಂಬುವರು ರಾಯರ ಪೀಳಿಗೆಯಲ್ಲಿ ಬಂದ ಯತಿಗಳು. ಇವರ ಗುರುಗಳು ವಿಭುದೇಂದ್ರರು. ಇವರಿಗೆ ಲಕ್ಷ್ಮೀನರಸಿಂಹ ಸಾಲಿಗ್ರಾಮವನ್ನು ಪೂಜಿಸ ಹೇಳಿದಾಗ ಅದರಂತೆ ಪೂಜಿಸಿ, ದೇವರಿಗೆ ಊಟ ಮಾಡಿಸಿದ ಮಹನೀಯರು.

ಇವರ ನಂತರ ಶಿವಪುರದ ನಡುಗಡ್ಡೆಯಲ್ಲಿ ಅದೃಶ್ಯರಾದರು. ಅವರು ಅದೃಶ್ಯರಾದ ದ್ವೀಪಕ್ಕೆ ಈ ಹೆಸರಿದೆ. ಅಲ್ಲಿರುವ ವೃಕ್ಷಕ್ಕೆ ಇಂದಿಗೂ ಪೂಜೆಗಳು ನಡೆಯುತ್ತವೆ. ಅವರ ಆರಾಧನಾ ದಿನ ಮಾರ್ಗಶಿರ ಅಮಾವಾಸ್ಯೆ.

## 261. ಹುಣಸಿಗಿ (ಹುಣಸೇ ಹೊಳೆ) :

ಶೊರಾಪುರ ತಾಲ್ಲೂಕು. ದೇವದುರ್ಗಕ್ಕೆ 27 ಕಿ. ಮಿ. ಉಡುಪಿಯ ಅಷ್ಟ ಮಠಗಳಲ್ಲಿ ಒಂದಾದ ಶಿರೂರು ಮಠದ ಶ್ರೀ ಲಕ್ಷ್ಮಿಮನೋಹರ ತೀರ್ಥರು ಸುರಪುರದ ಶ್ರೀವೆಂಕಟೇಶಾ ಚಾರ್ಯರಿಗೆ ಆಶ್ರಮವನ್ನಿತ್ತು, ಮಾಧವ ತೀರ್ಥರೆಂದು ಕರೆದು, ಶುಕ್ಲ ಯಜುರ್ವೇದಿ ಶಿಷ್ಯರಿಗಾಗಿ ಪ್ರತ್ಯೇಕ ಕಾಣ್ವಮಠವನ್ನು ಪ್ರಾರಂಭಿಸಿದರು. ಇದರ ಕೇಂದ್ರಸ್ಥಳ ಹುಣಶೇ ಹೊಳೆ. ಈ ಮಠದ ಉಪಾಸ್ಯ ದೇವತಾ ವಿಗ್ರಹ ತಾಂಡವ ಶ್ರೀ ವಿಠಲ ಕೃಷ್ಣ ಹಾಗೂ ರುಕ್ಮಿಣಿ ಸತ್ಯಭಾಮಾ ಸಮೇತ ವೇಣುಗೋಪಾಲ ಕೃಷ್ಣ.

## 262. ಯರಗೋಳ :

ಬೆಂಗಳೂರು 620 ಕಿ. ಮಿ. ಇದು ಮದ್ರಾಸ್ ಮುಂಬೈ ರೈಲುಮಾರ್ಗದಲ್ಲಿ ನಲ್ವಾರ್ ನಿಲ್ದಾಣಕ್ಕೆ 10 ಕಿ. ಮಿ. ಯಾದಗಿರಿಯಿಂದ ಬಸ್ ಸೌಕರ್ಯವೂ ಇದೆ. ಇದು ಸಣ್ಣ ಗ್ರಾಮವಾದರೂ ಮಹಾಪುಣ್ಯ ಕ್ಷೇತ್ರ. ಊರಿನಿಂದ 1 ಕಿ. ಮಿ. ದೂರದಲ್ಲಿ ಪ್ರಕೃತಿ ನಿರ್ಮಿತ ಗುಹೆ ಹಾಗೂ ಪ್ರಾಣದೇವರ ಗುಡಿ ಇದೆ. ಇದನ್ನು ಪ್ರಾಣ ಪ್ರತಿಷ್ಠೆಮಾಡಿದವರು ಶ್ರೀ ಜಯತೀರ್ಥರು. ಮುಂದೆ ಕೊಸೇರಿ ಮನೆತನದವರು ಈ ಮುಖ್ಯಪ್ರಾಣನಿಗೆ ಒಂದು ಕಲ್ಲಿನ ಮಂಟಪ ನಿರ್ಮಿಸಿದ್ದಾರೆ. ಇಲ್ಲಿ ಕೋನೇರೀಶಾಚಾರ್ಯರ ಪ್ರತಿಮೆಯೂ ಇದೆ. ಶ್ರೀ ಜಯ ತೀರ್ಥರು ಇಲ್ಲಿ ಕೋನೇರೀಶಾಚಾರ್ಯರಿಗೆ ಶ್ರೀಮನ್ನ್ಯಾಯ ಸುಧಾ ಗ್ರಂಥವನ್ನೂ ಪಾಠ ಹೇಳುತ್ತಿದ್ದಾಗ ಒಂದು ಸರ್ಪವು ಬಂದು ಅದನ್ನು ಕೇಳಿ ಹೋಗುತ್ತಿದ್ದಿತಂತೆ. ಅದರ ಸ್ಮರಣೆಗೆ ನಿಂತಿರುವ ಮಂಟಪವೇ ಕೋನೇರಿಶಾಚಾರ್ಯರ ಮಂದಿರ.

ಈ ಕ್ಷೇತ್ರವು ಪೂರ್ವದಲ್ಲಿ ಶಂಖನೆಂಬ ಋಷಿ ಬೇಟೆಗಾರನೊಬ್ಬನಿಗೆ ಶ್ರೀ ಹರಿಯ ಸರ್ವೋತ್ತಮ ತತ್ವವನ್ನು ಉಪದೇಶಿಸಿ ಅವನಿಗೆ ಮುಕ್ತಿಯಾಗುವಂತೆ ಅನುಗ್ರಹಿಸಿದ ಸ್ಥಳ. ಅದರ ನೆನಪಿನಲ್ಲಿ ಶಂಖತೀರ್ಥವೆಂಬ ಕೊಳವಿದೆ. ಇದನ್ನು ಶಂಖದೊಣೆ ಎನ್ನುವರು. ಅಲ್ಲಿ ಜಯತೀರ್ಥರು ರುದ್ರದೇವರನ್ನು ಆರಾಧಿಸುತ್ತಿದ್ದರಂತೆ. ಆ ಲಿಂಗವೂ ಅಲ್ಲಿದೆ. ಆ ಶಂಖ ತೀರ್ಥದ ಬಳಿಯಲ್ಲಿ ಕೆರೆಯಿದ್ದು ಅದರ ಒಡ್ಡು ಒಡೆದು ನೀರು ಸೋರಿಹೋಗು ತ್ತಿತ್ತಂತೆ. ಶ್ರೀ ಜಯತೀರ್ಥರ ಅನುಗ್ರಹದಿಂದ ಆ ಯರಗೊಳಾದ ಕೆರೆ ಒಡೆಯದಂತೆ ನಿಂತಿತಂತೆ.

ಈ ಪವಿತ್ರ ಶಂಖ ತೀರ್ಥದ ಬಳಿಯ ಯರಗೊಳಾದ ಗುಹೆಯನ್ನು ಶ್ರೀಜಯ ತೀರ್ಥರು ತಮ್ಮ ಧ್ಯಾನ–ಬರಹಕ್ಕಾಗಿ ಆರಿಸಿಕೊಂಡಿದ್ದರು. ಅಲ್ಲಿ ಶ್ರೀ ಜಯತೀರ್ಥರು 22 ವರ್ಷಗಳ ಕಾಲ ಕುಳಿತು ಮಧ್ವಾಚಾರ್ಯರ ಗ್ರಂಥಗಳಿಗೆ ಶ್ರೇಷ್ಠವಾದ ವ್ಯಾಖ್ಯಾನಗಳನ್ನು ರಚಿಸಿದರು. ಅದರಲ್ಲಿ ಮೊದಲು ಬರೆದ ಗ್ರಂಥ 'ಪ್ರಮೇಯ ದೀಪಿಕಾ' ಅವರನ್ನೂ ಕಾಣಲು ಉಡುಪಿ

ಪೇಜಾವರ ಮಠದ ಮಹೇಂದ್ರ ತೀರ್ಥರ ಶಿಷ್ಯರಾದ ವಿಜಯಧ್ವಜ ತೀರ್ಥರು ಬಂದಿದ್ದು ಇಲ್ಲಿಗೇ. ಅವರು ರಚಿಸಿದ ಶ್ರೀಮದ್ ಭಾಗವತಕ್ಕೆ ಪದರತ್ನಾವಳಿ ಎಂಬ ವ್ಯಾಖ್ಯಾನವನ್ನು ಪರಿಶೀಲಿಸಲು ಶ್ರೀ ಜಯತೀರ್ಥರಿಗೆ ಪ್ರಾರ್ಥಿಸಿ ಅವರಿಂದ ಅನುಗ್ರಹ ಪಡೆದಿದ್ದು ಇಲ್ಲಿಯೇ.

ಒಮ್ಮೆ ಇದ್ದಕ್ಕಿದ್ದಂತೆಯೇ ಒಂದು ನಾಗರಹಾವು ಬಂದು, ಜಯತೀರ್ಥರ ತೊಡೆಯನ್ನು ಹತ್ತಿ ಅಲ್ಲಿ ಕೊಂಚ ಕಾಲ ವಿಶ್ರಮಿಸಿಕೊಂಡು ತೊಡೆಯನ್ನು ನಾಲಿಗೆಯಿಂದ ಸವರಿ ಅಲ್ಲಿಂದ ಹೋಯಿತಂತೆ. ಅನಂತರ ಅವರ ಶಿಷ್ಯರು ಅಲ್ಲಿನ ಒರಟು ಬಂಡೆಯ ಮೇಲೆಯೇ ಜಯ ತೀರ್ಥರ ಆದೇಶದಂತೆ ಆಗುಹೆಯ ಮೇಲ್ಛಾವಣಿಯಲ್ಲಿ ಶೇಷದೇವರ ಹೆಡೆಯನ್ನು ಕೆತ್ತಿದ್ದರು. ಅದು ಜಯತೀರ್ಥರಿಗೆ ಶೇಷಕವಚವೇ ಆಯಿತು. ಇಂದಿಗೂ ಯರಗೋಳ ಗುಹೆಯಲ್ಲಿರುವ ಸರ್ಪಾಕೃತಿಯನ್ನು ಯಾತ್ರಾರ್ಥಿಗಳು ವೀಕ್ಷಿಸಬಹುದು. ಪೂಜಾನಂತರ ಒಂದು ಕಪಿಯು ಅಂಗಾರದಲ್ಲಿ 'ಶ್ರೀ ಗೀತಾ' ಎಂದು ಬರೆದು ಹೋಯಿತು. ಜಯತೀರ್ಥರು ಮುಖ್ಯಪ್ರಾಣನೇ ಬಂದು ಹೀಗೆ ಮಾರ್ಗ ತೋರಿಸಿದ್ದಾನೆಂದು ಪುಳಕಿತರಾಗಿ ಅದೇ ಅಂಗಾರದಿಂದ ಒಂದು ಪುಟ್ಟ ಪ್ರಾಣದೇವರ ಚಿತ್ರವನ್ನು ಸಮೀಪದಲ್ಲಿದ್ದ ಬಂಡೆಗಲ್ಲಿನ ಮೇಲೆ ತಿದ್ದಿ ಬರೆದರು. ಮತ್ತು ಅದಕ್ಕೆ ಶಾಸ್ತ್ರೋಕ್ತ ಪ್ರಾಣಪ್ರತಿಷ್ಠೆ ಮಾಡಿದರು. ಅಂದಿನಿಂದ ಈ ಚಿತ್ರ ವಿಗ್ರಹವಾಗಿ ಮೈತಳೆದಿದೆ.

ಉತ್ತರಾದಿಮಠದ ಶ್ರೀ ರಾಮಚಂದ್ರ ತೀರ್ಥರು ಇಲ್ಲಿಯೇ ವೃಂದಾವನಸ್ಥರಾಗಿದ್ದಾರೆ. (1437) ಅವರಿಂದ ಆಶ್ರಮ ಪಡೆದ ವಿದ್ಯಾನಿಧಿ ತೀರ್ಥರ ಬೃಂದಾವನವೂ (1445 ಕ್ರಿ. ಶ) ಅವರ ಗುರುಗಳ ಪಕ್ಕದಲ್ಲಿದೆ.

## 263. ಮೋತಂಪಲ್ಲಿ :

ಸೇಡಂ ತಾಲ್ಲೂಕು. ಮೊದುಗಪಲ್ಲಿ ಇದರ ಹಳೆಯ ಹೆಸರು. ಇಲ್ಲಿಗೆ ಸೇಡಂನಿಂದ ಬಸ್ಸುಗಳ ಸೌಕರ್ಯವಿದೆ. ಈ ಕ್ಷೇತ್ರ ಮಹಿಮೆಯು ಸ್ಕಂದ ಪುರಾಣದಲ್ಲಿ ಪ್ರಸಿದ್ಧವಾದುದು. ಉಪಬರ್ಹಣನೆಂಬ ಗಂಧರ್ವನು ಬ್ರಹ್ಮಸಭೆಯಲ್ಲಿ ಪರಮೇಶ್ವರ ಪಾರ್ವತಿಯರು ಒಟ್ಟಿಗೆ ಸಭೆಯಲ್ಲಿ ಆಸೀನನಾದುದು ಲಜ್ಜಾಸ್ಪದ ಕಾರ್ಯವೆಂದು ಪರಿಹಾಸ್ಯ ಮಾಡಿದುದರ ಫಲವಾಗಿ ಪಾರ್ವತಿದೇವಿಯ ಶಾಪದಿಂದ ಶೂದ್ರನಾದನು. ಶೂದ್ರನಾದರೂ ಭಗವದ್‌ಭಕ್ತನಾಗಿರೆಂದು ಹರಸಿ ಕಳುಹಿಸುದುದರ ಫಲವಾಗಿ ಈತನು ಮೋತಂಪಲ್ಲಿಯಲ್ಲಿ ಶೂದ್ರನಾಗಿ ಹುಟ್ಟಿ, ಶ್ರೀ ಹನುಮಂತನ ದರ್ಶನ, ಮಂಗಳಾರತಿ, ಸೇವಾ ಮೊದಲಾದವುಗಳನ್ನು ಮಾಡುತ್ತಾ ಕೃತಾರ್ಥನಾದನು. ಈ ರೀತಿ ಶೂದ್ರ ಜನ್ಮ ಬಂದಿದ್ದ ಗಂಧರ್ವರ ವ್ಯಕ್ತಿಯೇ ನಾರದರು. ನಾರದರಿಗೆ ಬಂದಿದ್ದ ಶೂದ್ರ ಜನ್ಮವನ್ನು ನೀಗಿಸಿದಂಥಹ ಸುಕ್ಷೇತ್ರವಿದು. ಇವರೇ ಸ್ನಾನ ಮಾಡಿ ಕೃತಾರ್ಥರಾದ ಪುಷ್ಕರಿಣಿಯೂ ಇಲ್ಲಿದೆ.

ಒಮ್ಮೆ ವಿಗ್ರಹ ಧ್ವಂಸಿಗಳ ಉಪಟಳ ಕಾಲದಲ್ಲಿ ಶ್ರೀ ಹನುಮದ್ವಿಗ್ರಹವು ಛೇದಿಸ ಲ್ಪಟ್ಟಿತು. ಆ ಮೂರ್ತಿಯನ್ನು ತೆಗೆದು ಬೇರೊಂದು ಪ್ರತಿಮೆಯನ್ನು ಅದೇ ಸ್ಥಾನದಲ್ಲಿ ಸ್ಥಾಪಿಸಬೇಕೆಂದು ಈ ದೇಶದ ರಾಜನು ಯೋಚಿಸಿ ಬೇರೆ ಶಿಲೆಯಿಂದ ಪ್ರತಿಮೆಯೊಂದನ್ನು ಮಾಡಿಸಿದನು. ಆದರೆ ಸ್ವಯಂ ವ್ಯಕ್ತವಾದ ಶ್ರೀ ಮಾರುತಿಯು ಸ್ವಪ್ನದಲ್ಲಿ ಬಂದು ತನ್ನ

ಮೂರ್ತಿಯ ಚೂರುಗಳನ್ನೆಲ್ಲಾ ಯಥಾವತ್ತಾಗಿ ಜೋಡಿಸಿ ನಲವತ್ತು ದಿನ ಬಾಗಿಲು ಮುಚ್ಚಿ ಬಿಡಬೇಕೆಂದೂ ಅವರು ಮಾತ್ರ ಕೇವಲ ಉಪವಾಸದಿಂದ ಇರಬೇಕೆಂದು ಸೂಚಿಸಿದರು. ಆದರೆ ಅರ್ಚಕರು ಕೊನೆಯವರೆಗೂ ಉಪವಾಸದಿಂದಿದ್ದು ದಿನಗಳನ್ನು ತಪ್ಪಾಗಿ ಗಣನೆಮಾಡಿ ಕೊಂಡು ಒಂದು ದಿನ ಮುಂಚಿತವಾಗಿಯೇ ಬಾಗಿಲು ತೆರೆದುಬಿಟ್ಟರು. ಪ್ರತಿಮೆಯು ಮೊದಲಿನಂತೆ ಆಗಿ ಹಣೆಯಲ್ಲಿ ಗಾಯವಿದ್ದಂತೆ, ರಕ್ತವಿದ್ದಂತೆಯೂ ಕಾಣಿಸಿತು. ಹಣೆಯ ಮೇಲಿನ ವ್ರಣಕ್ಕೆ ಸರಿಹೋಗುವ ಒಂದು ನರಸಿಂಹ ಸಾಲಿಗ್ರಾಮವನ್ನು ಇರಿಸಿದರು. ಅದು ಹಾಗೆಯೇ ಅಂಟಿಕೊಂಡಿತು. ಈಗಲೂ ಆ ನರಸಿಂಹ ಸಾಲಿಗ್ರಾಮವು ಶಿಲಾಮಯ ಪ್ರತಿಮೆಯಲ್ಲಿ ಅರ್ಧಮಾತ್ರ ಕಾಣಿಸುತ್ತದೆ. ಮೂಲಮೂರ್ತಿಯ ಬದಲಾಗಿ ಸ್ಥಾಪಿಸಬೇಕೆಂದು ತಯಾರಿಸಿದ್ದ ಪ್ರತಿಮೆಯನ್ನು ಗರ್ಭಗುಡಿಯ ಬಲಭಾಗದಲ್ಲಿ ಇಟ್ಟಿದ್ದಾರೆ. ಅದು ಈಗಲೂ ಇದೆ.

ಆಂಧ್ರ ಭಾಷೆಯಲ್ಲಿ ಮುತ್ತುಗದ ಗಿಡಕ್ಕೆ ಮೋದಗು ಚೆಟ್ಟು ಎಂದು ಕರೆಯುತ್ತಾರೆ. ಊರಿನ ನಿರ್ಮಾಣ ಮುತ್ತುಗವನದಲ್ಲಿಯೇ ಆದುದರಿಂದ ಈ ಊರು ಮೋದಗುಪಲ್ಲಿ ಎಂದು ಕರೆಯಲ್ಪಟ್ಟಿತು. ಬರುಬರುತ್ತಾ ಮೋತಕ ಪಲ್ಲಿ, ಮೋತಂಪಲ್ಲಿ ಎಂದಾಯಿತು.

ಇಲ್ಲಿಯ ಶ್ರೀ ಹನುಮಂತನನ್ನು ಮೋತಂಪಲ್ಲಿ ಭೀಮರಾಯನೆಂದು ಸರ್ವರೂ ವ್ಯವಹರಿಸುತ್ತಾರೆ. ಪರಿಸರ ಪ್ರಾಂತದವರೆಲ್ಲರೂ ಈ ಸ್ವಾಮಿಯನ್ನು ಭಜಿಸಿ ತಮ್ಮ ದುರಿತಗಳನ್ನೆಲ್ಲಾ ಕಳೆದುಕೊಂಡು ಇಷ್ಟಾರ್ಥಗಳನ್ನು ಪಡೆಯುತ್ತಿದ್ದಾರೆ.

# ಬೀದರ್ ಜಿಲ್ಲೆ

## 264. ಬೀದರ್ :

ಬೆಂಗಳೂರು 740 ಕಿ. ಮಿ. ಇದಕ್ಕೆ ವಿದುರ ನಗರವೆಂದು ಹೇಳುವರು. ಇದು ನಳ ದಮಯಂತಿಯರ ಭೇಟಿಯ ಸ್ಥಳವೆಂದು ತಿಳಿದುಬಂದಿದೆ.

ಇಲ್ಲಿನ ಸಮೀಪದ ಪ್ರದೇಶವೊಂದರಲ್ಲಿ ನರಸಿಂಹನ ಆವಾಸಸ್ಥಾನವಿದೆ. 2 ಕಿ.ಮಿ. ಉದ್ದವಿರುವ ನೈಸರ್ಗಿಕ ಗುಹೆಯಲ್ಲಿ ಸದಾಕಾಲ ನೀರು ಹರಿಯುತ್ತಿರುತ್ತದೆ. ಹಾಗೆಯೇ ಕೊನೆಯಲ್ಲಿ ಅಸ್ಪಷ್ಟವಾಗಿ ಒಡಮೂಡಿದ ನರಸಿಂಹದೇವರು ಇದ್ದಾರೆ. ನೂರಾರು ಯಾತ್ರಿಕರು ವರ್ಷವಿಡೀ ದರ್ಶನ ಮಾಡುತ್ತಿರುತ್ತಾರೆ. ಇದು ಅಪೂರ್ವ ಗುಹಾಂತರ ನರಸಿಂಹ ದೇವಾಲಯ. ಆಶ್ಚರ್ಯವೇನೆಂದರೆ ಈ ದೂರವನ್ನು ಎದೆ ಮಟ್ಟದ ನೀರಿನಲ್ಲಿ ಕ್ರಮಿಸಿ ಹೋಗ ಬೇಕು. ಒಳಗೆ ಕರಿಶಿಲೆಯ ನರಸಿಂಹನ ವಿಗ್ರಹ ಮೂಡಿದೆ. ಇದನ್ನು ಜರಣ ನರಸಿಂಹ ಎನ್ನುವರು.

## 265. ಪಾಪನಾಶಿನಿ :

ಬೀದರ್ ನಗರದಿಂದ 3 ಕಿ. ಮಿ. ದೂರದಲ್ಲಿ ಶ್ರೀ ರಾಮನಿಂದ ಸ್ಥಾಪಿತವಾದ ಬೃಹದಾಕಾರದ ಶಿವಲಿಂಗವಿದೆ. ಶುಕ್ರಾಚಾರ್ಯರೂ ಇದನ್ನು ಪೂಜಿಸಿದ್ದರು ಎಂದು ಹೇಳುವರು.

ಬೀದರನ ಕೋಟೆ, ಮಸೀದಿಗಳು, ಫಿರಂಗಿಗಳು, ಬುರುಜುಗಳು ಚಾರಿತ್ರಿಕ ಆಸಕ್ತಿ ಇರುವವರಿಗೆ ಉತ್ತಮ ಸ್ಥಳ. ಊರಿಗೆ 4 ಕಿ.ಮಿ. ದೂರದ ನಾನಕ್ ಜರಿ ಎಂಬುದೂ ನಿಸರ್ಗರಮ್ಯ ಸ್ಥಳ.

## 266. ಅನಂತ ಶಯನ ಮಂದಿರ :

ಬೀದರ್‌ಗೆ 2 ಕಿ.ಮಿ. ಚಾಮರಾಜಪುರ ಅಗ್ರಹಾರದಲ್ಲಿರುವ ಈ ಮಂದಿರ ಸಾವಿರಾರು ವರ್ಷಗಳ ಪ್ರಾಚೀನತೆಯನ್ನು ಹೊಂದಿದೆ. ವಿದುರನು ರಾಜನಾಗಿದ್ದಾಗ ಈ ಮಂದಿರ ರೂಪುಗೊಂಡಿತೆಂದು ಹೇಳಿಕೆ ಇದೆ. ಕರಿಶಿಲೆಯಲ್ಲಿ ರೂಪುಗೊಂಡಿರುವ ಅನಂತ ಶಯನ ವಿಗ್ರಹ ಮನ ಮೋಹಕವಾಗಿದೆ.

## 267. ಹುಮನಾ ಬಾದ್ :

ಬೀದರ್‌ನಿಂದ 52 ಕಿ.ಮಿ. ಮುಂಬೈ ಹೈದರಾಬಾದ್ ರಾಷ್ಟ್ರೀಯ ಹೆದ್ದಾರಿಯಲ್ಲಿದ NH 9 ಇಲ್ಲಿ ವೀರಭದ್ರ ದೇವರ ಗುಡಿ ಇದೆ. ಇಲ್ಲಿರುವ ಒಂದು ದೊಡ್ಡ ಕಂಬವನ ತೂಗುವ ಕಂಬವೆಂದು ಹೇಳುವರು. ಮೆದುವಾಗಿ ತಳ್ಳಿದರೆ ಅದು ಸುತ್ತುವುದೊ ಎಂಬಂ ಸರಿಯುತ್ತದೆ. ಹಾಗೂ ಫೂರ್ಣವಾಗಿ ಅಲುಗಾಡುತ್ತದೆ.

# ತಮಿಳುನಾಡು

## 268. ಘಟಿಕಾಚಲ :

ಚೆಂಗಲ್ಪಟ್ಟು ಜಿಲ್ಲೆ, ಚಿತ್ತೂರು-ಪಲ್ಲಿಪಟ್ಟು ಮಾರ್ಗದಲ್ಲಿ ಶೊಲಿಂಗರ್ ಬಳಿ. (12 ಕಿ.ಮಿ.) ಬೆಂಗಳೂರು-ತಿರುಪತಿ ರೈಲುಮಾರ್ಗದ ಮಧ್ಯೆ ಅರಕೋಣಂ ಅಥವಾ ತಿರುತ್ತಣಿ ಯಿಂದ ಬಸ್ಸು. ಇದು ಆಂಧ್ರ ಪ್ರದೇಶದ ಗಡಿಯಲ್ಲಿ ತಮಿಳುನಾಡಿನ ಉತ್ತರ ಅಂಚಿನಲ್ಲಿರುವ ಪುಣ್ಯಕ್ಷೇತ್ರ. ಇಲ್ಲಿ ಎರಡು ಕಡಿದಾದ ಬೆಟ್ಟಗಳಿವೆ. ನರಸಿಂಹದೇವರ ಹಾಗೂ ಪ್ರಾಣದೇವರ ಬೆಟ್ಟಗಳು, ನರಸಿಂಹದೇವರ ಬೆಟ್ಟಕ್ಕೆ 1350 ಮೆಟ್ಟಿಲುಗಳಿದ್ದು, ಕೆಲವು ಕಡೆ ಬಲು ಕಡಿದಾಗಿದೆ. ಅಶಕ್ತರು ಮೇಲೇರಲು ಡೋಲಿ ಸೌಲಭ್ಯವೂ ಉಂಟು. ವಾಯುದೇವರ ಬೆಟ್ಟಕ್ಕೆ 650 ಮೆಟ್ಟಿಲುಗಳಿವೆ. ಹತ್ತಲು ಸ್ವಲ್ಪ ಪ್ರಯಾಸಕರ. ಆಂಜನೇಯನ ಕೈಯಲ್ಲಿ ಶಂಖ ಚಕ್ರಗಳಿವೆ. ಈತ ಸ್ವಪ್ನಗಳ ಮೂಲಕ ವ್ಯಾಧಿಗಳಿಗೆ ಪರಿಹಾರ ಸೂಚಿಸುತ್ತಾನೆ ಎಂಬ ನಂಬಿಕೆ ಜನರಲ್ಲಿದೆ.

ಇಲ್ಲಿ ಶ್ರೀ ಅದಮಾರುಮಠದ ಶ್ರೀ ವಿಭುದ ಪ್ರಿಯ ತೀರ್ಥರ ಬೃಂದಾವನವಿದೆ. ಇವರ ಶಿಷ್ಯರೇ ಪೇಜಾವರ ಮಠದ ವಿಶ್ವಮಾನ್ಯ ತೀರ್ಥರು. ಇವರು ಸ್ಥಾಪಿಸಿದ ಉಡುಪಿಯ ಸಂಸ್ಕೃತ ಕಾಲೇಜು ಇಂದಿಗೂ ಮಹಾ ಪಾಠಶಾಲೆಯಾಗಿ ನೂರಾರು ವಿದ್ವಾಂಸರನ್ನು ವರ್ಷವರ್ಷವೂ ಸಿದ್ಧಪಡಿಸುತ್ತಿದೆ.

ಇಲ್ಲಿ ಯಾತ್ರಿಕರಿಗೆ ತಂಗಲು ಛತ್ರಗಳೂ, ಲಾಡ್ಜ್‌ಗಳೂ ಇವೆ. ಅದಮಾರುಮಠದ ಕೃಷ್ಣಮಠ ತಂಗಲು, ತೀರ್ಥಪ್ರಸಾದ ಸ್ವೀಕರಿಸಲು ಮತ್ತೊಂದು ಸ್ಥಳ.

ಈ ಕ್ಷೇತ್ರದಲ್ಲಿ ಒಂದು ಗಳಿಗೆ (ಘಟಿಕ) ತಂಗಿದ್ದರೂ ಮೋಕ್ಷ ಲಭ್ಯವಾಗುವುದೆಂದು ಹೇಳುತ್ತಾರೆ.

## 269. ಚೆನ್ನೈ :

ಭಾರತದ ಮಹಾನಗರಗಳಲ್ಲಿ ಇದೂ ಒಂದು. ಏಷಿಯಾ ಖಂಡದಲ್ಲೇ ಬೃಹತ್ ಸಾಗರ ತಟವನ್ನು ಹೊಂದಿರುವ ಸ್ಥಳ. ಇಲ್ಲಿ ಕೆಲವು ಪ್ರಸಿದ್ಧ ಪವಿತ್ರ ದೇವಾಲಯಗಳಿವೆ.

**ಪಾರ್ಥಸಾರಥಿ ಮಂದಿರ :** ಟ್ರಿಪ್ಲಿಕೇನ್ ಬಳಿ ಇರುವ ಈ ದೇವಾಲಯ 8ನೇ ಶತಮಾನದ ರಚನೆ. ಇಲ್ಲಿ ಶ್ರೀಕೃಷ್ಣ ಪಾರ್ಥಸಾರಥಿ ರೂಪದಲ್ಲಿದ್ದಾನೆ.

ಕಪಾಲೇಶ್ವರ ಮಂದಿರ : ಮೈಲಾಪುರದಲ್ಲಿ ಇರುವ ಬೃಹತ್ ದೇವಾಲಯುವಿದು. ಮುಖ್ಯಮಂದಿರದಲ್ಲಿ ಶಿವಲಿಂಗವಿದೆ. ಮಯೂರ ರೂಪಿನಲ್ಲಿ ಕಾಣಿಸಿಕೊಂಡ ಶಿವನ ರೂಪವನ್ನು ಇಲ್ಲಿ ಕಾಣಬಹುದು. ಇದು 300 ವರ್ಷಗಳಿಗೂ ಹಳೆಯದು.

ಶ್ರೀ ಬಾಲಾಜಿ ಮಂದಿರ : ಸಾಹುಕಾರ ಪೇಟೆಯಲ್ಲಿನ ವೆಂಕಟೇಶ್ವರನ ಭವ್ಯ ಮೂರ್ತಿಯನ್ನು ಒಳಗೊಂಡ ದೇವಾಲಯ.

ತಿರುಪತ್ತಿಯೂರ್ : ಸೆಂಟ್ರಲ್ ರೈಲ್ವೆ ನಿಲ್ದಾಣದಿಂದ 10 ಕಿ.ಮಿ. ಮಂದಿರದಲ್ಲಿ ಮೃತ್ತಿಕ ನಿರ್ಮಿತ ಶಿವಲಿಂಗವಿದೆ.

## 270. ತಿರುವನಲ್ಲೂರ್ :

ಚೆನ್ನೈ - ರಾಯಚೂರು ರೈಲುಮಾರ್ಗದಲ್ಲಿ ತಿರುವನಲ್ಲೂರು ರೈಲ್ವೆ ನಿಲ್ದಾಣವಿದೆ ಇಲ್ಲಿಗೆ 42 ಕಿ. ಮಿ. ಇಲ್ಲಿಂದ 3 ಕಿ. ಮಿ. ದೂರದಲ್ಲಿ ಈ ಸ್ಥಳವಿದೆ. ಚೆನ್ನೈನಿಂದಲೇ ನೇ ಬಸ್ಸುಗಳ ಸೌಕರ್ಯವೂ ಉಂಟು.

ಇದು ಪುರಾಣದಲ್ಲಿ ಪುಣ್ಯಾವರ್ತ ಕ್ಷೇತ್ರವೆಂದು ಹೆಸರುಗೊಂಡಿದೆ. ಇಲ್ಲಿ ವಿಷ್ಣು ಮಧುಕೈಟಭರನ್ನು ಸಂಹರಿಸಿದನೆಂದು ಹೇಳಲ್ಪಟ್ಟಿದೆ. ಇಲ್ಲಿನ ಮುಖ್ಯ ಪ್ರಾಚೀನ ಮಂದಿ ಶ್ರೀ ವೀರರಾಘವ ಮಂದಿರ. ಇಲ್ಲಿ ಶೇಷಶಾಯಿಯಾದ ಶ್ರೀ ವಿಷ್ಣುವನ್ನು ದರ್ಶನಮಾ ಬಹುದು. ಇದರ ಸಮೀಪ ಲಕ್ಷ್ಮೀಮಂದಿರವಿದೆ. ಈ ದೇವರನ್ನು ಕನಕವಲ್ಲಿ ಅಥವ ವಸುಮತಿ ಎನ್ನುವರು. ಇದರ ಹಿಂಭಾಗದಲ್ಲಿ ಶ್ರೀ ರಾಮಮಂದಿರವಿದೆ. ಮಂದಿರದ ಹೊ ಭಾಗದಲ್ಲಿ ಹೃತ್ತಾಪನಾಶನ ತೀರ್ಥವೆಂಬ ಹೆಸರಿನ ಸರೋವರವಿದೆ. ಇದರ ಸ್ನಾನ ಪಾಪನಾಶ ಎಂಬ ನಂಬಿಕೆ ಅನೇಕ ಭಕ್ತಾದಿಗಳಲ್ಲಿ ಉಂಟು.

## 271. ಶ್ರೀ ಪೆರಂಬದೂರು :

ತಿರುವನಲ್ಲೂರು ರೈಲ್ವೆ ನಿಲ್ದಾಣದಿಂದ 20 ಕಿ.ಮಿ. ಚೆನ್ನೈನಿಂದ ಬಸ್ಸಿನಲ್ಲಿ ನೇರವಾ 61 ಕಿ. ಮಿ. ಇದು ತಮಿಳುನಾಡಿನ ಗ್ರಾಮಾಂತರದ ಒಂದು ಕ್ಷೇತ್ರ. ಇದನ್ನು ಭೂತಪು ಎಂತಲೂ ಕರೆಯುವರು. ಇಲ್ಲಿನ ಪುರಾಣ ಪ್ರಸಿದ್ಧವಾದ ಕೇಶವನಾರಾಯಣ ಮಂದಿರದ ಶೇಷಶಾಯಿಯಾದ ನಾರಾಯಣಮೂರ್ತಿಯನ್ನು ದರ್ಶನಮಾಡಬಹುದು. ಈ ದೇವಾಲಯ ಹೊರಭಾಗದಲ್ಲಿ ಅನಂತ ಸರಸ್ಸೆಂಬ ಸರೋವರವಿದೆ. ಇದು ಶ್ರೀರಾಮಾನುಜರ ಜನ್ಮಸ್ಥ

## 272. ಕಾಂಜೀವರಂ :

ಚೆನ್ನೈನಿಂದ 75 ಕಿ. ಮಿ. ಭಾರತದ 7 ಮೋಕ್ಷಕ್ಷೇತ್ರಗಳಲ್ಲಿ ಒಂದು. ತಮಿಳುನಾಡಿ ಪ್ರಖ್ಯಾತ ತೀರ್ಥಕ್ಷೇತ್ರಗಳಲ್ಲಿ ಒಂದು. ಶೈವ ವೈಷ್ಣವ ಸಂಪ್ರದಾಯಿಗಳಿಗೆ ಪವಿತ್ರ ಕ್ಷೇ ಹರಿಹರ ಕ್ಷೇತ್ರವೆಂದೂ ಹೆಸರಿದೆ. ಈ ನಗರದಲ್ಲಿ ಎರಡು ಭಾಗವಿದೆ. ಶಿವಕಂಚಿ ಮ ವಿಷ್ಣುಕಂಚಿ. ಶಿವಕಂಚಿಯ ಬಸ್ ನಿಲ್ದಾಣದ ಬಳಿ ಕಾಶಿವಿಶ್ವನಾಥ ಮಂದಿರವಿದೆ. ಅಲ್ಲಿಂ 1 ಕಿ.ಮಿ. ದೂರದಲ್ಲಿ ಏಕಾಂಮ್ರೇಶ್ವರ ದೇವಾಲಯುವಿದೆ. ಇದು 200 ಎಕರೆ ಪ್ರದೇಶವ

ಆಕ್ರಮಿಸಿಕೊಂಡಿರುವುದು. ಇಲ್ಲಿ ಗೋಪುರ 185 ಮೀ. ಇದ್ದು, ದಕ್ಷಿಣ ಭಾರತದಲ್ಲೇ ಎತ್ತರವಾಗಿದೆ. ಮರಳು ನಿರ್ಮಿತ ಶಿವಲಿಂಗವು ಇಲ್ಲಿರುವುದು. ಈ ಮಂದಿರದ ಹಿಂಭಾಗದಲ್ಲಿ ಆಮ್ರ ವೃಕ್ಷವಿದೆ. ಇದರ ಕೆಳಗೆ ಪಾರ್ವತಿ ಘೋರ ತಪಸ್ಸನ್ನಾಚರಿಸಿದಳೆಂದು ಹೇಳಲ್ಪಟ್ಟಿದೆ. ಈ ವೃಕ್ಷಕ್ಕೆ ವಿಭಿನ್ನ ಶಾಖೆಗಳಿದ್ದು, ವಿಭಿನ್ನ ರುಚಿಯ ಫಲಗಳು ಲಭಿಸುವುದಾಗಿ ಹೇಳುತ್ತಾರೆ.

ವಿಷ್ಣು ಕಂಚಿ ಭೂದೇವಿಯ ನಿತಂಬದ ಭಾಗವೆಂದು ಪುರಾಣ ಹೇಳುತ್ತದೆ. ಪ್ರವೇಶ ದ್ವಾರದಲ್ಲಿ ನರಸಿಂಹ ಮಂದಿರವಿದೆ. ನರಸಿಂಹ ಮಂದಿರದ ಹಿಂಭಾಗದಲ್ಲಿ ಒಂದು ದ್ವಾರದ ಮೂಲಕ 24 ಮೆಟ್ಟಿಲುಗಳನ್ನೇರಿದರೆ ವರದರಾಜ ಸ್ವಾಮಿಯನ್ನು ದರ್ಶಿಸಬಹುದು. ಕಪ್ಪು ಕಲ್ಲಿನಲ್ಲಿ ಕಡೆದ ಶ್ರೀ ವಿಷ್ಣುವಿನ ಕೊರಳಲ್ಲಿ ಸಾಲಿಗ್ರಾಮ ಸರವಿದೆ. ದೇವರು ಚತುರ್ಭುಜ ರಾಗಿದ್ದು ನಿಂತಿರುವ ಭಂಗಿಯಲ್ಲಿದ್ದಾರೆ. ಪಶ್ಚಿಮಕ್ಕೆ ಮುಖ ಮಾಡಿಕೊಂಡಿರುವರು. ವರಪ್ರದ ರಲ್ಲಿ ಇವರು ತುಂಬಾ ಶ್ರೇಷ್ಠರು. ಇಲ್ಲಿರುವ ಶ್ರೀಹರಿ ರಸಿಕಾಗ್ರೇಸರ, ಅಗ್ರಹಾರಗಳಿಂದ ಸುತ್ತುವರಿಯಲ್ಪಟ್ಟು ಬ್ರಹ್ಮದೇವರ ಯಜ್ಞ ಭೂಮಿಯಲ್ಲಿ ಪ್ರಾದುರ್ಭವಿಸಿದ ಮೂರ್ತಿ. ವೈಕುಂಟ ಪೆರುಮಾಳ್ ದೇವಾಲಯವು ಈ ಭಾಗದಲ್ಲೇ ಇದ್ದು ಇಲ್ಲಿ ವಿಷ್ಣುವಿನ ವಿಗ್ರಹವಿದೆ. ಈ ದೇವರನ್ನು 3 ಭಂಗಿಗಳಲ್ಲಿ, ಬೇರೆ ಬೇರೆ ಸ್ಥಾನಗಳಲ್ಲಿ ನೋಡಬಹುದಾಗಿದೆ. ಇದರ ಪೂರ್ವಕ್ಕೆ ಲಕ್ಷ್ಮಿಯ ಮಂದಿರವಿದೆ.

ಶ್ರೀ ವ್ಯಾಸರಾಜರು ಅನೇಕ ವರ್ಷ ಇಲ್ಲಿ ತಂಗಿ ವಾದಿಗಳನ್ನು ಜಯಿಸಿದ ಮತ್ತೊಂದು ಸಂಗತಿ ಸುಪ್ರಸಿದ್ಧ ಹಾಗೂ ವಿಶೇಷ.

## 273. ಭುವನ ಗಿರಿ :

ದ. ಆರ್ಕಾಟ್ ಜಿಲ್ಲೆ, ಇದು ಕಾಂಚಿಪುರದ ಬಳಿಯ ಊರು. ಶ್ವೇತಾನದಿ ತೀರ ದಲ್ಲಿದೆ. ರಾಘವೇಂದ್ರ ತೀರ್ಥರು ಹುಟ್ಟಿದ ಸ್ಥಳ. ಅವರು ವಾಸಿಸುತ್ತಿದ್ದ ಮನೆ, ಅವರು ಪೂರ್ವಾಶ್ರಮ ದಲ್ಲಿ ನಿತ್ಯ ಪೂಜಿಸುತ್ತಿದ್ದ ಪ್ರಾಣದೇವರ ಗುಡಿ. ರಾಯರು ಶಾಸ್ತ್ರ ಅಭ್ಯಾಸಮಾಡುತ್ತಿದ್ದ ಮುರುಕು ಮಂಟಪ ಇವುಗಳನ್ನು ಕಾಣಬಹುದು.

## 274. ಮಧುರಾಂತಕಮ್ :

ಚೆಂಗಲ್ಪಟ್ಟು ಜಿಲ್ಲೆ, ಚೆನ್ನೈನಿಂದ 70 ಕಿ. ಮಿ. ರೈಲು ಬಸ್ಸುಗಳೆರಡರಲ್ಲೂ ಇಲ್ಲಿಗೆ ಪ್ರಯಾಣಿಸಬಹುದು. ಇಲ್ಲಿ ಬಕುಳ ಪುಷ್ಪ ಬೆಳೆಯುವುದರಿಂದ ಇದನ್ನು ಬಕುಳಾರಣ್ಯವೆಂದೂ ಕರೆದಿದ್ದಾರೆ. ಇಲ್ಲಿನ ದೇವರುಗಳೆಂದರೆ, ಕೋದಂಡ ರಾಮ ಲಕ್ಷ್ಮಣ ಮತ್ತು ಸೀತೆ, ಅಲ್ಲದೆ ಕರುಣಾಕರ ಮೂರ್ತಿಯೂ ಇದ್ದಾನೆ. ಇಲ್ಲಿನ ವಿಶೇಷವೆಂದರೆ ಆಂಜನೇಯ ರಾಮದೇವರ ಪಕ್ಕದಲ್ಲಿಲ್ಲದಿರುವುದು. ಆಂಜನೇಯ ಇಲ್ಲಿ ರಾಮನನ್ನು ಹಿಂಬಾಲಿಸಿರಲಿಲ್ಲವೆಂಬುದು ಅದಕ್ಕೆ ಕಾರಣವಂತೆ. ರಾಮನವಮಿ ಇಲ್ಲಿಯ ಮುಖ್ಯ ಉತ್ಸವ. ವೈಷ್ಣವರಿಗೆ ಇದು ಮುಖ್ಯ ಯಾತ್ರಾಸ್ಥಳ.

## 275. ತಿರುತ್ತಣಿ :

ಚೆಂಗಲ್ಪಟ್ಟು ಜಿಲ್ಲೆ, ಚೆನ್ನೈನಿಂದ ಸುಮಾರು 165 ಕಿ.ಮಿ. ತಿರುಪತಿಯಿಂದ 53 ಕಿ.ಮಿ. ಬೆಟ್ಟದ ಮೇಲಿನ ಮಂದಿರದಲ್ಲಿ ಸುಬ್ರಮಣ್ಯಸ್ವಾಮಿಯಿದ್ದಾನೆ. ಬೆಟ್ಟದ ಮೇಲೆ ಹೋಗಲು ಉತ್ತಮ ದಾರಿ ಇದೆ. ಮೆಟ್ಟಿಲುಗಳ ಮೂಲಕವೂ ಮೇಲೆ ಹೋಗಬಹುದು. ಪಳನಿ, ತಿರುಚೆಂದೂರ್, ತಿರುಪ್ಪುರ ಕುಂಡ್ರಮ್, ಪನ ಮಂದಿರ ಶೋಲೈ, ಸ್ವಾಮಿ ಮಲೈ, ಇತರ ಕಾರ್ತಿಕೇಯ ಕ್ಷೇತ್ರಗಳು.

## 276. ತಿರುವಣ್ಣಾಮಲೈ :

ಇದನ್ನು ಅರುಣಾಚಲಕ್ಷೇತ್ರವೆನ್ನುವರು. ಈಶ್ವರನ ತೇಜೋಲಿಂಗಗಳಲ್ಲಿ ಒಂದಾದ ಇದು ಪವಿತ್ರ ಕ್ಷೇತ್ರ. ವಾದಿರಾಜರು ಈ ದೇವರನ್ನು ಬಹುವಾಗಿ ಸ್ತುತಿಸಿದ್ದಾರೆ. ಅರುಣಾಚಲದಲ್ಲಿ ಕಾರ್ತಿಕಮಾಸದ ಹುಣ್ಣಿಮೆ ದಿನ ಒಂದು ಬಂಡೆಯ ಮೇಲೆ ಮಣಗಟ್ಟಲೆ ಕರ್ಪೂರವನ್ನು ಉರಿಸುವರು. ಆಗ ಏಳುವ ಬೃಹದಾಕಾರದ ಜ್ವಾಲೆ ದರ್ಶನಾರ್ಹ. ಶಿವನ ಅಗ್ನಿಲಿಂಗ ಪ್ರಸಿದ್ಧಿಯಿಂದ ಈಕ್ಷೇತ್ರ ಜನಪ್ರಿಯವಾಗಿದೆ.

## 277. ತಿರುಕೋಯಿಲೂರು :

ದ. ಆರ್ಕಾಟ್ ಜಿಲ್ಲೆ.

ದ. ರೈಲ್ವೆಯ ಕಾಟ್ಪಾಡಿ - ವಿಲ್ಲುಪುರ ಮಾರ್ಗದಲ್ಲಿ ಅರುಣಾಚಲದಿಂದ 40 ಕಿ.ಮಿ. ತಿರುಕೋವಿಲೂರ್ ಸ್ಟೇಷನ್ ಇದೆ. ಇಲ್ಲಿಂದ ಸುಮಾರು 2 ಕಿ.ಮಿ. ದೂರದಲ್ಲಿ ಶ್ರೀ ರಘೂತ್ತಮ ತೀರ್ಥರ ಭವ್ಯ ಬೃಂದಾವನವಿದೆ.

ಇದರ ಮೊದಲ ಹೆಸರು ಮಣಂಪೂಂಡಿ ತಮಿಳಿನಲ್ಲಿ ಇದು ವಿವಾಹಮಂಟಪ, ವಿವಾಹ ಸ್ಥಳ, ಎಂಬ ಅರ್ಥ ಕೊಡುವುದು. ದಕ್ಷಪ್ರಜಾಪತಿಯು ತನ್ನ ಮಗಳಾದ ಸತಿಯ ವಿವಾಹವನ್ನು ಮಾಡಲು ಬಯಸಿ ಆರಸಿದ ಶ್ರೇಷ್ಠ ಸ್ಥಳ. ಸತಿ ಹಾಗೂ ರುದ್ರದೇವರು ವಿವಾಹವಾದ ಪವಿತ್ರ ಸ್ಥಳ. ಗಾಲವ ಋಷಿಗಳು ಇದೇ ಸ್ಥಳದಲ್ಲಿ ತಪಸ್ಸು ಮಾಡಿ ಸಿದ್ಧಿ ಪಡೆದರು. ಪುರಾಣಕಾಲದಲ್ಲಿ ಇದು ಪಂಚಕೃಷ್ಣಾರಣ್ಯ ಕ್ಷೇತ್ರ. ತ್ರಿವಿಕ್ರಮಕ್ಷೇತ್ರ, ಅನೇಕ ಋಷಿ ಮುನಿಗಳು ತಪಸ್ಸು ಮಾಡಿ ಸಿದ್ಧಿಯನ್ನು ಪಡೆದ ತಪೋಭೂಮಿ.

ಶ್ರೀ ರಘೂತ್ತಮ ತೀರ್ಥರ ಪೂರ್ವಾಶ್ರಮದ ಬಗ್ಗೆ ವಿವರಗಳು ಲಭ್ಯವಿಲ್ಲವಾದರೂ ಗುರುಚರ್ಯ, ಕಥಾಕಲ್ಪತರುಗಳಲ್ಲಿ ಅವರು ಶ್ರೀ ರಘುವರ್ಯ ತೀರ್ಥರ ಪೂರ್ವಾಶ್ರಮದ ತಂಗಿಯ ಮಗ ಎಂದೂ ರಾಮಾಶಾಸ್ತ್ರಿ ಎಂಬ ನಾಮಾಭಿಧಾನ ಉಳ್ಳವರು ಎಂದೂ ತಿಳಿಯುವುದು. ಅವರು ಬಿಜಾಪುರ ಜಿಲ್ಲಾ ಮಣೂರು ಗ್ರಾಮದವರು ಎಂದು ಹೇಳಲು ಆಧಾರಗಳೇನೂ ಇಲ್ಲ. ಆದರೆ ಕೆಲವು ಕಾಲ ಅವರು ಮಣೂರಿನ ಖ್ಯಾತ ವಿದ್ವಾಂಸ ಆದ್ಯ ಮನೆತನದ ಶ್ರೀ ವರದರಾಜಾಚಾರ್ಯರಲ್ಲಿ ಕೆಲವೇ ದಿನಗಳು ಅಭ್ಯಾಸಕ್ಕೆ ಬಂದಿದ್ದರೆಂದೂ ನಂತರ ಉತ್ತರಾದಿಮಠದ ಸ್ವಾಮಿಗಳಾಗಿ 38 ವರ್ಷಗಳ ಕಾಲ ಸರ್ವಜ್ಞಪೀಠವನ್ನೂ ಅಲಂಕರಿಸಿದ್ದ ರೆಂದು ತಿಳಿದುಬಂದಿದೆ.

ಇವರು ಏಳು ಗ್ರಂಥಗಳ ಕರ್ತೃಗಳಾಗಿದ್ದಾರೆ. ತತ್ವಪ್ರಕಾಶಿಕ ಭಾವಭೋಧ, ಗೀತಾಭಾಷ್ಯ, ಟೀಕಾ ಪ್ರಮೇಯ, ದೀಪಿಕ ಭಾವಭೋಧ, ಬೃಹದಾರಣ್ಯಕ ಭಾವಭೋದ ಇತ್ಯಾದಿ ಅಪೂರ್ವ ಗ್ರಂಥಗಳ ಲೇಖಕರು. ಸಂಸ್ಥಾನದ ದೃಷ್ಟಿಯಿಂದ ಅವರು ಇದ್ದ ಕಾಲ ಒಂದು ರೀತಿಯ ಸಂಕ್ರಮಣಕಾಲ. ಇಂಥದ್ದರಲ್ಲಿ ಸರ್ವಜ್ಞಪೀಠದ ಮಹಾತ್ಮೆಯನ್ನು ವೃದ್ಧಿಗೊಳಿಸುವ ಜವಾಬುದಾರಿ ಇವರ ಪಾಲಿಗೆ ಬಂದಿತ್ತು. 12 ವರ್ಷಗಳವರೆಗೆ ಧೃವ ತಪಸ್ಸು ಮಾಡಿದ ಮಣೂರಿನಲ್ಲಿ ಒಂದು ವಿದ್ಯಾಪೀಠವನ್ನು ಸ್ಥಾಪಿಸಿ ಇದನ್ನು ದಕ್ಷಿಣದ ವಿದ್ಯಾಕೇಂದ್ರವನ್ನಾಗಿ ಮಾಡಿದರು. ಮುಸಲ್ಮಾನರ ದಾಂಧಲೆಯಿಂದ ಸಿದ್ಧಾಂತ ಪ್ರಚಾರ, ಶಿಷ್ಯ ಸಂಗ್ರಹಣೆ ಸಾಧ್ಯವಿಲ್ಲದುದಾಗಿರುವ ಕಾಲದಲ್ಲಿ ನಿರಂತರ ಪ್ರಚಾರ, ಪರಮತ ಖಂಡನೆ, ಸತ್ ಶಿಷ್ಯ ಪರಂಪರೆಯ ನಿರ್ಮಾಣದ ಕೆಲಸವನ್ನು ದೇಶಾದ್ಯಂತ ಸಂಚಾರಮಾಡಿ ನಿರ್ವಹಿಸಿದ ಕೀರ್ತಿ ಇವರದು. ಇವರಿಂದಾಗಿ ಬಿದರಹಳ್ಳಿ, ಲಿಂಗೇರಿ, ಗುರ್ಜಾರಿ, ಉಮರ್ಜಿ ಈ ಸ್ಥಳಗಳಲ್ಲಿ ಮಾಧ್ವ ಪಂಡಿತ ಪರಂಪರೆ ಪ್ರಾರಂಭವಾಯಿತು. ಇವರ ಸಂದೇಶವೆಂದರೆ, "ಭಗವಂತನನ್ನು ಭಜಿಸಿದರೆ ನಿಮ್ಮ ಮುಂಬದಿಯಲ್ಲಿ ನೃಸಿಂಹ ರೂಪದಿಂದಲೂ, ಹಿಂಬದಿಯಲ್ಲಿ ಶ್ರೀಕೃಷ್ಣ ರೂಪ ದಿಂದಲೂ, ಆದಿ ಬದಿಯಲ್ಲಿ ಲಕ್ಷ್ಮಣಸಮೇತನಾದ ಶ್ರೀರಾಮರೂಪನಿಂದಲೂ ಇದ್ದು ನಿಮ್ಮನ್ನು ರಕ್ಷಿಸುವರು ಆದುದರಿಂದ ವಿಷ್ಣುಭಕ್ತರಾಗಿ ನಿರ್ಭಯತೆಯಿಂದ ಸ್ವಧರ್ಮಾಚರಣೆಯಲ್ಲಿ ತೊಡಗಿರಿ" ಎಂಬುದು. ಈ ಬಗೆಯ ಸಂದೇಶವನ್ನು ಭಾರತದ ಮೂಲೆ ಮೂಲೆಗಳಿಗೂ ಮುಟ್ಟುವಂತೆ ಸಮರ್ಥ ಪ್ರಚಾರಕರನ್ನು ಕಳುಹಿಸಿಕೊಟ್ಟರು.

ಹೀಗೆ ಮಧ್ವಾಚಾರ್ಯರ ಮೂಲಪೀಠದಲ್ಲಿ ಯತಿವರ್ಯರಾಗಿ ಬಂದು ಆ ಪೀಠವನ್ನು ಅಲಂಕರಿಸಿ ಸುಮಾರು 40 ವರ್ಷಗಳ ಕಾಲ ವೇದಾಂತ ಸಾಮ್ರಾಜ್ಯವನ್ನು ಆಳಿದರು. ಇವರ ಬೃಂದಾವನ ಸಿದ್ಧವಾದಾಗ 700 ಸಾಲಿಗ್ರಾಮಗಳು ಸಂಗ್ರಹವಾಯಿತು. ಶ್ರೀಗಳವರು ಬಾಲಸನ್ಯಾಸಿಗಳಾಗಿದ್ದರೂ ತಾಯಿಯ ಋಣವನ್ನು ಯಾವ ಆಶ್ರಮದಿಂದಲೂ ತೀರಿಸಲು ಸಾಧ್ಯವಿಲ್ಲವೆಂದು ತೋರಿಸಲು ತಮ್ಮ ವೃಂದಾವನದ ಬಲಬದಿಯಲ್ಲಿ (ದಕ್ಷಿಣ ಭಾಗ) ತಮ್ಮ ತಾಯಿಯ ಮುಖದ ಪ್ರತಿಕೃತಿಯನ್ನು ಕೆತ್ತಲು ಆಜ್ಞಾಪಿಸಿದರು. ಅದರಂತೆ ಕೆತ್ತಿದ ದಕ್ಷಿಣಪಿನಾಕಿನಿ ತೀರದ ಬೃಹತ್ ಪ್ರಮಾಣದ ಬೃಂದಾವನದಲ್ಲಿ ಅವರು ಬೃಂದಾವನಸ್ಥ ರಾದರು. ಆದರೆ ಬೃಂದಾವನಕ್ಕೆ ಯಾವ ಹೊದಿಕೆ, ಮೇಲು ಚಾವಣಿಗಳಿಲ್ಲ. ಹಾಗೆ ಪ್ರಯತ್ನ ಪಟ್ಟು ಹೊದಿಕೆ, (ಕಾವಿಶಾಟಿ) ಹೊದಿಸಿದಾಗ ಅದು ಸುಟ್ಟು ಭಸ್ಮವಾದ ಸಂಗತಿ ಸರ್ವವೇದ್ಯವಾದ ವಿಷಯ.

ಶ್ರೀಗಳವರು ದ್ವಿಮುಖರಾಗಿದ್ದಾರೆ. ಒಂದೆಡೆಗೆ ಕೈಯಲ್ಲಿ ಕಮಂಡಲ ಹಿಡಿದು ಒಂದು ಪಾದ ಸ್ವಲ್ಪ ಮುಂದೆ ಇಟ್ಟಂತಿದೆ. ಇನ್ನೊಂದೆಡೆಗೆ ಕೈಮುಗಿದು ನಿಂತಿದ್ದಾರೆ. ಪೂರ್ವಾಭಿಮುಖ ವಾಗಿದ್ದಾರೆ. ಪೂಜೆ ಪ್ರತಿದಿನ ಪೂರ್ವ ಪಾರ್ಶ್ವಕ್ಕೆ ನಡೆಯುತ್ತದೆ.

ಈ ಬೃಂದಾವನವು ಅಂದಿನಿಂದ ಇಂದಿನವರೆಗೆ ಸಾವಿರಾರು ಭಕ್ತರನ್ನು ದೇಶಾದ್ಯಂತ ಆಕರ್ಶಿಸುತ್ತಿದೆ. ಅವರ ಆರಾಧನೆಯನ್ನು ಪ್ರತಿವರ್ಷ ಪುಶ್ಯಶುದ್ಧ ದ್ವಾದಶಿಯಂದು ಬಹು ವೈಭವದಿಂದ ಆಚರಿಸುತ್ತಾರೆ. ಮತ ಧರ್ಮದ ಭೇದವಿಲ್ಲದೆ ಎಲ್ಲರೂ ಬಂದು ಭಕ್ತಿಯಿಂದ ಸೇವೆ ಸಲ್ಲಿಸುತ್ತಾರೆ.

ಊರಿನ ಜನರಿಗೆ ಶ್ರೀ ರಘೂತ್ತಮರು ಅಧಿದೇವತೆ. ಇಲ್ಲಿನ ಹಾಗೂ ಸುತ್ತಮುತ್ತಲಿನ ಹಳ್ಳಿಯವರು ಜಾತಿಮತ ಪಂಥವೆನ್ನದೆ ಶ್ರೀಗುರುಗಳಿಂದ ಅನುಗ್ರಹೀತರಾಗುತ್ತಿದ್ದಾರೆ. ಎಮ್ಮೆ ಆಕಳು ಮೊದಲಾದ ಪ್ರಾಣಿಗಳಿಗೆ ಏನಾದರೂ ರೋಗ ಬಂದರೆ ಪಶು ಚಿಕಿತ್ಸಾಲಯಕ್ಕೆ ಹೋಗುವ ಬದಲು ಬೃಂದಾವನದ ಬಳಿಗೆ ಕರೆದುಕೊಂಡು ಹೋಗಿ ಸುತ್ತಲೂ 5 ಪ್ರದಕ್ಷಿಣೆ ಹಾಕಿಸುತ್ತಾರೆ. ಆಗ ಸಾಕುಪ್ರಾಣಿಗಳ ರೋಗ ತಾನಾಗಿಯೇ ಕಡಿಮೆಯಾಗುವುದು. ಇಲ್ಲಿ ಬ್ರಾಹ್ಮಣೇತರರು ಬ್ರಾಹ್ಮಣರ ಊಟವಾದ ಮೇಲೆ ಪ್ರಸಾದವನ್ನು ಸ್ವೀಕರಿಸಿ ಅದನ್ನು ಸಣ್ಣ ಬಿಲ್ಲೆಗಳಾಗಿ ಮಾಡಿ ಒಣಗಿಸಿ ಇಟ್ಟುಕೊಳ್ಳುತ್ತಾರೆ. ಮನೆಯಲ್ಲಿ ಯಾರಿಗಾದರೂ ಏನಾದರೂ ಖಾಯಿಲೆ, ಮನೋರೋಗವಾದರೆ ಈ ಬಿಲ್ಲೆಯನ್ನು ಕೊಟ್ಟರೆ ಕಾಯಿಲೆ ಗುಣವಾಗುವುದು. ಬೃಂದಾವನದ ಬಳಿ ಬಂದು ಪಾದೋದಕ ಪ್ರೋಕ್ಷಣೆ ಮಾಡಿಸಿಕೊಂಡ ಜನರ ಕಷ್ಟಗಳೂ, ರೋಗಗಳು ದೂರವಾಗುತ್ತದೆ. ಇಲ್ಲಿ ಹಿಂದಿನ ಸ್ವಾಮಿಗಳಾದ ಶ್ರೀ ಸತ್ಯಪ್ರಮೋದ ತೀರ್ಥರ ಬೃಂದಾವನವೂ ಇದೆ. ಅವರ ಆರಾಧನೆಯ ದಿನ ಕಾರ್ತಿಕ ಶುದ್ಧ ತೃತೀಯಾ.

ಇದು ಪ್ರಸಿದ್ಧ ವೈಷ್ಣವ ಕ್ಷೇತ್ರವೆನ್ನಲು ಇಲ್ಲಿ ತ್ರಿವಿಕ್ರಮದೇವರ ಗುಡಿ ಇರುವುದೇ ಸಾಕ್ಷಿ. ಇದು ತ್ರಿವಿಕ್ರಮಕ್ಷೇತ್ರ, ತ್ರಿವಿಕ್ರಮಾವತಾರವನ್ನು ಮಹಾವಿಷ್ಣುವು ತೋರಿ ಬಲಿ ಚಕ್ರವರ್ತಿಯನ್ನು ದಮನ ಮಾಡಿದ ಸ್ಥಳ. ಎಂದು ಪುರಾಣ ವಿವರಿಸುತ್ತದೆ. ಇಲ್ಲಿ ತ್ರಿವಿಕ್ರಮ ಮೂರ್ತಿ 10 ಅಡಿ ಎತ್ತರದ ಭವ್ಯ ಮೂರ್ತಿ. ಬಲಗಾಲನ್ನು ಎತ್ತಿ ಆಕಾಶವನ್ನು ಅಳೆಯುತ್ತಿರುವ ಭಂಗಿ. ವಕ್ಷಸ್ಥಳದಲ್ಲಿ ಶ್ರೀವತ್ಸ, ತೋಳುಗಳಲ್ಲಿ ಶಂಖಚಕ್ರಗಳನ್ನು ಹೊಂದಿದ್ದಾರೆ. ಬ್ರಹ್ಮದೇವರು ಮೇಲ್ಗಡೆ ಇದ್ದು ಸುತ್ತಲೂ ಶುಕ್ರಾಚಾರ್ಯ ಮೊದಲಾದವರ ವಿಗ್ರಹಗಳಿವೆ. ಇಲ್ಲಿ ದುರ್ಗಿಯ ದೇವಾಲಯವೂ ಉಂಟು. ಇದರ ಭೇಟಿಯೂ ಪುಣ್ಯಕರ. ರಘೂತ್ತಮರ ಸೇವೆ ಮಾಡುವವರು ದುರ್ಗಾದೇವಿಯ ದರ್ಶನ ಪಡೆಯಲೇಬೇಕು. ಇಲ್ಲವಾದರೆ ಸೇವೆಯ ಪೂರ್ತಿ ಫಲ ದೊರೆಯದೆಂಬ ನಂಬಿಕೆ ಇದೆ.

## 278. ವೀರಚೋಳಪುರಂ :

ತಿರುಕೋಯಿಲೂರು, ತಿರುವಣ್ಣಾಮಲೈಯಿಂದ ಬಸ್ ಸೌಕರ್ಯವಿದೆ. ತಿರುಕೋಯಿಲೂರಿನಿಂದ 6. ಕಿ. ಮಿ. ದೂರದಲ್ಲಿ ಈ ಕ್ಷೇತ್ರವಿದೆ. ಇಲ್ಲಿ ಉತ್ತರಾಧಿಮಠದ ಶ್ರೀ ಸತ್ಯನಾಥ ತೀರ್ಥರ ಮೂಲ ಬೃಂದಾವನವಿದೆ. ಶ್ರೀ ಸತ್ಯನಾಥತೀರ್ಥರೂ ಉತ್ತರಭಾರತದಲ್ಲಿ ಮಧ್ವ ಮತವನ್ನು ಪ್ರಸಾರ ಮಾಡಿದವರ ಪಂಕ್ತಿಯಲ್ಲಿ ಸೇರುವರು. ಇವರ ಪೂರ್ವಾಶ್ರಮದ ಹೆಸರು ರಘುನಾಥಾಚಾರ್ಯ, ಕೊರ್ಲಹಳ್ಳಿಯ ಮನೆತನಕ್ಕೆ ಆಪ್ತರು, ಉತ್ತರಾದಿ ಮಠದ ಪೀಠವನ್ನು ಏರುವ ಮೊದಲೇ ಆಶ್ರಮವನ್ನು ಪಡೆದು ವಿದ್ಯಾನಾಥ ತೀರ್ಥರಾಗಿದ್ದು ನಂತರ ಶ್ರೀ ಸತ್ಯನಾಥ ತೀರ್ಥರೆಂಬ ಹೆಸರು ಪಡೆದರು. ಇವರು ದೇಶಸಂಚಾರದ ಕಾಲದಲ್ಲಿ ವಾರಣಾಸಿ, ಗಯಾ ಮುಂತಾದ ಕಡೆಗಳಿಗೆ ಭೇಟಿಕೊಟ್ಟು ಆ ಕಡೆಗಳಲ್ಲಿ ಮಧ್ವಮತ ಪ್ರಸಾರ ಮಾಡಿದರು. ಇವರ ದಿಗ್ವಿಜಯದ ವಿವರಣೆಗಳೆಲ್ಲಾ 'ಸತ್ಯನಾಥನ ಮಹಾತ್ಮ ರತ್ನಾಕರ' ಎಂಬ ವಿಜಯ ಕಾವ್ಯದಲ್ಲಿ ವರ್ಣಿತವಾಗಿದೆ. ಹಾಗೂ ದಕ್ಷಿಣಭಾರತದ ತಂಜಾವೂರು, ಶ್ರೀರಂಗಗಳಲ್ಲಿ ಸಂಚರಿಸಿ ಪಂಡಿತರೊಡನೆ ಶಾಸ್ತ್ರಾರ್ಥ ವಿಚಾರ ಮಾಡಿದವರು. ನಂತರ ವೀರಚೋಳಪುರಂನಲ್ಲಿ

ಬೃಂದಾವನಸ್ಥರಾದರು. ಇವರ ಆರಾಧನೆ ಪ್ರತಿವರ್ಷ ಮಾರ್ಗಶೀರ್ಷ ಶುದ್ಧ ಏಕಾದಶಿ ನಡೆಯುವುದು. ಇವರು ಶ್ರೀ ರಘೂತ್ತಮ ತೀರ್ಥರಲ್ಲಿ ಅಧ್ಯಯನಕ್ಕೆ ಬರುತ್ತಿದ್ದರೆಂಬ ಐತಿಹ್ಯವಿದೆ.

## 279. ವೃದ್ಧಾಚಲಂ :

ದ. ಆರ್ಕಾಟ್ ಜಿಲ್ಲೆ, ಚಿದಂಬರಂನಿಂದ 45 ಕಿ. ಮಿ. ಸೇಲಂನಿಂದ ರಸ್ತೆಯ ಮೂಲಕ ಅಥವಾ ರೈಲು, ರೈಲ್ವೆ ನಿಲ್ದಾಣ. ಶ್ರೀ ರುದ್ರದೇವರು ತಾವು ಮಾಡಿದ ಪಾಶಾಂಡಶಾಸ್ತ್ರ ನಿರ್ಮಾಣದ ದೋಷಪರಿಹಾರಕ್ಕಾಗಿ ಶ್ರೀ ಮಹಾವಿಷ್ಣುವಿನ ಆಜ್ಞೆಯಂತೆ ಕಾಶಿಗಿಂತ ಮಿಗಿಲಾದ ಶ್ರೀ ವೃದ್ಧಾಚಲದಲ್ಲಿ ಕುಳಿತು ಶ್ರೀಮುಷ್ಣವನ್ನು ಸದಾ ನೋಡುತ್ತಾ ತಮ್ಮ ದೋಷಕಳೆದು ಕೊಳ್ಳುತ್ತಿದ್ದಾರೆ. ಇಲ್ಲಿ ಈರೀತಿ ಪುರಾಣ ಪ್ರಸಿದ್ಧವಾದ ವೃದ್ಧಾಚಲೇಶ್ವರ ದೇವಾಲಯವಿದೆ.

## 280. ಚಿದಂಬರಂ :

ದ. ಆರ್ಕಾಟ್ ಜಿಲ್ಲೆ, ಬೆಂಗಳೂರು 266 ಕಿ.ಮಿ. ಚೆನ್ನೈನಿಂದ ಸುಮಾರು 320 ಕಿ. ಮಿ. ರೈಲುಮಾರ್ಗ ಹಾಗೂ ರಸ್ತೆಮಾರ್ಗವಿದೆ. ಇಲ್ಲಿ ಪ್ರಾಚೀನ ನಟರಾಜ ಮಂದಿರವಿದೆ. ಇಲ್ಲಿ ದೇವರು ಆಕಾಶತತ್ವದಲ್ಲಿ ಪ್ರಕಟವಾಗಿದ್ದಾನೆ. ಈ ದೇವಾಲಯಕ್ಕೆ 5 ಪ್ರದಕ್ಷಿಣ ಪಥಗಳಿವೆ. ಐದನೆಯ ಒಳಸುತ್ತಿನಲ್ಲಿ ನಟರಾಜ ಮಂದಿರವಿದೆ. ಅಷ್ಟಧಾತುಗಳಿಂದ ತಯಾರಿಸಲ್ಪಟ್ಟಿರುವ ಶಿವನ ತಾಂಡವಮೂರ್ತಿ ಇದು. ಈ ವಿಗ್ರಹದ ಎಡಭಾಗದಲ್ಲಿ ಸ್ವರ್ಣಮಾಲೆ ತೂಗಾಡು ತ್ತಿರುತ್ತದೆ. ಮಾಣಿಕ್ಯರತ್ನಗಳಿಂದ ತಯಾರಿಸಲ್ಪಟ್ಟ ನರ್ತನ ಮುದ್ರೆಯ ನಟರಾಜ ವಿಗ್ರಹ ಬಹು ಖ್ಯಾತವಾದುದು. ಇದಲ್ಲದೆ ಸ್ಫಟಿಕ ಲಿಂಗದ ದರ್ಶನವನ್ನೂ ಪಡೆಯಬಹುದು. ಮಂದಿರದ ಮುಂಭಾಗದಲ್ಲಿ ಗೋವಿಂದರಾಜ ಮಂದಿರವಿದೆ.

## 281. ಶ್ರೀ ಮುಷ್ಣಮ್ :

ವೃದ್ಧಾಚಲದಿಂದ 15 ಕಿ. ಮಿ. ಚಿದಂಬರಂನಿಂದ 22 ಕಿ.ಮಿ. ಇದನ್ನು ಭೂವರಾಹಕ್ಷೇತ್ರ ವೆನ್ನುವರು. ತಿರುಕೋಯಿಲೂರಿನಿಂದ 60 ಕಿ.ಮಿ. ಹತ್ತಿರದ ರೈಲ್ವೆ ನಿಲ್ದಾಣ ಚಿದಂಬರಂ. ಭರತಖಂಡದ 8 ಸ್ವಯಂವ್ಯಕ್ತ ಕ್ಷೇತ್ರಗಳಲ್ಲಿ ಇದೂ ಒಂದು. (ಶ್ರೀರಂಗಂ, ತೋತಾದ್ರಿ, ತಿರುಪತಿ, ನೇಪಾಳದ ಮುಕ್ತಿನಾಥ, ಗುಜರಾತ್‌ನ ನೈಮಿಶಾರಣ್ಯ, ರಾಜಾಸ್ಥಾನದ ಪುಷ್ಕರ ಮತ್ತು ಉತ್ತರ ಪ್ರದೇಶದ ಬದರಿ ಇತರವು ) ಅಷ್ಟವೈಕುಂಠಂ ಎಂಬ ಹೆಸರೂ ಇದಕ್ಕುಂಟು. ಊರ ಮಧ್ಯದಲ್ಲಿರುವ ಬಹಳ ಪ್ರಾಚೀನವಾದ ಯಜ್ಞವರಾಹ ಮಂದಿರದಲ್ಲಿ ಶ್ರೀ ವರಾಹ ದೇವರನ್ನು ದರ್ಶನ ಮಾಡಬಹುದು. ಬಳಿಯಲ್ಲಿಯೇ ಶ್ರೀಲಕ್ಷ್ಮೀಮಂದಿರವಿದೆ. ಈ ಮಾತೆ ಯನ್ನು ಇಲ್ಲಿ ಅಂಬುಜವಲ್ಲಿ ಎನ್ನುವರು. ಇಲ್ಲಿ ಮಧ್ವಾಚಾರ್ಯರು ಚಾತುರ್ಮಾಸಕ್ಕೆ ಕುಳಿತಿದ್ದ ಉಲ್ಲೇಖ ಪದ್ಮಪುರಾಣದ ಶ್ರೀಮುಷ್ಣಮಹಾತ್ಮೆಯಲ್ಲಿದೆ. ತುಂಬುಗರ್ಭಿಣಿಯೊಬ್ಬಳ ಸಂಕಷ್ಟವನ್ನು ಪರಿಹರಿಸಲು ತಮ್ಮ ದಂಡದಿಂದ ತಕ್ಷಣವೇ ನಿರ್ಮಿಸಿದ ತೀರ್ಥವು ದಂಡ

ತೀರ್ಥವೆಂದು ಹೆಸರಾಗಿದೆ. ಇಲ್ಲಿಯ ವರಾಹದೇವಾಲಯದ ಒಂದು ಸ್ತಂಭದಲ್ಲಿ ಮಧ್ವಾಚಾರ್ಯರ ವಿಗ್ರಹವೂ ಇರುವುದನ್ನು ನೋಡಬಹುದು. ಶ್ರೀ ಜಯತೀರ್ಥರು ತಮ್ಮ ಪ್ರವಾಸ ಕಾಲದಲ್ಲಿ ಇಲ್ಲಿಗೂ ಭೇಟಿ ನೀಡಿದ್ದರು. ಶ್ರೀ ಮದುತ್ತರಾದಿ ಮಠಾಧೀಶರು ಇಲ್ಲಿಗೆ ಆಗಮಿಸಿದಾಗ ಇಲ್ಲಿಯ ಉತ್ಸವಮೂರ್ತಿಗಳನ್ನು ಅವರ ಪೂಜೆಗೆಂದು ಅವರಿದ್ದಷ್ಟು ದಿನ ಅವರವಶಕ್ಕೆ ಒಪ್ಪಿಸುವ ಸಂಪ್ರದಾಯ ಈಗಲೂ ಇದೆ.

ಇಲ್ಲಿ ಉತ್ತರಾದ್ರಿ, ರಾಮಾನುಜಕೂಟ ಎಂಬಲ್ಲಿ ವಸತಿಗೃಹ ವ್ಯವಸ್ಥೆಯಿದೆ.

## 282. ಮಾಯಾವರಂ :

ತಂಜಾವೂರು ಜಿಲ್ಲೆ, ರೈಲು ಬಸ್ಸುಗಳ ಸೌಕರ್ಯವಿದೆ. ಟ್ರಿಚಿಯಿಂದ 120 ಕಿ.ಮಿ. ಕುಂಭಕೋಣಂನಿಂದ 32 ಕಿ. ಮಿ. ತಂಜಾವೂರಿನಿಂದ 70 ಕಿ. ಮಿ. ಚಿದಂಬರಂನಿಂದ 37 ಕಿ. ಮಿ. ಕಾವೇರಿ ನದಿಯು ಇಲ್ಲಿ ಪ್ರವಹಿಸುತ್ತದೆ. ಮತ್ತು ಅನೇಕ ಪವಿತ್ರ ತೀರ್ಥಗಳಿವೆ. ಮಾಯಾವರಂ ರೈಲುನಿಲ್ದಾಣದಿಂದ 5 ಕಿ.ಮಿ. ದೂರದಲ್ಲಿ ಮಯೂರನಾಥ ದೇವಾಲಯವಿದೆ. ಇದು 719 x 527 ಚದರ ಅಡಿಗಳಷ್ಟು ವಿಸ್ತಾರವಾಗಿದ್ದು ಅತಿದೊಡ್ಡ ದೇವಾಲಯಗಳಲ್ಲಿ ಒಂದು ಎಂಬ ಹೆಸರನ್ನು ಪಡೆದಿದೆ. ಗೋಪುರವೇ 164 ಅಡಿ ಎತ್ತರವಿದೆ. ಪುರಾಣಗಳ ಹೇಳಿಕೆಯಂತೆ ಇದು ದಕ್ಷಯಜ್ಞ ಮಾಡಿದ ಸ್ಥಳ. ದಕ್ಷನು ಅಳಿಯನಾದ ರುದ್ರನನ್ನು ಯಜ್ಞಕ್ಕೆ ಆಹ್ವಾನಿಸಲಿಲ್ಲ. ಆದರೆ ಪಾರ್ವತಿಯು ಪತಿಯನ್ನು ಧಿಕ್ಕರಿಸಿ ಅಲ್ಲಿಗೆ ಹೋದಳು. ಕೋಪಗೊಂಡ ರುದ್ರನು ವೀರಭದ್ರನನ್ನು ಕಳುಹಿಸಿ ಯಾಗವನ್ನು ಕೆಡಿಸಿದರು. ಆ ಸಮಯದಲ್ಲಿ ಒಂದು ಮಯೂರಕ್ಕೆ ಘಾಸಿಯಾಯಿತು. ಅದಕ್ಕಾಗಿ ಪಾರ್ವತಿ ಕೋಪದಿಂದ ಅಗ್ನಿಪ್ರವೇಶಮಾಡಿದಳು. ಮುಂದಿನ ಜನ್ಮದಲ್ಲಿ ನವಿಲಾಗಿ ಮತ್ತೆ ಈ ಸ್ಥಳಕ್ಕೆ ಬಂದಳು. ನಂತರ ಶಿವನನ್ನು ಸೇರಿದಳು. ಆದುದರಿಂದ ಈ ಸ್ಥಳಕ್ಕೆ ಮಾಯಾವರಂ ಎಂದು ಹೆಸರಾಯಿತು. ಇಲ್ಲಿ ಮೂರು ಪ್ರಸಿದ್ಧ ವಿನಾಯಕರಿದ್ದಾರೆ. ಪೆರಿಯ ವಿನಾಯಕ, ಅಗಸ್ತ್ಯ ವಿನಾಯಕ ಮತ್ತು ಕಾಲಿಂಜಿಯ ವಿನಾಯಕ.

## 283. ನಾಮಕಲ್ :

ಸೇಲಂ ಜಿಲ್ಲೆ.

ಕರೂರಿನಿಂದ 32 ಕಿ. ಮಿ. ಈರೋಡಿನಿಂದ 35 ಕಿ. ಮಿ. ಸೇಲಂನಿಂದ 50 ಕಿ.ಮಿ. ಇಲ್ಲಿ ನರಸಿಂಹ ಮತ್ತು ಬೃಹತ್ ಪ್ರಾಣದೇವರ ಗುಡಿಗಳಿವೆ.

## 284. ಶ್ರೀರಂಗಂ :

ಟ್ರಿಚಿ ಜಿಲ್ಲೆ ಚನ್ನೈನಿಂದ 275 ಕಿ. ಮಿ. ಇದೂ ಅಷ್ಟ ಸ್ವಯಂವ್ಯಕ್ತ ಕ್ಷೇತ್ರಗಳಲ್ಲೊಂದು. ತಿರುಚಿಗೆ 10 ಕಿ.ಮಿ. 27 ಕಿ.ಮಿ. ಉದ್ದ 8 ಮಿ. ಅಗಲವಿರುವ ಕಾವೇರಿ ದಡದ ದ್ವೀಪಸ್ಥಳ. 2000 ವರ್ಷಗಳಿಗೂ ಹಳೆಯದಾದ ಊರು. ಈ ಸ್ಥಳವನ್ನು ಭೂಲೋಕ ವೈಕುಂಠವೆನ್ನುವರು. ಈ ಸ್ಥಳದ ವರ್ಣನೆ ಶಿಲಪದಿಕಾರಂ ಎಂಬ ಪುರಾತನ ತಮಿಳು ಗ್ರಂಥದಲ್ಲೂ ಇದೆ. ಪುರಾಣದ

ಹೇಳಿಕೆಯಂತೆ ರಾಮ 14 ವರ್ಷ ಕಾಡಿನ ವಾಸ ಮಾಡಿ, ರಾವಣನನ್ನು ವಿಭೀಷಣನ ಸಹಾಯದಿಂದ ಕೊಂದ. ವಿಭೀಷಣನಿಗೆ ಸಹಾಯಮಾಡಿದ ಕಾರಣ ಅವನಿಗೆ ಅಪೂರ್ವವಾದ ರಂಗ ವಿಮಾನ ಕೊಡುಗೆಯಾಗಿ ಕೊಡಲ್ಪಟ್ಟಿತು. ಲಂಕೆಗೆ ಅದನ್ನು ಕೊಂಡೊಯ್ಯುವಾಗ ದಾರಿಯಲ್ಲಿ ಕಾವೇರಿನದಿ ದಡದಲ್ಲಿ ಪೂಜಾದಿಗಳನ್ನು ಮಾಡಲು ಇಟ್ಟ. ಆಗ ಋಷಿಗಳು, ರಾಜರುಗಳೂ ಅಲ್ಲಿಯೇ ಆದಿ-ಬ್ರಹ್ಮೋತ್ಸವ ಮಾಡಲು ಪ್ರಾರ್ಥಿಸಿದರು. ಆದಿ ಬ್ರಹ್ಮೋತ್ಸವ ನಡೆಯಿತು. ನಂತರ ವಿಮಾನವನ್ನು ಕೊಂಡೊಯ್ಯಲು ವಿಭೀಷಣ ಪ್ರಯತ್ನಿಸಿದ. ಅದು ಸಾಧ್ಯವಾಗಲಿಲ್ಲ. ವಿಭೀಷಣ ರಂಗನಾಥನನ್ನು ಪ್ರಾರ್ಥಿಸಿದ. ರಂಗನಾಥ ಅಲ್ಲಿಯೇ ಕೆಲಕಾಲ ಇರುವನೆಂದು ದಕ್ಷಿಣದ ಕಡೆಗೆ ಮುಖಮಾಡಿ ಕುಳಿತ. ವಿಭೀಷಣನನ್ನು ಹಾಗೆಯೇ ಕಳುಹಿಸಿಕೊಟ್ಟ ಲಂಕೆಯತ್ತ ಮುಖಮಾಡಿ ಕುಳಿತಿರುವ ದೇವರನ್ನು ವಿಭೀಷಣ ಪ್ರತಿರಾತ್ರಿ ರಹಸ್ಯದಲ್ಲಿ ಪೂಜಿಸಿ ಹೋಗುತ್ತಿದ್ದಾನೆ ಎಂದು ಪ್ರತೀತಿ.

ಚಾರಿತ್ರಿಕವಾಗಿ ಚೋಳರಾಜರು ರಂಗಮಂಟಪವನ್ನು ಸ್ಥಾಪಿಸಿ ಪೂಜಿಸಲು ದೊಡ್ಡ ಕಟ್ಟಡ ನಿರ್ಮಾಣ ಮಾಡಿದರು. ನಂತರ ಬಹುಕಾಲ ಕಾಡು ಬೆಳೆದಿದ್ದರಿಂದ ಈಸ್ಥಳ ಜನರ ಕಣ್ಣಿಗೆ ಬೀಳಲಿಲ್ಲ. ಮುಸ್ಲಿಮರ ಧಾಳಿ ಎರಡು ಬಾರಿ ಮಲ್ಲಿಕಾಫರ್‌ನಿಂದ ಆದಾಗ ದೇವಾಲಯ ಲೂಟಿಯಾಯಿತು. ಆದರೆ ವಿಗ್ರಹವನ್ನು ಮುಚ್ಚಿಡಲಾಗಿದ್ದರಿಂದ ಅದು ರಕ್ಷಿತವಾಯಿತು.

ಈ ದೇವಾಲಯವನ್ನು ಶಿಲ್ಪಶಾಸ್ತ್ರಕ್ಕೆ ಅನುಗುಣವಾಗಿ ನಿರ್ಮಿಸಿರುವರು. ಇದರ ಸುತ್ತಲೂ 7 ಪ್ರಾಕಾರಗಳಿವೆ. ಒಟ್ಟು ಪ್ರಾಕಾರಗಳ ಉದ್ದ 6 ಮೈಲಿ. ಇದಕ್ಕೆ 21 ಗೋಪುರಗಳಿವೆ. ಇದರಲ್ಲಿ ಬಲು ಎತ್ತರವಾದ ಗೋಪುರ ಸುಮಾರು 226 ಅಡಿಗಳಿವೆ. ಇಲ್ಲಿ 933 ಕಂಬಗಳ ಕೈಸಾಲೆ ಮಂಟಪವಿರುವುದು. ಮೂರನೇ ಪ್ರಾಕಾರದಲ್ಲಿ ಬಂಗಾರದ ಕವಚವಿರುವ ಧ್ವಜಸ್ಥಂಭ, ಬಲಿಪೀಠಗಳಿವೆ. ತುಲಾಭಾರ ಮಂಟಪ, ಪರಮಪದವಾಷಲ್ ಎಂಬ ಹೆಸರಿನ ವೈಕುಂಠ ದ್ವಾರ ಇವೂ ಇವೆ. 4ನೇ ಪ್ರಾಕಾರದಲ್ಲಿ ಆಂಡಾಳ್ ಗುಡಿ, ರಂಗನಾಥನ ಪ್ರೇಯಸಿ ಶ್ರೀರಂಗ ನಾಚಿಯಾರ್ ಮಂದಿರಗಳಿವೆ. ಒಳ ಪ್ರಾಕಾರದಲ್ಲಿ ಗರ್ಭಗುಡಿಯಿದೆ. ಇದು 250 x 181 ಚದರ ಅಡಿ ವಿಸ್ತಾರವಿದೆ. ಇದಕ್ಕೆ ಪೆರಿಯ ಸನ್ನಿಧಿ ಎನ್ನುತ್ತಾರೆ. ಮೇಲಿನ ರಂಗವಿಮಾನವು ಬಂಗಾರದ ತಗಡುಗಳಿಂದ ಹೊದಿಸಲ್ಪಟ್ಟಿದೆ. ಈ ವಿಮಾನದಲ್ಲಿ ನಾಲ್ಕು ವೇದಗಳನ್ನೂ ಪ್ರತಿನಿಧಿಸುವ 4 ಕಲಶಗಳಿವೆ. ಗರ್ಬಗುಡಿಯಲ್ಲಿ 21 ಅಡಿ ಉದ್ದವಿರುವ 5 ಹೆಡೆ ಆದಿಶೇಷನ ಮೇಲೆ ಯೋಗಶಯನ ಭಂಗಿಯಲ್ಲಿ ಮಲಗಿರುವ ರಂಗನಾಥನಿದ್ದಾನೆ. ಆತನ ನಾಭಿಕಮಲದಲ್ಲಿ ಕಮಲದಲ್ಲಿ ಬ್ರಹ್ಮದೇವರು ಕುಳಿತಿರುವರು. ಸುತ್ತಲೂ ಬ್ರಹ್ಮಾದಿ ದೇವತೆಗಳು ಕಿಂಕಿರರಾಗಿ ನಿಂತಿರುವರು. ಹತ್ತಿರ ಅಳಗಿಯ ಮನವಾಳ ಎನಿಸಿಕೊಳ್ಳುವ ಉತ್ಸವ ಮೂರ್ತಿಯಿದೆ. ದೇವರಿಗೆ ಅಲಂಕಾರಕ್ಕಾಗಿ ಮುತ್ತಿನ ಅಂಗಿ, ರತ್ನ ಕಿರೀಟ, ರತ್ನಾಂಗಿ ಮುಂತಾದ ಜವಾಹಿರಿಗಳು ದೇವಾಲಯದಲ್ಲಿ ಇದೆ. ಇಲ್ಲಿ ವರ್ಷಕ್ಕೆ 322 ದಿನ ಉತ್ಸವವೇ. ವೈಕುಂಠ ಏಕಾದಶಿ, ರಥೋತ್ಸವ, ತೈ (ಜನವರಿ) ಚಿತ್ತಿರೈ (ಏಪ್ರಿಲ್) ಮುಖ್ಯ ಉತ್ಸವಗಳು. ಮಾರ್ಚಿಯಲ್ಲಿ ತೆಪ್ಪೋತ್ಸವ. ಚಿತ್ತಿರೈ ಬೀದಿಯಲ್ಲಿ ಉದ್ದಕ್ಕೂ ವಿವಿಧ ಮಠದ ಸಾಲುಗಳಿದ್ದು ಅಲ್ಲಿ ವಿವಿಧ ಮಠದ ಯತಿಗಳ ಪವಿತ್ರ ಬೃಂದಾವನಗಳಿವೆ. ರಾಯರ ಮಠದ ಸ್ವಾಮಿಗಳಾದ ಯೋಗೀಂದ್ರರ, ಸುಮತೀಂದ್ರರ, ಉಪೇಂದ್ರರ, ವ್ಯಾಸರಾಯಮಠದ ಯತಿಗಳಾದ

ಲಕ್ಷ್ಮೀಪತಿ, ವಿದ್ಯಾಧರ, ವಿದ್ಯಾವಾರಿಧಿಗಳ ಬೃಂದಾವನಗಳೂ ಇಲ್ಲಿವೆ. ಶ್ರೀ ಪಾದರಾಜರ ಗುರುಗಳಾದ ಸ್ವರ್ಣವರ್ಣ ತೀರ್ಥರ ಬೃಂದಾವನವನ್ನು ಇಲ್ಲಿ ಕಾಣಬಹುದು. ಮಾಧವ ತೀರ್ಥ ಸಂಸ್ಥಾನದ ಯತಿಗಳಾದ ಮಧುಹರಿ ತೀರ್ಥರು ಉಪಯೋಗಿಸುತ್ತಿದ್ದ ಮಂಟಪವೂ ಸಹ ಶಿಥಿಲ ದೆಸೆಯಲ್ಲಿ ಇಲ್ಲಿದೆ. ವಾದಿರಾಜರು ಈ ಕ್ಷೇತ್ರದರ್ಶನ ಮಾಡಿ ಅದರ ಪಾವಿತ್ರತೆಯ ಬಗ್ಗೆ ತಮ್ಮ ತೀರ್ಥ ಪ್ರಬಂಧದಲ್ಲಿ ವರ್ಣಿಸಿದ್ದಾರೆ. ಜಯತೀರ್ಥರು ತಮ್ಮ ಪ್ರವಾಸ ಕಾಲದಲ್ಲಿ ಇಲ್ಲಿಗೂ ಭೇಟಿ ಕೊಟ್ಟಿದ್ದ ವಿಷಯವಿದೆ.

## 285. ಜಂಬುಕೇಶ್ವರ :

ಟ್ರಿಚಿಯಿಂದ 5ಕಿ. ಮಿ. ಶ್ರೀರಂಗದಿಂದ 2 ಕಿ.ಮಿ. ಈ ಪವಿತ್ರ ಸ್ಥಳದಲ್ಲಿ ಜಂಬುವೃಕ್ಷಗಳು ಬೆಳೆದಿದ್ದು ಅದರಿಂದಲೇ ದೇವಾಲಯವು ಆವೃತವಾಗಿದ್ದರಿಂದ ಇದಕ್ಕೆ ಜಂಬುಕೇಶ್ವರ ಎಂಬ ಹೆಸರು ಬಂತೆಂದು ತಿಳಿದುಬರುತ್ತದೆ. ಇಲ್ಲಿ ದೇವಾಲಯಗಳ ಸಮೂಹವೇ ಇದೆ. ಅದರಲ್ಲಿರುವ ಮಧ್ಯದ ಗುಡಿಯಲ್ಲಿ ಜಂಬುಕೇಶ್ವರ ದೇವಾಲಯವಿದೆ. ಇದು 2400x1500 ಚದರ ಅಡಿ ವಿಸ್ತಾರವನ್ನು ಹೊಂದಿದ್ದು ಅದರ ಸುತ್ತಲೂ 5 ಪ್ರದಕ್ಷಿಣ ಪಥಗಳನ್ನು ಹೊಂದಿದೆ. ಪಂಚಭೂತ ತತ್ವಗಳ ಪೈಕಿ ಜಲತತ್ವ ಅಂಗವಾಗಿ ಜಂಬುಕೇಶ್ವರ ಪೂಜೆಗೊಳ್ಳುತ್ತ ಲಿದ್ದಾನೆ. ಈ ಜಲಲಿಂಗವು ಯಾವಾಗಲೂ ನೀರಿನಲ್ಲಿರುವುದು. ನೀರು ತೆಗೆದು ಖಾಲಿ ಮಾಡಿ ದರೆ ತಕ್ಷಣ ಎಲ್ಲಿಂದಲೋ ನೀರು ಊರಿ ಬಂದು ಲಿಂಗದ ಸುತ್ತಲೂ ನಿಲ್ಲುತ್ತದೆ. ಈ ದೇವಾಲಯದಲ್ಲಿ ಹಲವಾರು ಸುಂದರ ಕಲಾಶಿಲ್ಪದ ಮಂಟಪಗಳಿವೆ. ಅವುಗಳಲ್ಲಿ ಸೋಮ ಸ್ಕಂದ ಮಂಟಪ ಒಂದು. ಇದನ್ನು ರಾಮನೇ ನಿರ್ಮಾಣಮಾಡಿದ್ದನೆಂದು ಹೇಳುವರು. ಇಲ್ಲಿಯೇ ರಾಜರಾಜೇಶ್ವರಿ ಮಂದಿರವಿದೆ. ನಾಲ್ಕನೆಯ ಪ್ರದಕ್ಷಿಣ ಪಥದಲ್ಲಿ ಪಾರ್ವತಿಯ ವಿಶಾಲಮಂದಿರವಿದೆ. ಈ ರುದ್ರದೇವರ ಪತ್ನಿಯನ್ನು ಅಖಿಲಾಂಡೇಶ್ವರಿ ಎಂದು ಕರೆಯುವರು. ಆ ದೇವಿಯ ಸಮ್ಮುಖದಲ್ಲಿ ಗಣೇಷ ಮಂದಿರವಿರುವುದು.

## 286. ಪಳನಿ :

ಸುಬ್ರಮಣ್ಯನ ಆರು ಕ್ಷೇತ್ರಗಳಲ್ಲಿ ಇದೂ ಒಂದು. ಇಲ್ಲಿಯ ಬೆಟ್ಟವು 450 ಅಡಿ ಇದ್ದು ಮೇಲೆ ಹೋಗಲು ಮೆಟ್ಟಿಲುಗಳೂ ಹಾಗೂ ಟ್ರಾಲಿಯೂ ಇದೆ. ಬೆಟ್ಟದ ಈ ಭಾಗವು ತುಂಬಾ ಇಳಿಜಾರಾಗಿದ್ದು ಟ್ರಾಲಿಯ ಮೂಲಕ ಪ್ರಯಾಣ. ಮೈ ಪುಳಕಿತವೂ, ಭಯಾನಕವೂ ಆಗಿದೆ. ಮೇಲೆ ದಂಡಾಯುಧ ಪಾಣಿಯಾದ ಸುಬ್ರಮಣ್ಯನಿದ್ದಾನೆ. ಪಳನಿಯಲ್ಲಿ ದೇವರ ಪ್ರಸಾದವೆಂದು ಪಂಚಾಮೃತವನ್ನು ಹಂಚುವರು.

## 287. ರಾಜಮನ್ನಾರ್‌ಗುಡಿ :

ಆರ್ಕಾಟ್ ಜಿಲ್ಲೆ, ಕುಂಭಕೋಣಂನಿಂದ 40 ಕಿ. ಮಿ. ನೀಡಮಂಗಲಂ ರೈಲ್ವೆ ನಿಲ್ದಾಣದಿಂದ 12 ಕಿ. ಮಿ.

ಇದು ವಾಸುದೇವಪುರಿ, ದಕ್ಷಿಣ ದ್ವಾರಕೆ ಎಂದೂ ಹೆಸರುಗಳಿಂದ ಕರೆಯಲ್ಪಟ್ಟಿದೆ. ಬ್ರಹ್ಮಾಂಡಪುರಾಣ, ಶ್ರೀರಂಗಪುರಾಣ, ತಿರುಪತಿ ಪುರಾಣಗಳಲ್ಲಿ ಇದರ ವರ್ಣನೆ ಇದೆ. ಚಂಪಕಾರಣ್ಯಮ್ ಎಂಬ ಹೆಸರೂ ಇದಕ್ಕೆ ಉಂಟು. ಇಲ್ಲಿನ ಕಾಡುಗಳಲ್ಲಿ ಚಂಪಕ ಮರಗಳು ಬೆಳೆಯುತ್ತಿರುವುದೇ ಈ ಹೆಸರಿಗೆ ಕಾರಣ. ಇದು ಪಾಂಬಣೆ ನದಿ ತೀರದ ಸ್ವಯಂಭೂಕ್ಷೇತ್ರ. ದೇವಾಲಯ 6 ಎಕರೆಗಳಷ್ಟು ವಿಸ್ತಾರದ ಪ್ರದೇಶದಲ್ಲಿ ಸಮುದ್ರಮಟ್ಟಕ್ಕೆ 70 ಅಡಿ ಎತ್ತರ ದಲ್ಲಿದೆ. ಇದು ವಿಷ್ಣುವಿನ ದೇವಾಲಯ. ರಾಜಗೋಪಾಲಸ್ವಾಮಿ ಇಲ್ಲಿಯ ಉತ್ಸವಮೂರ್ತಿ. ಕೃಷ್ಣದೇವರು ರುಕ್ಮಿಣಿ ಸತ್ಯಭಾಮಾ ಸಮೇತ ಗೋವಿನ ಮುಂದೆ ನಿಂತಿದ್ದಾನೆ. ಮೂಲದೇವತೆ ಯಾದ ವಾಸುದೇವನು ಚತುರ್ಭುಜದಲ್ಲಿ ಶಂಖ, ಚಕ್ರ, ಗಧಾಪದ್ಮಗಳನ್ನು ಹಿಡಿದಿದ್ದಾನೆ. ಈ ದೇವರು ಬ್ರಹ್ಮನಿಂದ ಸ್ಥಾಪನೆಗೊಂಡಿತೆಂದು ಪ್ರತೀತಿ. ಚರಿತ್ರೆಯ ಆಧಾರದಂತೆ ಚೋಳರ ರಾಜ ಕುಲ್ಲೋತ್ತುಂಗ I ಇದನ್ನು ಕಟ್ಟಿಸಿದನು. ನಾಯಕ ದೊರೆಗಳಿಂದ ಈ ದೇವಾಲಯದ ಅಭಿವೃದ್ಧಿಯಾಯಿತು. ಇಲ್ಲಿಯ ಇತರ ಗುಡಿ ಎಂದರೆ ಚಂಪಕಲಕ್ಷ್ಮಿ ಮಂದಿರ. ಅಲ್ಲದೆ ಇಲ್ಲಿ ಶ್ರೀ ಕೋದಂಡರಾಮ, ಲಕ್ಷ್ಮಣ, ಸೀತಾಮಾತೆಯರ ವಿಗ್ರಹಗಳಿವೆ. ಆದಿಶೇಷನ ಮೇಲೆ ಬಲಗಾಲು ಬೆರಳು ಚೀಪುತ್ತಾ ಮಲಗಿರುವ ಕೃಷ್ಣ ಮತ್ತೊಂದು ವಿಗ್ರಹ. ಈ ದೇವರಿಗೆ ಸಂತಾನ ಗೋಪಾಲಕೃಷ್ಣನೆಂದು ಇನ್ನೊಂದು ಹೆಸರು. ಮಕ್ಕಳಿಲ್ಲದವರು ಇಲ್ಲಿ ಈ ದೇವರಿಗೆ ಸೇವೆ ಮಾಡಿದರೆ ಮಕ್ಕಳಾಗುವು ದೆಂಬ ನಂಬಿಕೆ ಇದೆ. ಈ ದೇವರ ಪತ್ನಿ ಚಂಪಕವಲ್ಲಿ ತಾಯಾರ್. ದೇವಸ್ಥಾನದ ಸಮೀಪದಲ್ಲಿ ತುಂಬಿ ನಿಂತಿರುವ ದೊಡ್ಡದಾದ ಪುಷ್ಕರಿಣಿ ಇದೆ. ಈ ಪುಷ್ಕರಿಣಿ ತಿಳಿಜಲದಿಂದ ಕೂಡಿರುವುದು. ಇದರ ಮಧ್ಯೆ ಅತಿ ಸುಂದರವಾದ ಕೃಷ್ಣವಿಹಾರ ಮಂದಿರವಿದೆ. ಅಪರೋಕ್ಷ ಜ್ಞಾನಿಗಳಾದ ಶ್ರೀ ಪುರಂದರದಾಸರು, ಶ್ರೀ ವ್ಯಾಸರಾಯರು, ಶ್ರೀ ಸುಬ್ಬರಾಯದಾಸರು ಮತ್ತು ಇನ್ನೂ ಅನೇಕರು ಈ ಕ್ಷೇತ್ರ ದರ್ಶನ ಮಾಡಿದ್ದಾರೆ. ಇದು ಕೃಷ್ಣಭಕ್ತರು ತಪ್ಪದೇ ಹೋಗಿ ಬರಬೇಕಾದ ಪವಿತ್ರಕ್ಷೇತ್ರ. ಏಪ್ರಿಲ್‌ನಲ್ಲಿ 10 ದಿನಗಳ ಕಾಲ ವೈಭವದ ಉತ್ಸವಗಳು ಇಲ್ಲಿ ನಡೆಯುವುವು.

## 288. ತಂಜಾವೂರು :

ಕಾವೇರಿ ನದಿ ತೀರದ ಯಾತ್ರಾಸ್ಥಳ. ಇಲ್ಲಿಗೆ ರೈಲುಬಸ್ಸುಗಳ ಸೌಕರ್ಯ ಚೆನ್ನಾಗಿದೆ. ಬೆಂಗಳೂರಿನಿಂದ 393 ಕಿ.ಮಿ. ಇದು ರಾಘವೇಂದ್ರತೀರ್ಥರಿಗೆ ಸನ್ಯಾಸವಾದ ಜಾಗ. ಅಂದಿನ ದೊರೆಗೆ ಒಂದು ಸರ್ಪವು ದಾರಿ ತೋರಿಸಿದ ಕುರುಹಗಾಗಿ ಇಲ್ಲಿಯ ಬೃಂದಾವನದಲ್ಲಿ ಸರ್ಪವಿದೆ. ರಘುನಾಥ ಭೂಪಾಲ ರಾಜನು 1621 ರಲ್ಲಿ ತನ್ನ ದರ್ಬಾರ್‌ಹಾಲ್‌ನಲ್ಲಿ ರಾಯರಿಗೆ ಪಟ್ಟಾಭಿಷೇಕ ಮಾಡಿದ ಸ್ಥಳ. ಅಪ್ಪಯ್ಯ ಧೀಕ್ಷಿತರ ಮಗ ಯಜ್ಞನಾರಾಯಣ ದೀಕ್ಷಿತನೊಡನೆ ರಾಯರು ಕಾಕತಾಳೀಯದ ಮೇಲೆ ವಾಕ್ಯಾರ್ಥಮಾಡಿ ವಾದದಲ್ಲಿ ಗೆದ್ದದ್ದು ಇಲ್ಲಿಯೇ. ರಾಯರಿಗೆ ಮಹಾಭಾಷ್ಯ ಪರಿಮಳ ವೆಂಕಟಭಟ್ಟಾಚಾರ್ಯರೆಂಬ ಬಿರುದು ದೊರಕಿದ್ದೂ ಇಲ್ಲಿಯೇ.

ಬೃಹದೀಶ್ವರ ದೇವಾಲಯವು (10 ನೇ ಶತಮಾನ) ಈ ಸ್ಥಳದ ಪ್ರಾಚೀನ ಪ್ರಸಿದ್ಧ ಶಿವ ಮಂದಿರ. ದೇವಾಲಯದ ಒಳಗೆ ಗರ್ಭಗುಡಿಯಲ್ಲಿ ಬೃಹದೀಶ್ವರನೆಂಬ ಹೆಸರಿನ ಬೃಹತ್

ಶಿವಲಿಂಗವಿದೆ. ಈ ದೇವಾಲಯದ ಗೋಪುರ 66 ಮೀ. ಎತ್ತರವಿದ್ದು, ಈ ಗೋಪುರದ ನೆರಳು ನೆಲದ ಮೇಲೆ ಯಾವ ಕಾಲದಲ್ಲೂ ಯಾವ ಸ್ಥಳದಲ್ಲೂ ಬೀಳುವುದಿಲ್ಲ. ಈ ಗೋಪುರದ ತುದಿಯಲ್ಲಿ 80 ಟನ್ ಭಾರದ ಗೋಪುರದ ಕಲ್ಲು ಇದೆ. ಎದುರುಭಾಗದಲ್ಲಿ 6 ಮೀಟರ್ ಉದ್ದದ ಒಂದೇ ಬಂಡೆಗಲ್ಲಿನಲ್ಲಿ ಕೆತ್ತಲ್ಪಟ್ಟ ಬೃಹತ್ ನಂದಿವಿಗ್ರಹವಿದೆ. ಇವುಗಳೂ ಕೂಡ ಆಕರ್ಷಕವೇ.

## 289. ತಿರುವಯ್ಯೂರು :

ಇದು ಚೋಳದೇಶದ ಪಂಚನದಿ ಕ್ಷೇತ್ರ. ಶಿವನಿಗೆ ಪ್ರಿಯವಾದ ರಾಮನಿಗೆ ಹೆಮ್ಮೆಯುಂಟು ಮಾಡುವ ಪವಿತ್ರ ಕ್ಷೇತ್ರ. ತಂಜಾವೂರಿಗೆ 13 ಕಿ. ಮಿ. ಇಲ್ಲಿನ ದೇವಾಲಯವು ದೊಡ್ಡ ಪ್ರಮಾಣದಲ್ಲಿದ್ದು, (840 x 660 ಚ. ಅಡಿ) ಬಹು ವಿಸ್ತಾರವಾಗಿದೆ. ಬಹಳ ದೂರದಿಂದಲೇ ದೇವಾಲಯದ ಗೋಪುರವು ಕಾಣಬರುತ್ತದೆ. ಇಲ್ಲಿ ಸನ್ಯಾಸಿಯಾಗಿ ನಾದಬ್ರಹ್ಮಸ್ವಾಮಿ ಎಂದು ಕರೆಸಿಕೊಂಡ ತ್ಯಾಗರಾಜರ ಸಮಾಧಿ, ಇವರ ಗುರು ಸೊಂಟಿ ವೆಂಕಟರಮಣಯ್ಯನವರ ಸಮಾಧಿಯ ಪಕ್ಕದಲ್ಲೇ. ಇದೆ. ಇವರ ಆರಾಧನೆಯು ಚೈತ್ರಮಾಸ ದಲ್ಲಿ (ಜನವರಿ) ನಡೆಯುವುದು. ಆಗ ಸಂಗೀತಸೇವೆ ದೇಶದ ಪ್ರಸಿದ್ಧ ವಿದ್ವಾಂಸರಿಂದ ನಡೆಯುವುದು. ಇದರ ಸಮೀಪದಲ್ಲೇ ಕಮಲಾಲಯವೆಂಬ ಸರೋವರವಿದೆ. ತ್ಯಾಗರಾಜರು ನಿತ್ಯವೂ ಪೂಜಿಸುತ್ತಿದ್ದ ರಾಮ, ಶಿವಲಿಂಗ ಹಾಗೂ ಪುರಾತನವಾದ ಪಂಚಮುಖವಾದ್ಯವನ್ನು ಇಂದಿಗೂ ದರ್ಶಿಸಬಹುದು.

## 290. ತಿರುವಾರೂರು :

ತಂಜಾವೂರಿನಿಂದ 55 ಕಿ.ಮಿ. ಶ್ರೀ ತ್ಯಾಗರಾಜಸ್ವಾಮಿಗಳ ಜನ್ಮಸ್ಥಳ. ಇಲ್ಲಿ ಅವರು ವಾಸಿಸುತ್ತಿದ್ದ ಮನೆ ಇದೆ.

## 291. ಕುಂಭಕೋಣಂ :

ಇದು ಕಾವೇರಿ ದಡದ ಪುರಾತನ ನಗರ. ಹಾಗೂ ವಿಷ್ಣುದಿವ್ಯ ಕ್ಷೇತ್ರ ಮತ್ತು ಶಿವಕ್ಷೇತ್ರ. ತಂಜಾವೂರಿನಿಂದ 36 ಕಿ. ಮಿ. ಉತ್ತರಕ್ಕೆ, ದ. ರೈಲ್ವೆಯ ಎಗ್ಲೂರ್ ನಿಲ್ದಾಣದಿಂದ ತಿರುಚಿನಾಪಳ್ಳಿ - ರಾಮೇಶ್ವರ ರೈಲುಮಾರ್ಗದಲ್ಲಿದೆ. ಮಾಯಾವರಂನಿಂದ 32 ಕಿ. ಮಿ. ಚೆನ್ನೈಯಿಂದ 250 ಕಿ.ಮಿ. ಈ ಊರಿಗೆ ಕಾಮಕೋಷ್ಠಿಪುರ ಕುಂಭಗೋಣ ಎಂಬ ಹೆಸರುಗಳು ಬಳಕೆಯಲ್ಲಿ ಇತ್ತು. ಇದು ಮೂರು ವೈಷ್ಣವಕ್ಷೇತ್ರಗಳಲ್ಲಿ ಇದೂ ಒಂದು (ಇತರವು ಶ್ರೀರಂಗ, ತಿರುಪತಿ). ದಕ್ಷಿಣದ ಇನ್ನೊಂದು ದೇವಾಲಯಗಳ ನಗರ. ಈ ಕ್ಷೇತ್ರದಲ್ಲಿ ದೇವಾಲಯ ಗಳಿಲ್ಲದ ಬೀದಿಯೇ ಇಲ್ಲವೆನ್ನಬಹುದು. ಇಲ್ಲಿ ಬ್ರಹ್ಮನು ಯಜ್ಞಮಾಡಿದ್ದನೆಂದು ಪ್ರತೀತಿ. ಆ ಯಜ್ಞದಲ್ಲಿ ವೇದನಾರಾಯಣನು ಪ್ರಕಟಗೊಂಡನಂತೆ. ಈ ವೇದನಾರಾಯಣ ಮಂದಿರ ಕುಂಭ ಕೋಣದ ಸಮೀಪದಲ್ಲಿ ಇದೆ. ಇದರಂತೆ ಬ್ರಹ್ಮದೇವರು ಅಮೃತ ಪೂರ್ಣವಾದ ಕುಂಭದ ಕಂಠದ ಬಳಿಯ ರಂಧ್ರದಿಂದ ಸುರಿದ ಅಮೃತ ಪಸರಿಸಿದ ಕ್ಷೇತ್ರ ಎಂದು ಮತ್ತೊಂದು

ಪ್ರಚಲಿತ ಕಥೆ ಇದೆ. ಇಲ್ಲಿಯ ಮಹಾಮದಂ ಸರೋವರದ ತಟದಲ್ಲಿ ಸಾರಂಗಪಾಣಿ ಮಂದಿರವಿದೆ. ಇಲ್ಲಿಗೆ ಶ್ರೀ ಹರಿ ರಥರೂಡವಾಗಿಯೇ ವೈಕುಂಠದಿಂದ ಆಗಮಿಸಿದ್ದನು ಎಂಬ ಪ್ರತೀತಿ. ಆದುದರಿಂದ ಇದು ರಥದ ಮಾದರಿಯಲ್ಲಿ ಕೆತ್ತಲ್ಪಟ್ಟಿದೆ. ಅದರಲ್ಲಿ ಆನೆ, ಕುದುರೆಗಳೂ ಕೆತ್ತಲ್ಪಟ್ಟಿವೆ. ಇಲ್ಲಿ ಶೇಷಶಾಯಿ ಭಗವಂತನ ಮೂರ್ತಿ ಇರುವುದು. ಈ ಚತುರ್ಭುಜ ಮೂರ್ತಿಯ ಕೈಯಲ್ಲಿ ಸಾರಂಗ, ಧನುಸ್ಸು ಯಾವುದೂ ಇಲ್ಲ, ಅದನ್ನು ಬುಡದಲ್ಲಿ ಹಾಕಿಕೊಂಡು ದೇವರು ಮಲಗಿರುವನು ಎಂದು ಸ್ಥಳಪುರಾಣ ಹೇಳುತ್ತದೆ. ಈ ಗುಡಿಗೆ 146 ಅಡಿ ಎತ್ತರದ 12 ಅಂತಸ್ತಿನ ಗೋಪುರವಿದೆ. ಇದು ನಾಯಕ ದೊರೆಗಳ ರಚನೆ. ಗುಡಿಗೆ ಎರಡು ಪ್ರವೇಶದ್ವಾರಗಳಿವೆ. ಅದನ್ನು ಉತ್ತರಾಯಣ, ದಕ್ಷಿಣಾಯನ ಪ್ರವೇಶದ್ವಾರಗಳೆಂದು ಕರೆಯುವರು. ಸಾರಂಗಪಾಣಿ ಕಮಲವಲ್ಲಿಯನ್ನು ಮದುವೆಯಾಗಿ ದಕ್ಷಿಣಾಯನ ಪ್ರವೇಶ ದ್ವಾರದಿಂದ ಬಂದನಂತೆ. ಇತರ ಗುಡಿಯೆಂದರೆ ಪಾತಾಳ ಶ್ರೀನಿವಾಸ. ಈ ದೇವರು ತಿರುಪತಿ ಯಿಂದ ಬಂದನೆಂದು ಪ್ರತೀತಿ. ಚಕ್ರಪಾಣಿ ಗುಡಿಯಲ್ಲಿ ಶ್ರೀ ವಿಷ್ಣು ಚಕ್ರದ ರೂಪದಲ್ಲಿದ್ದಾನೆ. ಕುಂಭೇಶ್ವರ ದೇವಾಲಯ ಇಲ್ಲಿಯ ಪ್ರಧಾನ ದೇವಾಲಯ. ಇದು ಶಿವದೇವಾಲಯ. ಇಲ್ಲಿನ ಕೆತ್ತನೆ ಬಲುಚೆನ್ನ. ಇಲ್ಲಿರುವ ನವರಾತ್ರಿ ಮಂಟಪದಲ್ಲಿ 27 ನಕ್ಷತ್ರಗಳು 12 ರಾಶಿಗಳನ್ನು ಕೆತ್ತಲಾಗಿದೆ.

ಹೇಮ ಪುಷ್ಕರಿಣಿ. ಹೇಮ ಎಂಬ ಋಷಿಯ ಹೆಸರಿನಲ್ಲಿದೆ. ಇದು ಬಹು ಪವಿತ್ರ. ಮತ್ತೊಂದು ಮಹಾಮಾಕಂ ಕೊಳ. ಮಹಾಮಾದಂ ಕೊಳ ಎಂತಲೂ ಕರೆಯುವರು. ಇದು 20 ಎಕರೆ ಪ್ರದೇಶವನ್ನು ಆವರಿಸಿಕೊಂಡಿದೆ. ಸುತ್ತಲೂ ಮಂಟಪಗಳಿವೆ. ಮಾಘಮಾಸದಲ್ಲಿ ಇಲ್ಲಿ ಸ್ನಾನದ ಹಬ್ಬ. 12 ವರ್ಷಗಳಿಗೊಮ್ಮೆ ಕುಂಭಮೇಳ ಜರುಗುವುದು. ಆ ಕಾಲದಲ್ಲಿ 9 ನದಿಗಳು ಅಲ್ಲಿ ಉದ್ಭವವಾಗುತ್ತದೆ ಎಂದು ಪ್ರತೀತಿ ಇದೆ. ಇಲ್ಲಿಯ ವಿನಾಯಕ ದೇವಾಲಯ ನೋಡಲು ಅರ್ಹ.

ಯತಿ ತ್ರಯರಾದ ರಾಘವೇಂದ್ರಸ್ವಾಮಿಗಳು, ವಿಜಯೇಂದ್ರರು ಮತ್ತು ಸುಧೀಂದ್ರರು ಪೂಜಿಸುತ್ತಿದ್ದ ಮಾರುತಿ ವಿಗ್ರಹ, ಪುರಾಣ ಮಂಟಪದಲ್ಲಿ ಸುಧೀಂದ್ರರು ರಾಯರಿಗೆ ಪಾಠ ಹೇಳಿದ ಸ್ಥಳ, ರಾಯರು ಕೂರುತ್ತಿದ್ದ ಜಾಗ ಇವುಗಳನ್ನು ನೋಡಬಹುದು. ಇಲ್ಲಿ ಅವರ ಪಾದುಕೆಗಳಿದ್ದು ಅದರ ದರ್ಶನ ಸದಾ ಆಗುವುದು. ಅಲ್ಲದೆ ಸೋಸಲೆ ವ್ಯಾಸರಾಯಮಠದ, ಜಗನ್ನಾಥ ತೀರ್ಥರ, ವಿದ್ಯಾನಾಥರ, ವಿದ್ಯಾಪತಿಗಳ, ವಿದ್ಯಾಶ್ರೀಗಳ, ವಿದ್ಯಾವಾರಿಧಿಗಳ ಬೃಂದಾವನಗಳು ಇಲ್ಲಿವೆ. ಇಲ್ಲಿನ ರಾಯರ ಮಠದ ವಿಜಯೇಂದ್ರರ ಬೃಂದಾವನ ದರ್ಶನ ಬಹುಪಾವನ.

## 292. ನಾಚಾರ್ ಗುಡಿ :

ಕುಂಭಕೋಣಂನಿಂದ 10 ಕಿ.ಮಿ. ಇಲ್ಲಿ ಉತ್ತರಾದಿ ಮಠಾಧೀಶರಾದ ಸತ್ಯಾಭಿನವ ತೀರ್ಥರ ಬೃಂದಾವನವಿದೆ. ಇವರ ಕಾಲದಲ್ಲಿ ಉತ್ತರಾದಿಮಠವು ಸಾಕಷ್ಟು ಪ್ರಚಾರದಲ್ಲಿತ್ತು. ಅದಕ್ಕೆ ಅಧಿಕ ಸಂಖ್ಯೆಯ ಶಿಷ್ಯರಿದ್ದರು. ಮಠದ ವೈಭವ ಉನ್ನತಿಯಲ್ಲಿತ್ತು. ಮಠವು ಎಲ್ಲಿ ಹೋದರೂ ಚತುರಂಗ ಬಲದೊಂದಿಗೆ ಚೈತ್ರ ಯಾತ್ರೆಗೆ ಹೊರಡುತ್ತಿತ್ತು. ಮಠದ ಸೇವೆಗಾಗಿ

64 ಜನ ಅಧಿಕಾರಿಗಳನ್ನು ನೇಮಿಸಿದ್ದರು. ಒಂದು ರೀತಿಯಲ್ಲಿ ಇವರ ಕಾಲದಲ್ಲಿ ಮಠವು ಮಧ್ವರ ಸಂಚಾರಿ ಸರಕಾರದ ರೂಪವನ್ನು ಪಡೆದಿತ್ತು. ಮತ್ತು ಮಠದ ನಿತ್ಯ ಕಾರ್ಯಕ್ರಮಗಳಿಗೆ ಒಂದು ವ್ಯವಸ್ಥಿತ ರೂಪ ಬಂತು. ಇದಕ್ಕೆಲ್ಲಾ ಈ ಸ್ವಾಮಿಗಳ ನಿರಂತರ ಶ್ರಮವೇ ಕಾರಣ.

## 293. ಉಪ್ಪಲಿಯಪ್ಪ :

ಕುಂಭಕೋಣದಿಂದ 5 ಕಿ.ಮಿ. ತಿರುನಾಗೇಶ್ವರ ರೈಲ್ವೆ ನಿಲ್ದಾಣದಿಂದ ಹತ್ತಿರ. ಇದು ದಕ್ಷಿಣ ತಿರುವೆಂಗಡ ಮತ್ತು ಮಾರ್ಕಂಡೇಯ ಕ್ಷೇತ್ರವೆಂದು ಹೆಸರುಪಡೆದಿದೆ. ಇಲ್ಲಿ ಪವಿತ್ರ ವೈಷ್ಣವ ದೇವಾಲಯವಿದೆ. ದೇವರನ್ನು ಉಪ್ಪಲಿಯಪ್ಪನೆನ್ನುವರು. ಶ್ರೀನಿವಾಸ, ವೆಂಕಟಾಚಲ ದೇವರ ಇತರ ಹೆಸರುಗಳು. ದೇವರು ಬಹುಮಟ್ಟಿಗೆ ವೆಂಕಟೇಶ್ವರನಂತೆ ಇದ್ದಾನೆ. ಪತ್ನಿ ಭೂಮಿದೇವಿ. ದೇವರು ಪೂರ್ವಕ್ಕೆ ಮುಖಮಾಡಿ ನಿಂತಂತೆ ಇದೆ. ಭೂಮಿದೇವಿ ಕುಳಿತಿರುವ ಭಂಗಿಯಲ್ಲಿದ್ದಾಳೆ. ಮಾರ್ಕಂಡೆಯರು ಅವರ ಮಗಳ ಧಾರೆಯಲ್ಲಿ ಕನ್ಯಾದಾನ ಮಾಡಲೇ ಬೇಕಾದಾಗ ಮಾಡಬೇಕಾದ ಪೂಜಾಕಾರ್ಯಗಳಲ್ಲಿ ನಿರತವಾಗಿರುವಂತೆ ಇದ್ದಾರೆ.

ಬ್ರಹ್ಮರು ಈ ಕ್ಷೇತ್ರದ ಮಹಿಮೆಯನ್ನು ದೇವಸಭೆಯಲ್ಲಿ ನಾರದರಿಗೆ ಹೇಳಿದರೆಂದು ಪುರಾಣಕಥೆ ಇದೆ. ದೇವಾಲಯದಲ್ಲಿ ಆದಿಶೇಷನ ಹೆಡೆಯ ನೆರಳಿನಲ್ಲಿ ಮಲಗಿರುವ ಕೃಷ್ಣನ ಪ್ರತಿಮೆಯೂ ಇದೆ. ಇಲ್ಲಿ ಕೃಷ್ಣ ಬಲಗಾಲಿನ ಹೆಬ್ಬೆರಳನ್ನು ಬಲಕೈಯಿಂದ ಹಿಡಿದಂತೆ ಇರುವ ಭಂಗಿಯಲ್ಲಿದ್ದಾನೆ. ಅಹೋರತ್ನ ಪುಷ್ಕರಿಣಿ ಎನ್ನುವ ಪವಿತ್ರ ಕೊಳವು ಇಲ್ಲಿದೆ.

## 294. ಮಧುರೈ :

ಬೆಂಗಳೂರಿನಿಂದ 449 ಕಿ.ಮಿ. ಮಧುರೈ ಪಾಂಡ್ಯದೇಶದ ಕೇಂದ್ರ ಸ್ಥಳ. ಇದು ವೈಗೈ ನದಿ ತೀರದಲ್ಲಿ ವಿಶಾಲವಾಗಿ ಬೆಳೆದ, 2000 ವರ್ಷಗಳ ಇತಿಹಾಸವನ್ನು ಹೊಂದಿರುವ ಮಹಾನಗರ. ಈ ಊರಿಗೆ ಪೂರ್ವದೇಶದ ಅಥೆನ್ಸ್ ಎಂಬ ಹೊಗಳಿಕೆ ಅರ್ಥ ಪೂರ್ಣವಾಗಿದೆ. ಈ ಊರಿನ ದೇವಿ ಮೀನಾಕ್ಷಿ, ದೇಶದ ಮೂರು ಶಕ್ತಿಯುತ ದೇವಿಯರಲ್ಲಿ ಒಬ್ಬಳು (ಇತರವು ಕಂಚಿ ಕಾಮಾಕ್ಷಿ, ಕಾಶಿವಿಶಾಲಾಕ್ಷಿ) ಕದಂಬವನವಾಸಿನಿ ಎಂಬ ಹೆಗ್ಗಳಿಕೆಯನ್ನು ಪಡೆದ ಈ ತಾಯಿಗೆ ಮಧುರೈ ದೇವಾಲಯದಲ್ಲಿ ಮೊದಲನೆ ಸೇವೆ. ಈ ದೇವಾಲಯಕ್ಕೆ 9 ಅಂತಸ್ತುಳ್ಳ ನಾಲ್ಕು ಗೋಪುರಗಳು ನಾಲ್ಕು ದಿಕ್ಕುಗಳಲ್ಲಿ ಎದ್ದು ನಿಂತಿವೆ. ದಕ್ಷಿಣ ಗೋಪುರ 160 ಅಡಿ ಗಳ ಎತ್ತರವಿದ್ದು, ಎಲ್ಲಕ್ಕಿಂತ ಎತ್ತರವಾಗಿದೆ. ಇದರ ಬದಿಗಳು ಸ್ವಲ್ಪ ಬಾಗಿದ ಹಾಗಿರುವುದೇ ಇದರ ಪ್ರತ್ಯೇಕ ಸೊಬಗು. ಅಷ್ಟಶಕ್ತಿ ಮಂಟಪ ಅಮ್ಮನವರ ಗುಡಿಯ ಮುಂದೆ ಇದೆ. ಮುಂದೆ ಮೀನಾಕ್ಷಿ ನಾಯಕನ್ ಮಂಟಪ, ಹೊಂದಾವರೆ ಕೊಳ ಇವುಗಳಿವೆ. ಮೀನಾಕ್ಷಿ ಆಲಯವನ್ನು ಪ್ರವೇಶಿಸಿದರೆ ಗರ್ಭಗುಡಿಯಲ್ಲಿ ಕೈಯಲ್ಲಿ ಗಿಳಿ ಯನ್ನೇರಿಸಿಕೊಂಡು, ಹೂ ಚೆಂಡನ್ನೂ ಧರಿಸಿ ನಿಂತಿರುವ ದೇವಿ ಮೀನಾಕ್ಷಿಯನ್ನು ದರ್ಶನ ಮಾಡುತ್ತೇವೆ. ಈಕೆಯೇ ಮೀನಲೋಚನೆ ಮೀನಾಕ್ಷಿ. ನಂತರ ಸ್ವಾಮಿ ಸನ್ನಿಧಿ (ಸುಂದರೇಶ್ವರ) ಯನ್ನು ತಲುಪುತ್ತೇವೆ. ಇಲ್ಲಿ ಲಿಂಗರೂಪದಲ್ಲಿ ಕಾಣುವ ಸ್ವಾಮಿಯನ್ನು ದರ್ಶಿಸುತ್ತೇವೆ. ಮತ್ತೊಂದು ಆಕರ್ಷಕ ಸ್ಥಳ ಸಾವಿರ ಕಂಬಗಳ ಮಂಟಪ. ಇಲ್ಲಿ 985 ಕಂಬಗಳಿವೆ. ಅವುಗಳನ್ನು ಯಾವ ರೀತಿ

ಜೋಡಿಸಲಾಗಿದೆ ಎಂದರೆ, ಅವುಗಳನ್ನು ಯಾವ ಕೋನದಿಂದ ನೋಡಿದರೂ ಅವುಗಳು ಒಂದೇ ಸರಳರೇಖೆಯಲ್ಲಿ ಇರುವಂತೆ ಕಾಣುತ್ತದೆ. ಇಲ್ಲಿಯೇ 5 ನಾದ ಸ್ಥಂಭಗಳಿವೆ. ಇವುಗಳನ್ನು ತಟ್ಟಿದರೆ ವಿಧ ವಿಧವಾದ ಸುನಾದ ಹೊರಡುತ್ತದೆ. ಇಲ್ಲಿ ಉತ್ಸವಗಳು ಅನೇಕ. ಮಹಾದೇವನ ಲೀಲಾವಿಲಾಸಗಳ ಕಾವ್ಯವಾದ ತಿರುವಿಳೈಯಾಡಲ್‌ನೊಳಗಿನ ಘಟನೆಗಳನ್ನೆಲ್ಲಾ ಉತ್ಸವಗಳಾಗಿ ಆಚರಿಸಲ್ಪಡುತ್ತದೆ. ಚಿತ್ರಾ ಪೌರ್ಣಮಿಯ ದಿನ ನಡೆಯುವ ಮೀನಾಕ್ಷಿಯ ಕಲ್ಯಾಣ ಅತಿ ವೈಭವದ ಉತ್ಸವ.

ಮಧುರೈ ಪಟ್ಟಣದಲ್ಲಿ ರಾಯರ ಮಠಧ ಸುರೀಂದ್ರ ತೀರ್ಥರ ಮತ್ತು ಸುರೇಂದ್ರ ತೀರ್ಥರ ಬೃಂದಾವನಗಳಿವೆ.

## 295. ಅಳಗರ್ ಕೋಯಿಲ್ :

ಮಧುರೈ ಪೂರ್ವಕ್ಕೆ 19 ಕಿ.ಮಿ. ಮಧುರೈಯಿಂದ ಇಲ್ಲಿಗೆ ಸಿಟಿ ಬಸ್ಸುಗಳ ನಿರಂತರ ಸಂಚಾರವಿದೆ. (ಬಸ್ ನಂ. 44) ವಾಮನ ಪುರಾಣ, ವರಾಹಾಪುರಾಣ, ವೃಶಪತ್ರಿಮಹಾತ್ಮಾ, ಅಗ್ನಿಪುರಾಣಗಳಲ್ಲಿ ಇದರ ವರ್ಣನೆ ಇದೆ. ಈ ಸ್ಥಳ ವೃತ್ತಾಂತವನ್ನು ವೇದ ವ್ಯಾಸರ ಶಿಷ್ಯರಾದ ಸೂತಮುನಿಗಳು ನೈಮಿಶಾರಣ್ಯದ ಋಷಿಗಳಿಗೆ ಹೇಳಿದ್ದು. ಇದನ್ನು ವೃಷಭಾಚಲವೆನ್ನುವರು. ತೋಟದಂತೆ ಮರಗಳು ತುಂಬಿರುವ ಈ ಗುಡ್ಡಗಾಡು ಪ್ರದೇಶವನ್ನು ಅಳಗಿರಿ ಬೆಟ್ಟಗಳೆನ್ನುವರು. ಇಂತಹ ಪ್ರಶಾಂತವಾದ ಪ್ರದೇಶದಲ್ಲಿ ಅಳಗರ್ ಕೋಯಿಲ್ ಎಂಬ ವಿಷ್ಣು ದೇವಾಲಯವಿದೆ.

ಪುರಾಣಗಳ ಹೇಳಿಕೆಯಂತೆ ಇದು ಯಮಧರ್ಮನು ಮಾಡಿದ ತಪಸ್ಸಿಗೆ ಶ್ರೀ ನಾರಾಯಣನು ಪ್ರತ್ಯಕ್ಷನಾದ ಸ್ಥಳ. ಒಮ್ಮೆ ಯಮಧರ್ಮನು ಯಾತ್ರೆ ಮಾಡುತ್ತಿದ್ದಾಗ ಈ ಸ್ಥಳದ ಸುಂದರತೆ ಮತ್ತು ಪಾವಿತ್ರತೆಗಳನ್ನು ಕಂಡು ಬೆರಗಾದನು. ಅಲ್ಲಿಯೇ ಅವನು ಧ್ಯಾನಾಸಕ್ತನಾದನು. ಈ ಪ್ರದೇಶಕ್ಕೆ ವೃಶಪತ್ರಿ ಎಂದು ಆಗ ಹೆಸರಾಯಿತು. ಯಮನ ಪ್ರಾರ್ಥನೆಗೆ ನಾರಾಯಣನು ಯಮನ ಮುಂದೆ ಪ್ರತ್ಯಕ್ಷನಾದನು. ಯಮನಿಗೆ ತನ್ನ ಮೋಕ್ಷವೇ ಮುಖ್ಯವಾಗಿರಲಿಲ್ಲ. ಆ ಸುಂದರ ಸ್ಥಳವು ಮಹಾತ್ಮೆಯಲ್ಲಿ ಪ್ರಚಾರವಾಗಬೇಕೆಂದು ಇಚ್ಛಿಸಿ ಸ್ವಾಮಿಯನ್ನು ಅಲ್ಲಿಯೇ ನೆಲೆಸುವಂತೆ ಕೇಳಿಕೊಂಡನು. ಅದಕ್ಕೆ ಸ್ವಾಮಿ ಅಸ್ತು ಎಂದು, ಅಲ್ಲಿಯೇ ನೆಲೆಸಿದನು. ಯಮನು ಆ ಸ್ಥಳದಲ್ಲಿ ಚಂದ್ರಾಕಾರದ ವಿಮಾನವೊಂದನ್ನು ಸೃಷ್ಟಿಸಲು ವಿಶ್ವಕರ್ಮನಿಗೆ ಆಜ್ಞೆಮಾಡಿದನು. ಅದರಂತೆ ಅದು ಸಿದ್ಧವಾಯಿತು. ನಾರಾಯಣನು ಶ್ರೀದೇವಿ, ಭೂದೇವಿಯರೊಡನೆ ಅಲ್ಲಿಯೇ ನೆಲೆಸಿದನು. ಈ ದೇವರಿಗೆ ಮತ್ತಿಬ್ಬರು ಪತ್ನಿಯರು. ಅವರೇ ಕಲ್ಯಾಣಸುಂದರವಲ್ಲಿ ಹಾಗೂ ಆಂಡಾಳ್. ಆಂಡಾಳ್ ಇಲ್ಲಿ ಕುಳಿತಿರುವ ಭಂಗಿಯಲ್ಲಿರುವುದು ಇಲ್ಲಿಯ ವಿಶೇಷ.

## 296. ನೂಪುರ ಗಂಗೈ :

ದೇವಾಲಯದ ಪಶ್ಚಿಮದ ಕಡೆ ಇರುವ ಬೆಟ್ಟಗಳಿಗೆ ಅಳಗರ್ ಬೆಟ್ಟಗಳೆಂದು ಹೆಸರು. ಇದು 10 ಮೈಲಿ ಉದ್ದವಿದ್ದು, 1000 ಅಡಿ ಎತ್ತರವಾಗಿದೆ. ಬೆಟ್ಟಕ್ಕೆ ಹೋಗಲು ಸುವ್ಯವಸ್ಥಿತ

ವಾದ ದಾರಿ ಇದ್ದು ವಾಹನ ಸೌಕರ್ಯವಿದೆ (5 ಕಿ.ಮಿ.). ಅಲ್ಲಿ ಸಣ್ಣದಾದ ಸಿಲಂಬರ್ ಎಂಬ ಹೆಸರಾದ ನದಿ ಹರಿಯುವುದು. ಅದನ್ನು ನೂಪುರ ಗಂಗೈ ಎಂದು ಹೇಳುವರು. ಬಲಿಚಕ್ರವರ್ತಿಯನ್ನು ತುಳಿಯಲು ಶ್ರೀ ಹರಿಯ ನೂಪುರ (ಕಾಲುಗೆಜ್ಜೆ) ಅಲುಗಿತಂತೆ. ಅದರಿಂದ ನೀರು ತೊಟ್ಟಿಕ್ಕಿತಂತೆ. ಆ ನೀರೇ ಈ ಪವಿತ್ರ ಜಲ. ದೇವರ ಅಭಿಷೇಕವು ಈ ಪವಿತ್ರ ಜಲದಿಂದ ಆಗಬೇಕೆಂಬ ನಿಯಮವಿದೆ. ಬೇರೆ ನೀರಿನಿಂದ ಅಭಿಶೇಖವಾದರೆ ದೇವರು ಕಪ್ಪಾಗಿ ಬಣ್ಣ ಬದಲಾಯಿಸುತ್ತಾನೆ. ಮಾನವನ ಇಷ್ಟಾರ್ಥಗಳನ್ನು ಪೂರೈಸುವ ಈ ತೀರ್ಥಕ್ಕೆ "ಇಷ್ಟಸಿದ್ಧಿ" ಎನ್ನುತ್ತಾರೆ.

ಈ ಕ್ಷೇತ್ರವು 2000 ವರ್ಷಗಳಷ್ಟು ಹಳೆಯದು. ಪಾಂಡ್ಯರ ದೊರೆ ಮಲಯಧ್ವಜನು ಈ ಸುಂದರದೇವಾಲಯವನ್ನು ಕಟ್ಟಿ ಅದನ್ನು ಗೋಪುರ ಪ್ರಾಕಾರ, ಮಂಟಪಗಳಿಂದ ಅಲಂಕರಿಸಿದನು. ಈ ಕ್ಷೇತ್ರಕ್ಕೆ 12 ಜನ ಆಳ್ವಾರರು ಭೇಟಿಕೊಟ್ಟಿದ್ದರು. ಅವರು ತಮ್ಮ ನಾಲಾಯಿರ ಪ್ರಬಂಧದಲ್ಲಿ (123 ಪದ್ಯಗಳು) ಈ ಕ್ಷೇತ್ರವನ್ನು ಹೊಗಳಿದ್ದಾರೆ. ವಾದಿರಾಜರೂ ಸಹ ಇಲ್ಲಿಗೆ ಭೇಟಿ ಕೊಟ್ಟಿದ್ದು, ಅಲ್ಲಿ ಸ್ನಾನ ಮಾಡಿದ್ದರು ಹಾಗೂ ಈ ಸ್ಥಳದ ಪವಿತ್ರ ಜಲ ನೂಪುರ ಗಂಗಾದ ಬಗ್ಗೆ ಇದನ್ನು ತಮ್ಮ ತೀರ್ಥ ಪ್ರಬಂಧದಲ್ಲಿ ವಿವರಿಸಿದ್ದಾರೆ. ಇದನ್ನು ದಕ್ಷಿಣ ತಿರುಪತಿ ಎನ್ನುವುದೂ ಉಂಟು.

ಈ ಕ್ಷೇತ್ರಕ್ಕೆ ಪಾಂಡ್ಯರಾಜರು ಮತ್ತು ನಾಯಕದೊರೆಗಳು ಭಕ್ತರಾಗಿದ್ದರು. ಯುಧಿಷ್ಠಿರ, ಅರ್ಜುನ ಇಲ್ಲಿಗೆ ಭೇಟಿಕೊಟ್ಟಿದ್ದು, ಇಲ್ಲಿಯ ನೂಪುರ ಗಂಗೈನಲ್ಲಿ ಸ್ನಾನ ಮಾಡಿದ್ದರು ಎಂದು ಹೇಳುವರು. ರಾಮಾನುಜರ ಶಿಷ್ಯ ಕೂರುತ್ತಾಳ್ವಾರ್ ಅಳಗರನ್ನು ಪೂಜಿಸಿ ತಮ್ಮ ಕಣ್ಣು ದೃಷ್ಟಿಯನ್ನು ಪಡೆದರು. ಅರ್ಜುನನ್ನು ಮದುವೆಯಾದ ಉಲೂಪಿ ಇಲ್ಲಿ ಆಳಿದ್ದಳೆಂದು ಐತಿಹ್ಯವಿದೆ.

ದೇವಾಲಯದ ಸುತ್ತಲೂ ಅರ್ಧಮರ್ಧ ಉಳಿದಿರುವ ಕೋಟೆ ಗೋಡೆಗಳಿವೆ. ಇಲ್ಲಿ ತಿರುಮಲ ನಾಯಕನ ಅರಮನೆ 'ಅಳಗರ್ ಪುರಿ' ಇತ್ತೆಂದು ಹೇಳುವರು. ದೇವಾಲಯದ ಮುಂದೆ ತಿರುಮಲೆ ನಾಯಕನಿಂದ ಕಟ್ಟಲ್ಪಟ್ಟ ಸಭಾಮಂಟಪವಿದೆ. ಅದರ ಮೇಲೆ ಎಲ್ಲೆಲ್ಲೂ ಆಳೆತ್ತರದ ಶಿಲ್ಪಮೂರ್ತಿಗಳಿವೆ.

ಇಲ್ಲಿಯ ಮೂಲ ಮೂರ್ತಿ ವೈಕುಂಠ ಪೆರುಮಾಳ್ ನಿಂತ ನಿಲುವು. ಪೂರ್ವಾಭಿಮುಖಿ. ಅಳಗರ್ ಅಥವಾ ಸುಂದರರಾಜ ಇಲ್ಲಿನ ಉತ್ಸವ ಮೂರ್ತಿ. ಇದನ್ನು ಅಚ್ಚ ಶುದ್ಧ ಅಪರಂಜಿ ಚಿನ್ನದಿಂದ ತಯಾರು ಮಾಡಲಾಗಿದೆ. ಈ ದೇವರನ್ನು ಕಳ್ಳ ಅಳಗರ್ ಎಂತಲೂ ಕರೆಯುವರು. ಈ ದೇವರು ಕಳ್ಳರ ಗುಂಪಿಗೆ ಅಧಿದೇವತೆಯಂತೆ. ಅವರೂ ವರ್ಷದಲ್ಲಿ ಒಂದು ದಿನ ಉತ್ಸವ ಮಾಡಿಸುವರಂತೆ. ಚಿತ್ರಾ ಪೌರ್ಣಮಿಯ ದಿನ ನಡೆಯುವ ನದಿ ಉತ್ಸವ ಜಗತ್ ಪ್ರಸಿದ್ಧ. ಇದನ್ನು ವಂಡೂರು ಉತ್ಸವವೆನ್ನುವರು. ಬಲ ಭಾಗಕ್ಕೆ ಸೊಂಡಿಲು ತಿರುಗಿ ಕೊಂಡಿರುವ ವಲಂಪಿರಿ ವಿನಾಯಕ. ಭೈರವ ಇತರ ಆಕರ್ಷಕ ಮೂರ್ತಿಗಳು. ಈ ದೇವಾಲಯದ ರಕ್ಷಕ (Body Guard) ಕರುಪ್ಪುಸ್ವಾಮಿ ಎಂಬುವರು. ಇವರಿಗೆ ಕೃಷ್ಣಪುತ್ರನ್ ಎಂದೂ ಹೆಸರು. ಇವರು ದೇವಾಲಯದ ಮುಂದಿರುವ ದೊಡ್ಡ ಹೆಬ್ಬಾಗಿಲಲ್ಲಿ ಪೂಜೆಗೊಳ್ಳುವರು. ಈ ದೊಡ್ಡ ಹೆಬ್ಬಾಗಿಲು ವರ್ಷದ ಎಲ್ಲಾ ಕಾಲಗಳ ಲ್ಲಿಯೂ (ಬ್ರಹ್ಮೋತ್ಸವದ

ಸಮಯದ ವಿಷ:) ಮುಚ್ಚಿರುವುದು. ಇದನ್ನು ದಾಟಲು 18 ಮೆಟ್ಟಿಲುಗಳಿವೆ. ಯಾರು ಸುಳ್ಳು ಹೇಳಿದವರು ಈ 18 ಮೆಟ್ಟಿಲುಗಳನ್ನು ದಾಟುವರೋ ಅವರು ಹಾಳಾಗುತ್ತಾರೆ ಎಂಬ ನಂಬಿಕೆ ಇದೆ. ಸಿವಿಲ್ ಮೊಕದ್ದಮೆಗಳು ಇಲ್ಲಿ ಅನೇಕವು ಈ ರೀತಿ ತೀರ್ಪಾಗಿದೆ. ಪ್ರಾಕಾರದ ಪಶ್ಚಿಮಕ್ಕೆ ಘೋರ ರೂಪದ ನರಸಿಂಹನಿದ್ದಾನೆ. ಅವನಿಗೆ ಜ್ವಾಲಾನರಸಿಂಹನೆಂದು ಹೆಸರು. ಅವರನ್ನು ತಣಿಸಲು ಹಾಲು ಮೊಸರು ಅಭಿಶೇಕ ಮಾಡು ವರು. ಇತರ ದೇವರುಗಳ ಪ್ರತ್ಯೇಕ ಚಿಕ್ಕ ಚಿಕ್ಕ ಗುಡಿಗಳಲ್ಲಿ ಪಾರ್ಥಸಾರಥಿ, ಮಂಡೂಕ ಮಹರ್ಷಿ ಅಷ್ಟಭುಜ ಕೃಷ್ಣ, ನಟನ ಕೃಷ್ಣ, ಸರಸ್ವತಿ ಇದ್ದಾರೆ.

ಕರುಪ್ಪು ಸ್ವಾಮಿ ತುಂಬಾ ಬಲಿಷ್ಠ ಅಂಗರಕ್ಷಕ. ದಿನವೂ ಕರುಪ್ಪುಸ್ವಾಮಿಯ ಮುಂದೆ ನೂಪುರ ಗಂಗೈನಿಂದ ತಂದ ನೀರೆಂದು ವರದಿ ಒಪ್ಪಿಸಬೇಕು. ಅಳಗರ್ ದೇವರು ತನ್ನ ತಂಗಿ ಮೀನಾಕ್ಷಿಯ ಮದುವೆಗೆ ವರ್ಷಕ್ಕೊಮ್ಮೆ ಮೆರವಣಿಗೆಯಲ್ಲಿ ಹೋದಾಗ ಅವರು ಎಷ್ಟು ಒಡವೆಗಳನ್ನು ಧರಿಸಿದ್ದರೆಂದು ತಿಳಿಸಬೇಕು. ಪುನಃ ಹಿಂದಿರುಗಿದಾಗ, ಬಂದಾಗ, ಕೂಡ ಇದೇ ರೀತಿಯ ಕ್ರಮ ಅನುಸರಿಸಬೇಕು. ಪ್ರತಿದಿನ ರಾತ್ರಿ ದೇವಾಲಯದ ಖಜಾನೆಯ ಬೀಗದ ಕೈಯನ್ನು ಕರುಪ್ಪುಸ್ವಾಮಿಗೆ ಒಪ್ಪಿಸುವ ಪದ್ಧತಿ ಇದೆ. Phone 870228 / 0452

## 297. ಮಾನಾ ಮಧುರೈ :

ರಾಮನಾಥಪುರಂ ಜಿಲ್ಲೆ, ಮಧುರೈನಿಂದ 48 ಕಿ.ಮಿ. ಮಧುರೈನಿಂದ - ರಾಮೇಶ್ವರಕ್ಕೆ ಹೋಗುವ ದಾರಿಯಲ್ಲಿ, ರೈಲ್ವೆ ಜಂಕ್ಷನ್ ಟ್ರಿಚಿಯಿಂದ ಪುದು ಕೋಟ್ಟೈ, ಕಾರೈಕುಡಿಯ ಮೂಲಕ 150 ಕಿ.ಮಿ. ವೇದಾವತಿ ನದಿ ತೀರದಲ್ಲಿದೆ. ಇಲ್ಲಿ ಉತ್ತರಾದಿಮಠದ ಯತಿಗಳಾದ ಶ್ರೀ ಸತ್ಯಪ್ರಿಯ ತೀರ್ಥರ ಬೃಂದಾವನವಿದೆ. ಇವರು ಸತ್ಯಬೋಧ ತೀರ್ಥರ ಗುರುಗಳು. ಇವರ ಕಾಲದಲ್ಲಿ ಮಠದ ಸ್ಥಿತಿಗಳು ಉತ್ತಮಗೊಂಡವು. ಮರಾಠರಾಜರು, ಶ್ರೀರಂಗದ ಅರಸರು, ಆರ್ಕಾಟ್ ನವಾಬನ ಮಂತ್ರಿ, ಇವರು ಈ ಮಠಕ್ಕೆ ದಾನದತ್ತಿಗಳನ್ನು ನೀಡಿದ್ದರು.

## 298. ನವಪಾಶಾಣ :

ರಾಮನಾಥ ಪುರದಿಂದ 20 ಕಿ.ಮಿ. ಇದಕ್ಕೆ ದೇವಿ ಪಟ್ಟಣವೆಂತಲೂ ಹೆಸರು. ಸೇತು ಮೂಲವೆಂಬ ಹೆಸರೂ ಇದೆ. ಉಪ್ಪೂರಿನಿಂದ ಕೆಲವೇ ಕಿ. ಮಿ. ದೂರದಲ್ಲಿರುವ ಆಳವಿಲ್ಲದ ಸಮುದ್ರದಲ್ಲಿ 9 ಕಲ್ಲುಗಳು ನಿಂತಿವೆ. ಇದನ್ನು ನವಗ್ರಹ ಸ್ಥಂಭ ಎನ್ನುತ್ತಾರೆ. ಇದು ರಾಮ ದೇವರಿಂದ ಪ್ರತಿಷ್ಠಾಪಿಸಲ್ಪಟ್ಟಿತ್ತೆಂದು ಹೇಳುವರು. ತನ್ನ ಲಂಕೆಯ ಭೇಟಿ ಸಫಲವಾಗಲು ಶ್ರೀರಾಮನು ಈ ನವಗ್ರಹದ ಕಲ್ಲುಗಳನು ಪೂಜೆ ಮಾಡಿದ್ದನಂತೆ.

## 299. ಧರ್ಭ ಶಯನ (ತಿರುಪ್ಪುಳ್ಳಾನಿ) :

ತಮಿಳುನಾಡಿನ ರಾಮನಾಥಪುರಂ ಎಂಬಲ್ಲಿಂದ 12 ಕಿ.ಮಿ. ಸೇತುಕ್ಕರೈ ಎನ್ನುವ ೦ಊರೇ ಧರ್ಭಶಯನ. ಇದಕ್ಕೆ ಪುಲಾರಣ್ಯ ಕ್ಷೇತ್ರವೆನ್ನುವರು. ಇದು ಪುಲವ ಮಹರ್ಷಿಗಳ ಪವಿತ್ರ ವನ. ಸಮುದ್ರ ರಾಜನಿಂದ ದಾರಿಯನ್ನು ಕೇಳಲೋ ಎಂಬಂತೆ ಶ್ರೀರಾಮರು ಮೂರು

ದಿನಗಳ ಕಾಲ ಇಲ್ಲಿ ದರ್ಭಶಯನರಾಗಿ ಮಲಗಿದ್ದರು. ವಿಭೀಷಣನು ಶರಣಾಗತಿ ಬಯಸಿ ಶ್ರೀರಾಮನ ಬಳಿ ಬಂದದ್ದೂ ಸಹ ಇದೇ ಕ್ಷೇತ್ರಕ್ಕೆ. ಇಂದು ಇಲ್ಲಿ ಶ್ರೀ ರಾಮದೇವರ ದ್ವಿಭುಜ ಮೂರ್ತಿ ಇದೆ. ಆಗ ಸಮುದ್ರ ಸ್ಥಳವಾಗಿದ್ದ ಈ ಸ್ಥಳ ಇಂದು ಸಮುದ್ರದಿಂದ 5 ಕಿ.ಮಿ. ದೂರದಲ್ಲಿದೆ. ಇಲ್ಲಿ ಈ ಶ್ರೀರಾಮರ ದೇವಾಲಯವಲ್ಲದೇ ಇನ್ನೊಂದು ದೇವಸ್ಥಾನ ವಿದೆ. ಅದನ್ನು ಕಲ್ಯಾಣ ಜಗನ್ನಾಥ ದೇವಾಲಯವೆನ್ನುವರು. ಇಲ್ಲಿನ ದೇವರಿಗೆ ಪಟ್ಟಾಭಿರಾಮ ಎಂಬ ಹೆಸರೂ ಇದೆ. ಒಳ್ಳೆಯ ಪ್ರಶಾಂತ ಸ್ಥಳ. ಈ ಸ್ಥಳಕ್ಕೆ ಹೋಗಿಬರಲು ಬಸ್ಸು, ಆಟೋ, ಟ್ಯಾಕ್ಸಿಗಳಿವೆ.

## 300. ರಾಮೇಶ್ವರ :

ರಾಮನಾಥಪುರಂ ಜಿಲ್ಲೆ, ಬೆಂಗಳೂರಿನಿಂದ 609 ಕಿ.ಮಿ., ಚೆನ್ನೈಗೆ 560 ಕಿ.ಮಿ. ದಕ್ಷಿಣ ರೈಲ್ವೆಯ ಕಡೇ ರೈಲು ನಿಲ್ದಾಣ. ಗಂಧಮಾದನ, ದೇವನಗರ ಎಂಬ ನಾಮಾಂಕಿತಗಳೂ ಇದಕ್ಕೆ ಇವೆ. ಇದು ದಕ್ಷಿಣ ದಿಕ್ಕಿನ ಮಹಾಕ್ಷೇತ್ರ. ಸ್ಕಂದಪುರಾಣದ ಸೇತುಮಹಾತ್ಮೆಯಲ್ಲಿ ಇದರ ವರ್ಣನೆ ಇದೆ. ದ್ವೀಪ 31 ಮೈಲಿ ಉದ್ದ ಹಾಗೂ 7 ಮೈಲಿ ಅಗಲವಿದೆ. 34 ಚ. ಮೈ. ವಿಸ್ತೀರ್ಣವನ್ನು ಹೊಂದಿದೆ. 12 ಕಿ.ಮಿ ಉದ್ದದ ರೈಲು ಸೇತುವೆ (ಪಾಂಬನ್)ಯಿಂದ ಕೂಡಿಸಲ್ಪಟ್ಟಿದೆ ಮತ್ತು ವಿಷ್ಣುವಿನ ಶಂಖದ ಮಾದರಿಯಲ್ಲಿ ರಚಿತವಾಗಿದೆ. ರಾಮೇಶ್ವರ ದೇವಾಲಯವು 17 ) 657 x 865 ಚದರ ಅಡಿಗಳಷ್ಟು ವಿಸ್ತಾರವಾಗಿದೆ. 3 ಪ್ರಾಕಾರಗಳನ್ನು ಹೊಂದಿರುವುದು. ಕಂಬಗಳಿರುವ ಕೈಸಾಲೆ 400 ಅಡಿಗಳಷ್ಟು ಉದ್ದವಾಗಿದ್ದು 17 ಅಡಿ ಅಗಲವಾಗಿದ್ದು, ನೆಲದಿಂದ 30 ಅಡಿ ಎತ್ತರದಲ್ಲಿದೆ. ಶ್ರೀರಾಮನು ಇಲ್ಲಿ ರಾವಣನನ್ನು ಕೊಂದ ಬ್ರಹ್ಮಹತ್ಯಾದೋಷದ ನಿವಾರಣೆಗಾಗಿ ಶಿವಲಿಂಗವೊಂದನ್ನು ನಿರ್ಮಿಸಿದ ಗಂಗಾಜಲ ದಿಂದ ಪೂಜಿಸಿದ ಎಂದು ಹೇಳುವರು. ವಾದಿರಾಜರೇ ಮೊದಲಾದ ವೈಷ್ಣವ ಯತಿವರ್ಯರು ಈ ಹೇಳಿಕೆಯನ್ನು ಒಪ್ಪದೆ ಇದನ್ನು ಖಂಡಿಸಿದ್ದಾರೆ. ರಾವಣನ ವಧೆಗಾಗಿ ಸೇತುವೆಯನ್ನು ಕಟ್ಟುವ ಮುನ್ನವೇ ಶ್ರೀರಾಮನು ಇಲ್ಲಿ ಶಿವನನ್ನು ಪ್ರತಿಷ್ಠಾಪಿಸಿದ್ದ ಎನ್ನುವರು.

ಇಲ್ಲಿಯ ದೇವಾಲಯದ ಹೊರಾವರಣದಲ್ಲಿ 22 ತೀರ್ಥಗಳಿದ್ದು, (ಬಾವಿಗಳು) ಯಾತ್ರಿಕರು ಅಗ್ನಿ ತೀರ್ಥದಿಂದ ಪ್ರಾರಂಭಿಸಿ, ಕೋಟಿ ತೀರ್ಥದಲ್ಲಿ (ರಾಮ ಬಾಣ ಹೊಡೆದು ನಿರ್ಮಿಸಿದ ತೀರ್ಥ) ಸ್ನಾನ ಮುಗಿಸಬೇಕು. ಪೌರಾಣಿಕವಾಗಿ ಇದು ಬಹುಪವಿತ್ರ ತೀರ್ಥಸ್ಥಳ. ಈ ತೀರ್ಥಸ್ನಾನವನ್ನು ಕೃಷ್ಣ, ಬಲರಾಮರು, ಪಂಚಪಾಂಡವರು ಮಾಡಿರುವರು. ಮಧ್ವಾ ಚಾರ್ಯರು ತಮ್ಮ ದಿಗ್ವಿಜಯ ಕಾಲದಲ್ಲಿ ಈ ಕ್ಷೇತ್ರ ಸಂದರ್ಶಿಸಿ ಇಲ್ಲಿಯೇ ಚಾತುರ್ಮಾಸಕ್ಕೆ ಕುಳಿತಿದ್ದ ಉಲ್ಲೇಖವಿದೆ. ವಾರಣಾಸಿಗೆ ತೀರ್ಥಯಾತ್ರೆ ಮಾಡಿದವರು ಇಲ್ಲಿಗೆ ಭೇಟಿಕೊಟ್ಟು ರಾಮೇಶ್ವರ ಯಾತ್ರೆ ಮಾಡಿದಮೇಲೆ ತೀರ್ಥಯಾತ್ರೆ ಪೂರ್ಣಗೊಳ್ಳುವುದೆಂಬ ನಂಬಿಕೆ ಇದೆ. ರಾಮಲಿಂಗದ ಮೇಲೆ ಕಾಶಿಯಿಂದ ತಂದ ಗಂಗಾಜಲವನ್ನು ಅಭಿಷೇಖಮಾಡುವುದು ತುಂಬಾ ಪುಣ್ಯಕರ. ಈ ಗಂಗಾ ತೀರ್ಥವು ದೇವಸ್ಥಾನದ ಆಫೀಸಿನಲ್ಲಿ ದೊರಕುವುದಿದ್ದು ಅದನ್ನು ಕೊಂಡು ನಮ್ಮ ತೀರ್ಥ ಯಾತ್ರೆ ಪೂರ್ಣಗೊಳ್ಳಲು ಅವಕಾಶ ಮಾಡಿಕೊಳ್ಳಬಹುದು. ಇಲ್ಲಿಂದ 25 ಕಿ.ಮಿ ದೂರದಲ್ಲಿ ಪವಿತ್ರ ಅಗ್ನಿತೀರ್ಥವಿದೆ.

## 301. ಧನುಷ್ಕೋಟಿ :

ರಾಮೇಶ್ವರದಿಂದ ಸುಮಾರು 20 ಕಿ.ಮಿ. ಸಮುದ್ರ ಸೇತು ಎಂಬ ಹೆಸರಿತ್ತು. ಇದು ಹಿಂದೆ ಇದ್ದ ಪುಣ್ಯಕ್ಷೇತ್ರ. ವಿಭೀಷಣನು ಶ್ರೀರಾಮ – ಸೇತುವಿನ ಮೂಲಕ ಬಲಾಢ್ಯರಾದ ರಾಜರುಗಳು. ಲಂಕೆಯನ್ನು ಮುತ್ತಿಯಾರೆಂಬ ಭಯದಿಂದ ಶ್ರೀರಾಮನನ್ನು ಪ್ರಾರ್ಥಿಸಿದರು. ಅದರಂತೆ ಶ್ರೀರಾಮನು ಸೇತುವಿನ ಸ್ವಲ್ಪ ಭಾಗವನ್ನು ಮಾತ್ರ ಬಿಟ್ಟು ಉಳಿದೆಲ್ಲ ಭಾಗವನ್ನೂ ತನ್ನಲ್ಲಿಯ ಧನುಸ್ಸನ್ನು ತಿರುಗಿಸಿ ಅದರ ತುದಿಯಿಂದ ನಾಶಮಾಡಿದನು ಎಂದು ಬ್ರಹ್ಮ ಖಂಡದಲ್ಲಿ ಉಕ್ತವಾಗಿದೆ. ಶ್ರೀರಾಮದೇವರು ಹಾಗೆ ತನ್ನ ಬಾಣದಿಂದ ಸೇತುವನ್ನು ತುಂಡರಿಸಿದ ಸ್ಥಳವೇ ಈ ಧನುಷ್‌ಕೋಟಿ. ಈ ಸ್ಥಳವು 1964-65ರಲ್ಲಿ ಬಂದ ಪ್ರಚಂಡ ಚಂಡಮಾರುತದ ಹೊಡೆತಕ್ಕೆ ಸಿಕ್ಕಿ ಸಮುದ್ರದಲ್ಲಿ ಮುಳುಗಿ ಹೋಗಿದೆ. ಈಗ ಕೆಲವು ಬಂಡೆ ಗಳು ಕಾಣುತ್ತಿದ್ದು, ಅದನ್ನೇ ರಾಮಸೇತುವಿನ ಭಾಗವೆನ್ನುವರು. ಇಲ್ಲಿ ಮಾಡಿದ ಸ್ನಾನ ಭರತಖಂಡದ ಸಕಲ ತೀರ್ಥಗಳ ಸೇವನೆಯಿಂದ ಲಭಿಸುವಷ್ಟು ಒಟ್ಟು ಪುಣ್ಯವನ್ನು ಕೊಡ ಬಲ್ಲದು ಎಂದು ವಾದಿರಾಜರು ತಿಳಿಸಿದ್ದಾರೆ.

## 302. ತಿರುಚೆಂದೂರು :

ಚಿದಂಬರನಾರ್ ಜಿಲ್ಲೆ. ಪಳಯಾನ ಕೋಟ್ಟೈನಿಂದ ರೈಲು - ಇದು ರೈಲುನಿಲ್ದಾಣ ಸ್ಥಳ. ಮನ್ನಾರ್ ಕೊಲ್ಲಿಯ ಸಮುದ್ರ ತೀರದ ಪ್ರದೇಶದಲ್ಲಿ ಇದೆ. ಇಲ್ಲಿ ಮನ್ನಾರ್ ಶ್ರೀ ಸುಬ್ರಹ್ಮಣ್ಯೇಶ್ವರನ ದೇವಾಲಯವಿದೆ. ಅಲ್ಲದೆ ಕಂಬ ಕವಿ ಹುಟ್ಟಿದ ತಿರುಚೆಂದೂರು ರಾಮಾಲಯವನ್ನೂ ಹೊಂದಿದೆ.

## 303. ಕನ್ಯಾಕುಮಾರಿ :

ಕನ್ಯಾಕುಮಾರಿ ಜಿಲ್ಲೆ. ರೈಲು ಬಸ್ಸುಗಳ ಸೌಕರ್ಯವಿದೆ. ಮಧುರೈಯಿಂದ 213 ಕಿ.ಮಿ. ಬೆಂಗಳೂರು 686 ಕಿ. ಮಿ. ಕೇಪ್ ಕಾಮೋರಿನ್ ಎಂಬ ಹೆಸರೂ ಇದಕ್ಕೆ ಇದೆ. ಇದು ಭಾರತ ಭೂಮಿಯ ದಕ್ಷಿಣದ ಕೊನೆಯ ಸ್ಥಳವಾಗಿದೆ. ಇದು ಮೂರು ಸಮುದ್ರಗಳ ಸಂಗಮ ಸ್ಥಳ. ಅರೇಬಿಯನ್, ಬಂಗಾಳ ಕೊಲ್ಲಿ, ಹಾಗೂ ಹಿಂದೂಮಹಾಸಾಗರ ಇವುಗಳು ಕೂಡುವ ಸ್ಥಳ. ಶಿವನ ವರದಿಂದಾಗಿ ಕನ್ಯೆಯಿಂದ ಹೊರತೂ ಬೇರೆಯವರಿಂದ ಅವಧ್ಯನಾಗಿದ್ದ ಬಾಣನೆಂಬ ರಾಕ್ಷಸನ ಸಂಹಾರಕ್ಕೆ ಮಹಾ ವಿಷ್ಣುವಿನ ಆಜ್ಞೆಯಿಂದ ಅವತರಿಸಿದ ದುರ್ಗಾ ದೇವಿಯೇ ಕನ್ಯಾಕುಮಾರಿ ಎಂದು ಸ್ಥಳಪುರಾಣ ಹೇಳುತ್ತದೆ. ಈ ಕನ್ಯಾಕುಮಾರಿಯು ಶ್ರೀನಾರಾಯಣನ ಧರ್ಮಗಳನ್ನು ಅನುಕರಣೆ ಮಾಡಿರು ವುದರಿಂದ ಅವಳು ನಾರಾಯಣನ ಪತ್ನಿಯಾದ ಮಹಾಲಕ್ಷ್ಮಿಯೇ ಸರಿ ಎಂದು ವಾದಿರಾಜರು ಅಭಿಪ್ರಾಯ ಪಟ್ಟಿದ್ದಾರೆ. ರಾಮಾಯಣದ ಕಥೆಗೂ ಕನ್ಯಾಕುಮಾರಿಗೂ ನಂಟು. ರಾಮ ಸೀತೆಯನ್ನು ಅರಸುತ್ತಾ ಇಲ್ಲಿಗೆ ಬಂದು ಕಷ್ಟ ಸಂಕಟಗಳನ್ನು ದೂರಮಾಡೆಂದು ದೇವಿ ಕುಮಾರಿಯನ್ನು ಪೂಜಿಸಿದ. ದೇವಿಯು ಪ್ರತ್ಯಕ್ಷಳಾಗಿ ರಾಮನನ್ನು ರಾಮೇಶ್ವರಕ್ಕೆ ಹೋಗೆಂದು ಆಜ್ಞೆ ಮಾಡಿದಳಂತೆ. ಈ ಕ್ಷೇತ್ರದಲ್ಲಿ

ಸಾವಿತ್ರಿ, ಗಾಯತ್ರಿ, ಸರಸ್ವತಿ, ಪಾಪವಿನಾಶ ಮೊದಲಾದ ತೀರ್ಥಗಳಿದ್ದು ಅವುಗಳಲ್ಲಿ ಕನ್ಯಾ ತೀರ್ಥವೂ ಪ್ರಧಾನವಾಗಿದೆ. ಈ ಕನ್ಯಾತೀರ್ಥವನ್ನು ಬಲರಾಮರು ಸಂದರ್ಶಿಸಿದ್ದರು. ಆಚಾರ್ಯರು ಇದನ್ನು ಸಂದರ್ಶಿಸಿ ತಮ್ಮ ಸ್ನಾನದಿಂದ ಈ ತೀರ್ಥವನ್ನು ಪಾವನಗೊಳಿಸಿದ್ದರು.

ಈ ದೇವಾಲಯವು ಮೂಲದಲ್ಲಿ ಬಂಡೆಗಳ ಮೇಲಿದ್ದು ನಂತರ ಸಮುದ್ರ ಆಕ್ರಮಣ ವಾದಾಗ ಅದು ಈ ಸ್ಥಳಕ್ಕೆ ಸ್ಥಳಾಂತರಗೊಳಿಸಲ್ಪಟ್ಟಿದೆ. ಬಂಡೆಗಳಿರುವ ಈ ಭೂಭಾಗವು ದ್ವೀಪವಾಗಿ ಮಾರ್ಪಟ್ಟಿತು. ಆ ಬಂಡೆಗಳ ಮೇಲೂ ಮನುಷ್ಯರ ಪಾದಗಳಂತೆ ಗುರುತಿದ್ದು ಅದನ್ನು ಶ್ರೀಪಾದವೆನ್ನುವರು. ಇದು ಕುಮಾರಿ ಪಾದವೆಂದು ಈ ಸ್ಥಳವು ಪವಿತ್ರವೆಂದು ನಂಬಿದ್ದಾರೆ.

ಈ ಕನ್ಯಾಕುಮಾರಿ ದೇವಾಲಯ ಚಚ್ಚೌಕವಾಗಿದೆ. ದೇವಾಲಯಕ್ಕೆ ಮುಂಬಾಗಿಲಿದ್ದರೂ ಉತ್ತರದಿಕ್ಕಿನಿಂದ ಪ್ರವೇಶ. ಈಕೆ ಪೂರ್ವಕ್ಕೆ ಮುಖಮಾಡಿ ನಿಂತಿರುವಳು. ವಿಗ್ರಹವು ಸುಂದರವಾಗಿದೆ. ತುಂಬಾ ಚೆಲುವಿನ ಪ್ರತಿಮೆ. ಅವಳು ತನ್ನ ಒಂದು ಕೈಯಲ್ಲಿ ಹೂ ಹಿಡಿದು ಮತ್ತೊಂದು ಕೈಯನ್ನು ತನ್ನ ತೊಡೆಯ ಮೇಲಿಟ್ಟಿದ್ದಾಳೆ. ಮೂಗಿಗೆ ಹಾಕಿರುವ ಮೂಗುತಿಯ ಕಲ್ಲು ಕುರುಡಾಗುವಷ್ಟು ಹೊಳೆಯುತ್ತದೆ. ಆಭರಣಗಳಿಂದಲೂ, ಹೂಮಾಲೆಗಳಿಂದಲೂ, ಚೆಂದನದಿಂದಲೂ ಅಲಂಕರಿಸಿದಾಗ ಮೂರ್ತಿಯ ಶೋಭೆ ಇನ್ನೂ ಚೆನ್ನ. ದೇವಿ ಶುದ್ಧತೆ ಸುಂದರತೆಗಳ ಸಾಕಾರ ಮೂರ್ತಿ. ಇಲ್ಲಿ ಅನೇಕ ಸ್ನಾನ ಘಟ್ಟಗಳಿವೆ. ಇವು ಒಂದೊಂದೂ ಪುಣ್ಯ ವಿಶೇಷದಿಂದ ಪವಿತ್ರವೆನಿಸಿದೆ. ಪುಣ್ಯ ತೀರ್ಥಗಳಲ್ಲಿ ಕಾಶಿಯ ಗಂಗೆಯೂ ಕನ್ಯಾ ಕುಮಾರಿಯಲ್ಲಿ ಸಮುದ್ರವೂ ಪವಿತ್ರವೆಂದು ಭಾವಿಸಲಾಗಿದೆ. ಅಕ್ಟೋಬರ್ ತಿಂಗಳಲ್ಲಿ ನವರಾತ್ರಿ ಉತ್ಸವವೂ, ವೈಶಾಖಮಾಸದಲ್ಲಿ ರಥೋತ್ಸವವೂ ನಡೆಯುವುದು.

ಈ ಸ್ಥಳದ ಮತ್ತೊಂದು ಅದ್ಭುತವೆಂದರೆ ಸೂರ್ಯೋದಯ ಮತ್ತು ಸೂರ್ಯಾಸ್ತ. ಬಂಗಾಳ ಕೊಲ್ಲಿಯಿಂದ ಸೂರ್ಯೋದಯವೂ, ಅರಬ್ಬಿಸಮುದ್ರದಿಂದ ಸೂರ್ಯಾಸ್ತವೂ ಗೋಚರವಾಗು ವುದು. ಇದು ಅಷ್ಟಕ್ಕೇ ಸೀಮಿತವಾಗಿರದೆ ಹುಣ್ಣಿಮೆಯ ದಿನಗಳಲ್ಲಿ ಅಸ್ಥಂಗತಸೂರ್ಯ, ಉದಯಮುಖ ಚಂದ್ರ ಇವು ಏಕ ಕಾಲದಲ್ಲಿ ನೀಡುವ ರಸದೌತಣ. ಈ ಅಪೂರ್ವ ದೃಶ್ಯ ನೋಡುವ ಭಾಗ್ಯ ಈ ನೆಲದಲ್ಲಿ ಮಾತ್ರ ಲಭ್ಯ. ಇದನ್ನು ನೋಡಲು ಪ್ರವಾಸಿಗರ ಹಿಂಡೇ ಇಲ್ಲಿಗೆ ಬರುತ್ತದೆ.

## 304. ತೋತಾದ್ರಿ :

ಶುಚೀಂದ್ರಮ್ ಕ್ಷೇತ್ರದಿಂದ 40 ಕಿ.ಮಿ. ದೂರದಲ್ಲಿ ಈ ಸ್ಥಳವಿದೆ. ಇದು 8 ಸ್ವಯಂವ್ಯಕ್ತ ನರಸಿಂಹಕ್ಷೇತ್ರಗಳಲ್ಲಿ ಒಂದು.

## 305. ಶುಚೀಂದ್ರಮ್ :

ನಾಗರ್‌ಕೋಯಿಲ್ ನಿಂದ 14 ಕಿ.ಮಿ. ಕನ್ಯಾಕುಮಾರಿಯಿಂದ 13 ಕಿ.ಮಿ. ಇದು ಪೌರಾಣಿಕವಾಗಿ ಇಂದ್ರನು ಶುಚಿಯಾದ ಸ್ಥಳ. ಒಮ್ಮೆ ಇಂದ್ರನು ಅಹಲ್ಯೆಗೆ ಮೋಸ ಮಾಡಿ ಪಡೆದ ಶಾಪವನ್ನು ತಪಸ್ಸುಮಾಡಿ ಕಳೆದುಕೊಂಡು ಶುಚಿಯಾದ ಸ್ಥಳ. ಅಶುಚಿಗಳನ್ನು

ಶುಚಿಗೊಳಿಸುವ ಪಾವನ ಕ್ಷೇತ್ರಗಳಲ್ಲಿ ಪ್ರಮುಖವಾದುದು ಎಂದು ವಾದಿರಾಜರು ಇದರ ಮಹಾತ್ಮೆಯನ್ನು ವಿವರಿಸಿದ್ದಾರೆ. ಈ ದೇವಾಲಯವೂ ದೊಡ್ಡದಾಗಿದ್ದು 134 ಅಡಿ ಎತ್ತರದ ಗೋಪುರವನ್ನು ಹೊಂದಿದೆ. ದೊಡ್ಡ ಪ್ರಮಾಣದ ದ್ವಾರಪಾಲಕರು ದೇವಾಲಯದ ಪ್ರವೇಶ ದ್ವಾರದಲ್ಲಿದ್ದಾರೆ. ಇದು ವಿಷ್ಣುವಿನ ದೇವಾಲಯ. ಈ ವಿಗ್ರಹ 8 ಬೇರೆ ಬೇರೆ ಲೋಹಗಳಿಂದ ಮಾಡಿದ್ದು ಈ ರೀತಿಯ ಮೂಲ ವಿಗ್ರಹಕ್ಕೆ ನೀರಿನಿಂದ ಅಭಿಶೇಖವಿಲ್ಲ. ಉತ್ಸವ ಮೂರ್ತಿ ಶುಚೀಂದ್ರ ಪೆರುಮಾಳ್. ದಿನದ ಎಲ್ಲಾ ಪೂಜೆಗಳೂ ಈ ದೇವರಿಗೆ ಮಾಡಲ್ಪಡುತ್ತವೆ. ದೇವಾಲಯದ ಉತ್ತರ ಪಡಸಾಲೆಯಲ್ಲಿ ನಾನಾ ಶಬ್ಧಗಳನ್ನು ಹೊರಡಿಸುವ 33 ಸಂಗೀತ ಕಂಭಗಳಿವೆ. ಇದರಲ್ಲಿ ಜಲತರಂಗದ, ಮೃದಂಗದ, ತಂಭೂರದ ಶಬ್ದಗಳು ಉತ್ಪನ್ನವಾಗುತ್ತವೆ.

ಇಲ್ಲಿನ ಒಂದು ಸ್ಥಳದಲ್ಲಿ 2500 ವರ್ಷಗಳಷ್ಟು ಹಳೆಯದಾದ ಮರದ ಬಡ್ಡೆ ಇದೆ. ಇದರಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ ಲಿಂಗಗಳೂ ಮತ್ತು ಅನುಸೂಯಾದೇವಿಯ ವಿಗ್ರಹವೂ ಇದೆ. 800 ವರ್ಷಗಳಷ್ಟು ಹಳೆಯದಾದ ಬಿಳಿ ಬಣ್ಣದ ನಂದಿಯೂ ಇದೆ. ಬೃಹತ್ ಪ್ರಮಾಣದ ವಿನಾಯಕನಿಗಾಗಿ ನವಗ್ರಹ ಮಂಟಪವೊಂದು ರಚಿತವಾಗಿದೆ.

## 306. ನಾಗರ್‌ಕೋಯಿಲ್ :

ಬೆಂಗಳೂರಿನಿಂದ 696 ಕಿ.ಮಿ. ಕನ್ಯಾಕುಮಾರಿಯಿಂದ 19 ಕಿ.ಮಿ. ರೈಲುಮಾರ್ಗದ ಸೌಕರ್ಯವೂ ಇದೆ. ಇಲ್ಲಿರುವ ದೇವಾಲಯ ಭತ್ತದ ಗದ್ದೆಯ ಮಧ್ಯೆ ಇದೆ. ಒಂದು ಬಂಡೆಯಿಂದ ರಕ್ತ ಒಸರುತ್ತಿದ್ದಾಗ ನಂಬೂದ್ರಿ ಬ್ರಾಹ್ಮಣನಿಗೆ ದೇವರು ದರ್ಶನ ಕೊಟ್ಟನಂತೆ. ಇಲ್ಲಿರುವ ಒಂದು ಬಂಡೆ ಕಲ್ಲು ವಾಸುಕಿಯ ಪ್ರತೀಕ. ಈ ಕ್ಷೇತ್ರವು ಮೂರು ದೇವರುಗಳ ಆವಾಸಸ್ಥಾನ. ಅನಂತ ಕೃಷ್ಣ ಮತ್ತು ವಾಸುಕಿ ಈ ದೇವರುಗಳು. ಅದರ ಮಧ್ಯದಲ್ಲೇ ರುದ್ರದೇವರಿದ್ದಾರೆ. ಈ ದೇವರಿಗೆ ಹಾಲಿನಿಂದ ಅಭಿಶೇಖ ಮಾಡುವುದು ಇಲ್ಲಿನ ಪದ್ಧತಿ. ಇಲ್ಲಿನ ವಿಶೇಷವೆಂದರೆ ಬದುಕಿರುವ ಹಾವುಗಳು ಇಲ್ಲಿ ಒಂದು ಮೈಲು ಪ್ರದೇಶದಲ್ಲಿ ಹರಿದಾಡುತ್ತಿರು ತ್ತವೆ. ಇದುವರೆಗೂ ಯಾರೂ ಹಾವು ಕಚ್ಚಿ ಸತ್ತಿಲ್ಲ ಹಾವಿನಿಂದ ಯಾವುದೇ ರೀತಿಯ ತೊಂದರೆಯೂ ಆಗಿಲ್ಲ, ಈ ಪವಿತ್ರ ಸ್ಥಳದ ಮಣ್ಣನ್ನು ಇಲ್ಲಿ ಪ್ರಸಾದರೂಪವಾಗಿ ಭಕ್ತಾದಿ ಗಳಿಗೆ ಕೊಡುತ್ತಾರೆ.

## 307. ಶ್ರೀವಿಲ್ಲಿಪುತ್ತೂರು :

ಮಧುರೈಗೆ 88 ಕಿ.ಮಿ. ಮಧುರೈಯಿಂದ ನೇರ ರಸ್ತೆಯಿದೆ. ವಿರುಧ್ ನಗರ್ ತೆಂಕಾಸಿಯ ರೈಲುಮಾರ್ಗದ ಮಧ್ಯೆ ರೈಲುನಿಲ್ದಾಣ. ಇಲ್ಲಿನ ದೇವಾಲಯಗಳು ಅನೇಕ. ಶಿವನ ದೊಡ್ಡ ದೇವಾಲಯ. ನವನೀತಕೃಷ್ಣ, ಸತ್ಯಭಾಮಾ ಹಾಗೂ ತಿರುಪತಿ ಶ್ರೀನಿವಾಸ ದೇವಾಲಯ. ಇದು 100 ಅಡಿ ಎತ್ತರದ ಬೆಟ್ಟದ ಮೇಲೆ ಊರಿನಿಂದ 4 ಕಿ. ಮಿ. ದೂರದಲ್ಲಿದೆ. ವಟಪತ್ರ ಶಾಯಿ ದೇವಾಲಯ ಪುರಾತನವಾದದ್ದು. ಆಂಡಾಳ್ ಜನನ ವಾಗುವುದಕ್ಕೆ ಮುಂಚಿನದು. ಈ ಸ್ಥಳವು ಆಂಡಾಳ್‌ನ ದೇವಸ್ಥಾನದಿಂದಾಗಿ ಪ್ರಸಿದ್ಧವಾಗಿದೆ. ಈಕೆಯ ಬಗ್ಗೆ ವಿವರಣೆ ಈ

ರೀತಿ ಇದೆ. ಅಲ್ಲಿ ವಿಷ್ಣು ಚಿತ್ತನೆಂಬ ವೈಷ್ಣವ ಬ್ರಾಹ್ಮಣನಿದ್ದ. ಆತನು ವಿಷ್ಣುವಿನ ಅನನ್ಯ ಭಕ್ತ. ತುಳಸಿಯ ಪತ್ರೆಯನ್ನು ವಟಪತ್ರಶಾಯಿ ದೇವರಿಗೆ ಅರ್ಪಿಸಲು ತುಳಸಿ ತೋಟಕ್ಕೆ ದಿನವೂ ಹೋಗುತ್ತಿದ್ದ. ಅಲ್ಲಿ ಒಮ್ಮೆ ತುಳಸಿ ವನ ಅಗೆದಾಗ ಮಣ್ಣಿನಲ್ಲಿ ಚಿಕ್ಕ ಸುಂದರ ಮಗುವನ್ನು ಕಂಡ. ಈ ಮಗುವೇ ಗೋದಾದೇವಿ. ಇವಳು ಚಿಕ್ಕವಳಾಗಿರು ವಾಗಲೇ ವಿಷ್ಣುವನ್ನು ಭಕ್ತಿಯಿಂದ ಪೂಜಿಸಲು ಪ್ರಾರಂಭಿಸಿದಳು. ತಾನು ಕಟ್ಟಿದ್ದ ಹೂವಿನ ಹಾರವನ್ನು ತಾನೇ ಧರಿಸಿ ತಾನು ಸುಂದರಳಾಗಿದ್ದೇನೆಯೇ ಎಂದು ಭಾವಿಯಲ್ಲಿ ಇಣುಕಿ ನೋಡುತ್ತಿದ್ದಳಂತೆ. ಈ ಭಾವಿ ಆಂಡಾಳ್ ದೇವಾಲಯದಲ್ಲಿ ಇದೆ. ತಂದೆ, ಹೂವಿನ ಹಾರ ದೇವರಿಗೇಕಿಲ್ಲ ಎಂದು ವಿಚಾರಮಾಡಿದಾಗ, ಗೋದಾ ಧರಿಸಿದ್ದ ಸಂಗತಿ ತಿಳಿಯಿತು. ಆಗವನಿಗೆ ಗೋದಾದೇವಿಯೇ ಮಹಾಲಕ್ಷ್ಮಿ ಎಂದೂ ತಿಳಿದು ಅವತ್ತಿನಿಂದ ಅವಳಿಗೆ ಆಂಡಾಳ್ ಎಂದು ನಾಮಕರಣಮಾಡಿದ. ಮುಂದೆ ಆಕೆಗೆ ದೇವರನ್ನು ವರಿಸುವ ಆಸೆ ಬಲ ವಾಯಿತು. ಗೋಪಿಯರು ಬೃಂದಾವನದಲ್ಲಿ ಕೃಷ್ಣನ ಪ್ರೇಯಸಿಗಳಾಗಿದ್ದ ಕಥೆ ಕೇಳಿ ಆನಂದ ತುಂದಿತಳಾದಳು. ಈಕೆಗಿದ್ದ ಭಾವನೆಗಳನ್ನು 30 ಪದ್ಯಗಳಿರುವ ತಿರುಪ್ಪಾವೈನಲ್ಲಿ ವಿವರಿಸಿ ದ್ದಾಳೆ. ನಂತರ ಭಕ್ತಳಾದ ಆಂಡಾಳ್‌ನ್ನು ಶ್ರೀರಂಗದ ರಂಗನಾಥದೇವರು ವೈಭವದಿಂದ ಕರೆತರಲು ಮುಖ್ಯ ಅರ್ಚಕರಿಗೆ ಸೂಚಿಸಿದ. ಅವಳನ್ನು ಶ್ರೀರಂಗಕ್ಕೆ ವೈಭವವಾಗಿ ಕರೆತಂದು ಅವಳನ್ನು ಗರ್ಭಗುಡಿಯಲ್ಲಿ ಬಿಟ್ಟರು. ಅವಳು ದೇವರಲ್ಲಿ ಲೀನವಾದಳು. ಆಗ ಅವಳಿಗೆ 14 ವರ್ಷ ವಯಸ್ಸು.

ಶ್ರೀವಳ್ಳಿ ಪುತ್ತೂರಿನ ರಂಗಮನ್ನಾರ್ ದೇವರ ಗುಡಿಯಲ್ಲಿ ಆಂಡಾಳ್ ಸನ್ನಿಧಿ ಇದೆ. ಆಂಡಾಳ್ ಚರಿತ್ರೆಯನ್ನು ಚಿತ್ರ ರೂಪದಲ್ಲಿ ಗೋಡೆಯ ಮೇಲೆ ಚಿತ್ರಿಸಿದ್ದಾರೆ. ಆಂಡಾಳ್ ದೇವಾಲಯದ ಗೋಪುರ 192 ಅಡಿ ಇದೆ. 12 ಅಂತಸ್ತುಗಳಿವೆ. ಇದನ್ನು ಪೆರಿಯಾಳ್ವಾರ್ ಕಟ್ಟಿಸಿದ್ದು. ಇಲ್ಲಿನ ರಥವು ಬಹಳ ಪ್ರಾಚೀನ, ಬಹು ತೂಕದ್ದು, ಬೃಹತ್‌ಪ್ರಮಾಣದ್ದೂ ಆಗಿದೆ. ತುಳಸಿ ವನದ ಮಧ್ಯೆ ಆಂಡಾಳ್‌ನ ಚಿಕ್ಕ ಪ್ರತಿಮೆ ಇದೆ. ವಿಷ್ಣುಚಿತ್ತನ ದೇವಾಲಯವೂ ಇಲ್ಲಿದೆ. ಆಡಿ ಹಬ್ಬದಲ್ಲಿ ಇಲ್ಲಿ ರಥೋತ್ಸವ. ಇಲ್ಲಿ ತಂಗಲು ಛತ್ರ, ಪ್ರವಾಸಿ ಮಂದಿರಗಳು ಅನುಕೂಲವಾಗಿವೆ.

## 308. ತಿರುನಲ್ಲಾರ್ :

ತಂಜಾವೂರು ಜಿಲ್ಲೆ. ಕಾರೈಕಲ್‌ಗೆ ದಕ್ಷಿಣದಲ್ಲಿ 5 ಕಿ.ಮಿ. ಪಾಂಡಿಚೇರಿಯಿಂದ 132 ಕಿ.ಮಿ. ಚಿದಂಬರಂ 55 ಕಿ.ಮಿ. ಕುಂಭಕೋಣ 60 ಕಿ.ಮಿ. ಇಲ್ಲಿ 7ನೇ ಶತಮಾನದ ಶನಿಮಹಾರಾಯನ ಮಂದಿರವಿದೆ. ಶನಿರಾಯ ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಪ್ರವೇಶಿಸುವಾಗ ವಿಶೇಷ ಉತ್ಸವ, ಪೂಜೆಗಳು ನಡೆಯುವುದು.

ಪುರಾಣದಲ್ಲಿ ಇದಕ್ಕೆ ನಲೇಶ್ವರಂ ಎಂಬ ಹೆಸರಿತ್ತು. ಇಲ್ಲಿ ದಮಯಂತಿಯು ನಳನನ್ನು ದೇವತೆಗಳಿಂದ ಹಾಗೂ ನವಗ್ರಹಗಳಿಂದ ಕಣ್ಣು ತಪ್ಪಿಸಿ ಮದುವೆಯಾದಳು. ಆಗ ದೇವತೆಗಳು ಶನಿಯ ಸಹಾಯದಿಂದ ನಳನನ್ನು ನಾನಾ ಹಿಂಸೆಗೆ ಗುರಿಮಾಡಿದರು. ಅಂತಿಮವಾಗಿ ನಳನು ತಿರುನಲ್ಲಾರಿನ ನಳ ತೀರ್ಥದಲ್ಲಿ ಸ್ನಾನ ಮಾಡಿದಾಗ ಅವನಿಗೆ ಶನಿಯಿಂದ ಬಿಡುಗಡೆ

ಯಾಯಿತು. ಶನಿ, ನಳ, ಎಂಬ ಹೆಸರಿನ ಯಾವನನ್ನೂ ಮುಟ್ಟಿ ಹಿಂಸಿಸುವುದಿಲ್ಲ, ಕಷ್ಟ ಕೊಡುವುದಿಲ್ಲ, ಎಂದು ಭಾಷೆ ಕೊಟ್ಟು, ಅಲ್ಲಿಯೇ ಸ್ಥಿರವಾಗಿ ಶನಿ ನಿಂತನು. ಹೀಗೆ ನಳತೀರ್ಥ, ಬ್ರಹ್ಮತೀರ್ಥ, ಮತ್ತು ಸರಸ್ವತಿ ತೀರ್ಥಗಳು ಇಲ್ಲಿನ ಪವಿತ್ರ ಪುಷ್ಕರಿಣಿಗಳಾಗಿವೆ.

## 309. ಸತ್ಯವಿಜಯ ನಗರ :

ಕೌಂಡಿನ್ಯ ನದಿ ತೀರದಲ್ಲಿದೆ. ಉತ್ತರಾದಿಮಠದ ಸತ್ಯವಿಜಯ ತೀರ್ಥ ರೆಂಬುವವರ ಅನುಗ್ರಹದಿಂದ ಆರಣಿಯ ರಾಜನು ಮುಸ್ಲಿಂ ಆಕ್ರಮಣಕಾರರೊಡನೆ ಯುದ್ಧ ಮಾಡಿ ಜಯಿಸಿದ್ದನು. ಅದಕ್ಕಾಗಿ ಅವನು ತನ್ನ ರಾಜಧಾನಿಯಲ್ಲಿ ಒಂದು ಮಠವನ್ನು ಕಟ್ಟಿಸಿ ಕೊಟ್ಟನು. ಅಲ್ಲಿಯೇ ಸತ್ಯವಿಜಯ ತೀರ್ಥರ ಬೃಂದಾವನವು ಅವನ ಅರಮನೆಯ ಪ್ರಾಂಗಣ ದಲ್ಲಿದೆ. ಅರಮನೆಯ ಪ್ರತಿಯೊಂದು ಬುರುಜಿನಲ್ಲಿಯೂ ಸ್ವಾಮಿಗಳ ವೃಂದಾವನದ ಪ್ರತಿಕೃತಿಗಳಿವೆ.

## 310. ಇತರ

**ತಿರುನಲ್ವೇಲಿ :** ಇದು ತೆಂಕಾಸಿಯಿಂದ 55 ಕಿ.ಮಿ. ಇದು ರಾಯರ ಮಠದ ಶ್ರೀ ವಿಭುದೇಂದ್ರ ತೀರ್ಥರ ಬೃಂದಾವನ ಸ್ಥಳ. ಇವರು ರಾಯರ ಮಠದ ಪ್ರಾರಂಭಿಕ ಯತಿಗಳಾಗಿದ್ದು ಶ್ರೀರಾಮಚಂದ್ರತೀರ್ಥರಿಂದ ಆಶ್ರಮವನ್ನು ಪಡೆದಿದ್ದರು.

**ಪುದುಪಾಳ್ಯ, ತಿರುಚಂಗೋಡು :** ಪೆರಿಯಾರ್ ಜಿಲ್ಲೆ ಈರೋಡ್ ಹತ್ತಿರವಿದೆ. 20 ಕಿ.ಮಿ. ಶ್ರೀಪಾದರಾಜಮಠದ ಯತಿಗಳ ಬೃಂದಾವನಗಳಿವೆ. ಇವರೇ ಲಕ್ಷ್ಮಿಪತಿಗಳು, ಶ್ರೀನಿಧಿಗಳು, ಶ್ರೀ ವಿದ್ಯಾನಿಧಿಗಳು ಹಾಗೂ ಶ್ರೀಮೇದನಿಧಿಗಳು.

**ಭವಾನಿ :** ಶ್ರೀ ಸುಗುಣನಿಧಿ ತೀರ್ಥರ ಬೃಂದಾವನ ಸ್ಥಳ.

# ಕೇರಳ ರಾಜ್ಯ

## 311. ಕಣ್ವತೀರ್ಥ :

ಮಂಗಳೂರಿನಿಂದ 18 ಕಿ.ಮಿ. ಮಂಗಳೂರಿನಿಂದ ಕಾಸರಗೋಡಿಗೆ ಹೋಗುವ ದಾರಿಯಲ್ಲಿ ತಲಪಾಡಿಗೆ ಬಂದು ಅಲ್ಲಿಂದ 2 ಕಿ.ಮಿ. ದೂರ ಹೋಗಬೇಕು. ಇದರ ಪಕ್ಕದ ಸಮುದ್ರ ದಡದಲ್ಲಿ ಮದ್ವಾಚಾರ್ಯರು ಐತರೇಯ ಸೂಕ್ತಗಳನ್ನು ಪ್ರವಚನ ಮಾಡಿದ ಸ್ಥಳವಿದೆ. ಈ ಸ್ಥಳ ಪ್ರಶಾಂತ ವಾತಾವರಣವನ್ನು ಇಂದಿಗೂ ಹೊಂದಿದೆ. ಇಲ್ಲಿಯ ಸಮುದ್ರ ಭಾಗಗಳಲ್ಲಿ ತರಂಗದ ಗದ್ದಲ ಇಲ್ಲ, ಅಷ್ಟಮಠಗಳಲ್ಲಿ ದ್ವಂದ್ವ ವ್ಯವಸ್ಥೆಯನ್ನು ಗೊತ್ತುಮಾಡಿದ ಕಟ್ಟೆ ಇಲ್ಲಿದೆ. ಮದ್ವಾಚಾರ್ಯರು ಪ್ರತಿಷ್ಟಾಪಿಸಿದ ಆ ಎಂಟುಮಠಗಳಿಗೂ ಒಬ್ಬೊಬ್ಬ ಯತಿಗಳನ್ನು ನಿಯಮಿಸಿ, ಆ ಯತಿಗಳೆಲ್ಲರಿಗೂ ದೀಕ್ಷಾಸ್ನಾನ ಕೊಟ್ಟ ಸ್ಥಳವೂ ಇದೆ ಆಗಿದೆ. ಕಣ್ವ ಋಷಿಗಳು ಶ್ರೀರಾಮ ದೇವರನ್ನು ಇಲ್ಲಿಯೇ ಪೂಜಿಸಿದರೆಂದು ಹೇಳುವರು. ಅಲ್ಲಿಯ ಅಶ್ವತ್ಥವೃಕ್ಷದ ನೆರಳಿನಲ್ಲಿ ಉಡುಪಿಯ ಪೇಜಾವರ ಮಠಾಧೀಶರಾಗಿದ್ದ ಶ್ರೀ ವಿಜಯ ಧ್ವಜ ತೀರ್ಥರು ಶ್ರೀಮದ್ಭಾಗ ವತಕ್ಕೆ ವ್ಯಾಖ್ಯಾನ (ಪದರತ್ನಾವಳಿ) ರಚಿಸುತ್ತಿದ್ದರಂತೆ. ಆಗ ಬಿರುಗಾಳಿ, ಮಿಂಚು ಗುಡುಗಿ ನೊಡನೆ ಮಳೆ ಆರಂಭವಾಯಿತಂತೆ. ಕತ್ತೆತ್ತಿ ಮೇಲೆ ನೋಡಲು ಮಳೆ ನಿಂತು ಹೋಗಿ ಅಶ್ವತ್ಥವೃಕ್ಷವು ಸ್ಥಬ್ಧವಾಗಿ ನಿಂತಿತಂತೆ. ಈಗಲೂ ಈ ಪವಿತ್ರ ಅಶ್ವತ್ಥ ವೃಕ್ಷವನ್ನು ನೋಡ ಬಹುದು. ಇಂತಹ ಮಹಾಮಹಿಮರಾದ ಭಾಗವತ ವ್ಯಾಕ್ಯಾನಾಚಾರ್ಯರೆನಿಸಿರುವ ವಿರಕ್ತ ಶಿಖಾಮಣಿ ಎಂಬ ಹೊಗಳಿಕೆಯನ್ನು ಪಡೆದಿರುವ ಶ್ರೀ ವಿಜಯ ಧ್ವಜ ತೀರ್ಥರ ಬೃಂದಾವನವು ಇಲ್ಲಿದೆ. ಅವರ ಆರಾಧನೆ ಪ್ರತಿವರ್ಷ ವೈಶಾಖಶುದ್ಧ ತೃತೀಯ ನಡೆಯು ವುದು.

## 312. ವಿಷ್ಣುಮಂಗಲ :

ಕಾಸರಗೋಡಿನಿಂದ ದಕ್ಷಿಣಕ್ಕೆ 7 ಕಿ. ಮಿ. ಅಚ್ಯುತಪ್ರೇಕ್ಷಾಚಾರ್ಯರನ್ನು ಕೂಡಿಕೊಂಡು ದಕ್ಷಿಣ ದಿಗ್ವಿಜಯಕ್ಕೆ ಹೊರಟಿದ್ದ ಶ್ರೀಮದ್ವಾಚಾರ್ಯರು ಇಲ್ಲಿಯ ಮಹಾವಿಷ್ಣುವಿಗೆ ನಮಸ್ಕರಿಸಿದರು. ಸ್ವಾಮಿಗಳಿಗೆ ಭಿಕ್ಷೆ ನಡೆಸಿದ್ದ ಗೃಹಸ್ಥನೊಬ್ಬನು ಅವರನ್ನು ಪರೀಕ್ಷಿಸಲೆಂದು ತಂದುಕೊಟ್ಟಿದ್ದ ಇನ್ನೂರಕ್ಕಿಂತಲೂ ಹೆಚ್ಚು ಬಾಳೆಹಣ್ಣುಗಳನ್ನು ತಿಂದು ಅರಗಿಸಿಕೊಂಡಿದ್ದು ಇದೇ ಸ್ಥಳದಲ್ಲೇ.

## 313. ಮಧೂರು :

ಮಂಗಳೂರಿನಿಂದ 61 ಕಿ.ಮಿ. ದೂರದಲ್ಲಿರುವ ಕಾಸರಗೋಡು ಅರಬ್ಬಿ ಸಮುದ್ರದ ಕಡಲ ಕಿನಾರೆಯಲ್ಲಿದೆ. ಒಂದು ಭಾಗದಲ್ಲಿ ಪಯಸ್ವಿನಿ ನದಿ ಹರಿಯುತ್ತಿದೆ. ಇಲ್ಲಿಗೆ ರೈಲಿನ ಸೌಕರ್ಯವೂ ಉಂಟು. ಕಾಸರಗೋಡು ಬಸ್ ನಿಲ್ದಾಣದಿಂದ ಮಧೂರಿಗೆ 8ಕಿ. ಮಿ. ಇಲ್ಲಿ ಸ್ವಯಂ ಪ್ರಕಟಿತ ಬೃಹತ್ ಗಣಪತಿಯನ್ನು ನೋಡಬಹುದು. ಇದು ಬೆಳೆಯುತ್ತಲೇ ಇರುವ ಗಣೇಷ. ಇಂದಿಗೆ ಅದು 10 ಅಡಿ ಎತ್ತರ 4 ½ ಅಡಿ ಅಗಲವಾಗಿದೆ. ಈಗ ಅದು ಗರ್ಭಗುಡಿಯನ್ನು ಆವರಿಸಿಕೊಂಡಿದೆ. ವಿಶೇಷದಿನಗಳಲ್ಲಿ ಗರ್ಭಗುಡಿಯಲ್ಲಿ ಆ ಮೂರ್ತಿ ಮುಚ್ಚುವಷ್ಟು ಕಡುಬುಗಳನ್ನು ಮುನ್ನಾದಿನ ತುಂಬಿಸಿ ಬಾಗಿಲು ಮುಚ್ಚುತ್ತಾರೆ. ಮರುದಿನ ಅದನ್ನು ತೆಗೆದು ಭಕ್ತಾದಿಗಳಿಗೆ ಪ್ರಸಾದವೆಂದು ಹಂಚುವುದು ವಾಡಿಕೆ. ಇಲ್ಲಿನ ಗಣೇಷ ಮಂದಿರ ಯಾತ್ರಿಕರಿಗೆ ವಸತಿ ಹಾಗೂ ಭೋಜನದ ಸೌಕರ್ಯವನ್ನೂ ನೀಡುತ್ತದೆ. ಕೋಡಿಪಾಡಿಯಲ್ಲಿ ಚಾತುರ್ಮಾಸವನ್ನು ಪೂರೈಸಿದ ಆಚಾರ್ಯರು ಜಯಸಿಂಹರಾಜನ ಪಟ್ಟಣಕ್ಕೆ ತೆರಳುತ್ತಾ ದಾರಿಯಲ್ಲಿ ಮಧೂರಿನ ಮಧನೇಶ್ವರ ದೇವಾಲಯವನ್ನು ಪ್ರವೇಶಿಸಿ ಆ ರಾತ್ರಿ ಅಲ್ಲಿ ತಂಗಿದ್ದರು.

## 314. ಕಾವು ಮಠ :

ಮಂಗಳೂರಿನಿಂದ 50 ಕಿ.ಮಿ. ಕಾಸರಗೋಡಿನಿಂದ 12 ಕಿ.ಮಿ. ಉತ್ತರ ದಿಕ್ಕಿನಲ್ಲಿದೆ. ಪದ್ಮತೀರ್ಥ ಎಂಬ ಮಾಯಿಯನ್ನು ಸೋಲಿಸಿದ ಸಂದರ್ಭದಲ್ಲಿ ಮಧ್ವರ ಶಿಷ್ಯರು ಶ್ರೀ ಮಧ್ವಾಚಾರ್ಯರನ್ನು ಪ್ರಶಂಸಿಸಿದ ಸ್ಥಳ. ಆಚಾರ್ಯರ ಪ್ರಿಯ ಶಿಷ್ಯರಾಗಿದ್ದ ತ್ರಿವಿಕ್ರಮ ಪಂಡಿತರು ಹಾಗೂ ಅವರ ಸುಪುತ್ರ ನಾರಾಯಣ ಪಂಡಿತರು ವಾಸಿಸುತ್ತಿದ್ದ ಸ್ಥಳ. ಅವರು ವಾಸಿಸುತ್ತಿದ್ದ ಮನೆ, ಅವರಿಂದ ಉಪಯೋಗಿಸಲ್ಪಟ್ಟ ಚಕ್ರಾಂಕ, ಮುದ್ರೆಗಳ ಗೊಂಚಲು ಮತ್ತು ಎರಡು ಪುಟ್ಟ ಪಾದುಕೆಗಳು ಕೂಡ ಇಲ್ಲಿವೆ. ಅವರ ಮನೆಯ ಎದುರು ಬದಿ ಸುತ್ತ ಕಾಂಪೌಂಡ್ ಕಟ್ಟಿದ ಒಂದು ಗೋಪುರವೂ ಸಹ ಉಂಟು. ಇದು ತ್ರಿವಿಕ್ರಮಾಚಾರ್ಯರು ವಾದಿಗಳನ್ನು ಜಯಿಸಿದುದರ ಸ್ಮಾರಕವಿರಬಹುದು. ಮನೆಯ ಉತ್ತರ ಬದಿಯಲ್ಲಿ ಹಾಗೂ ಪೂರ್ವ ಬದಿಯಲ್ಲಿ ಎರಡು ಕಟ್ಟೆಗಳಿವೆ. ಇವು ತ್ರಿವಿಕ್ರಮಾಚಾರ್ಯರ ಹಾಗೂ ಶ್ರೀ ನಾರಾಯಣ ಪಂಡಿತರ ಸಮಾಧಿಗಳಿರಬಹುದು. ತ್ರಿವಿಕ್ರಮಾಚಾರ್ಯರಿಗೆ ಮಧ್ವರು ಅರ್ಚಿಸಿಕೊಟ್ಟಿದ್ದ, ಶ್ರೀ ಲಕ್ಷ್ಮಿ ನಾರಾಯಣ ವಿಗ್ರಹವೂ ಇಲ್ಲಿದೆ. ಈ ಪುಟ್ಟ ಸುಂದರ ಪ್ರತಿಮೆಯಲ್ಲಿ ನಾರಾಯಣನು ತನ್ನ ತೊಡೆಯಮೇಲೆ ಲಕ್ಷ್ಮಿ ದೇವಿಯನ್ನು ಕುಳ್ಳಿರಿಸಿಕೊಂಡಿರುವುದು ಸ್ಪಷ್ಟವಾಗಿ ಮೂಡಿ ಬಂದಿರುವುದು. ಇದೇ ಸ್ಥಳದಲ್ಲಿ ತ್ರಿವಿಕ್ರಮಾಚಾರ್ಯರು ರಾತ್ರಿಕಾಲದಲ್ಲಿ ಮಧ್ವಶಾಸ್ತ್ರಾಧ್ಯಯನ ಮಾಡಿದ್ದು. ಮುಂದೆ ತತ್ವ ಪ್ರದೀಪ ಮುಂತಾದ ಉದ್ಗ್ರಂಥಗಳ ರಚನೆ ಇತ್ಯಾದಿ ಸಾಧನೆಗಳನ್ನು ನೆರವೇರಿಸಿದ್ದು. ಈ ಪುಣ್ಯಸ್ಥಳದಲ್ಲಿಯೇ. ಅವರ ಪುತ್ರ ಶ್ರೀ ನಾರಾಯಣ ಪಂಡಿತಾಚಾರ್ಯರ, ಅವರ ಪುತ್ರ ತ್ರಿವಿಕ್ರಮಾರ್ಯ ದಾಸರ ಸಾಧನೆಗಳೂ ಈ ನೆಲದಲ್ಲೇ ನಡೆದಿದ್ದು ಎಂದು ತಿಳಿದಾಗ ಈ ಕ್ಷೇತ್ರದ ಮಣ್ಣಿನ ಮಹಿಮೆ ಎಷ್ಟೆಂದು ಊಹಿಸಿಕೊಳ್ಳಬಹುದು.

## 315. ಗುರುವಾಯೂರು :

ತ್ರಿಚೂರಿನಿಂದ 29 ಕಿ.ಮಿ. ಗೂಡಲೂರು - ತ್ರಿಚೂರು - ಗುರುವಾಯೂರು. ಬೆಂಗಳೂರು 340 ಕಿ.ಮಿ. ಮೈಸೂರು 190 ಕಿ.ಮಿ.

ಪೌರಾಣಿಕವಾಗಿ ಇದು ಬಹಳ ಪುಣ್ಯಪ್ರದವಾದ ಕ್ಷೇತ್ರ. ಭೂಲೋಕ ವೈಕುಂಠ. ಬ್ರಹ್ಮನು ಸೃಷ್ಟಿಕಾಲದಲ್ಲಿ ತೊಡಗಿರುವಾಗ ಆತನಿಗೆ ಸ್ಫೂರ್ತಿ ನೀಡಲು ಶ್ರೀವಿಷ್ಣು ತನ್ನ ಮೂರ್ತಿಯನ್ನು ಆತನಿಗೆ ನೀಡಿದ್ದನು. ಮಹಾರಾಜ ಸುತಪನೆಂಬುವನು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದಾಗ ಅದನ್ನು ಬ್ರಹ್ಮನು ಆ ಮಹಾರಾಜನಿಗೆ ಕೊಟ್ಟನು. ಶ್ರೀವಿಷ್ಣುವು ಇವನ ಪೂಜೆಗೆ ಮೆಚ್ಚಿ, ತನ್ನ ಎರಡು ಜನ್ಮಗಳಲ್ಲಿ ಸುತಪದಂಪತಿಗಳ ಮಗನಾಗಿ ಹುಟ್ಟುವೆನೆಂದು ವರ ನೀಡಿದ್ದನು. ಅದರಂತೆ ವಾಮನನಾಗಿ, ಕೃಷ್ಣನಾಗಿ ಜನ್ಮವೆತ್ತಿದ. ಕೆಲವು ಕಾಲ ಈ ಮೂರ್ತಿಯು ಕಶ್ಯಪ ಮತ್ತು ವಸುದೇವನ ಬಳಿ ಪೂಜೆಗೊಳ್ಳುತ್ತಿತ್ತು. ಕಡೆಗೆ ಈ ವಿಗ್ರಹ ಕೃಷ್ಣನಿಗೆ ಬಂತು. ಅವನು ದ್ವಾರಕೆಯಲ್ಲಿ ಅದನ್ನು ಇಟ್ಟುಕೊಂಡಿದ್ದು ಅವನ ಅಂತ್ಯಕಾಲದಲ್ಲಿ ಅದು ಉದ್ಧವ ನಿಗೆ ಕೊಡಲ್ಪಟ್ಟಿತು. ಉದ್ಧವನು ಗುರು ಬೃಹಸ್ಪತಿ ಹಾಗೂ ವಾಯುದೇವರ ಸಹಾಯದಿಂದ ಗುರುವಾಯೂರಿಗೆ ತಂದು, ಶಿವಪಾರ್ವತಿಯರನ್ನು ಎದುರುಕೊಂಡನು. ಶಿವಪಾರ್ವತಿಯರು ಮೂರ್ತಿಯನ್ನು ಅಲ್ಲಿ ಪ್ರತಿಷ್ಠಾಪಿಸಲು ಉದ್ಧವನಿಗೆ ನೆರವಾದರು. ಉದ್ಧವನು ಆ ಮೂರ್ತಿಯನ್ನು ದೇವಗುರು ಬೃಹಸ್ಪತಿಗೆ ಕೊಟ್ಟ. ಎಲ್ಲಿ ಸ್ಥಾಪಿಸಬೇಕೆಂದು ಹುಡುಕಾಡಿ, ಕೊನೆಗೆ ಅನೇಕ ಯುಗಗಳಿಂದ ರುದ್ರ ತಪಸ್ಸು ಮಾಡುತ್ತಿದ್ದ ರುದ್ರತೀರ್ಥದ ಬಳಿ ಕಲಿಯುಗ ದಲ್ಲಿ ಗುರು-ವಾಯು-ಊರಿನಲ್ಲಿ ಪ್ರತಿಷ್ಠೆ ಮಾಡಿದ.

ಈ ದೇವಾಲಯ ಕೇರಳಶೈಲಿಯಲ್ಲಿ ನಿರ್ಮಿತವಾಗಿದೆ. ಮುಖದ್ವಾರದಲ್ಲಿ ವಿಶಿಷ್ಟ ಭಂಗಿಯ ಗರುಡನ ವಿಗ್ರಹವಿದೆ ನಂತರ ಬಲಿಪೀಠ ಅದರ ಮುಂಭಾಗದಲ್ಲಿ ಚಿನ್ನದ ಮೆರುಗು ಕೊಟ್ಟಿರುವ ಧ್ವಜಸ್ಥಂಭವನ್ನು ನೋಡಬಹುದು. ಸುಮಾರು 15 ಅಂಗುಲ ಎತ್ತರವಿರುವ ಗುರುವಾಯೂರಪ್ಪನ್ ಅರ್ಥಾತ್ ಶ್ರೀ ಕೃಷ್ಣ ವಿಗ್ರಹವೂ ಅತ್ಯಂತ ಮುದ್ದಾಗಿದೆ. ವಿಗ್ರಹ ಸ್ಫಟಿಕ ಶಿಲೆಯಿಂದ ಮಾಡಿದ್ದು (ಪತಲಿಂಜನ ಶಿಲಾ) ಮೇಲಿನ ಎರಡು ಕೈಗಳಲ್ಲಿ ಶಂಖ ಚಕ್ರ, ಕೆಳಗಿನ ಎರಡು ಕೈಗಳಲ್ಲಿ ಗದೆ ಮತ್ತು ಕಮಲಪುಷ್ಪ ಹಿಡಿದಿದ್ದಾನೆ. ಈ ವಿಗ್ರಹ ಪೂರ್ಣಾವತಾರ ಸ್ವರೂಪದ್ದು. ಕೃಷ್ಣಾವತಾರಕ್ಕೆ ಮೊದಲು ಹೀಗೆ ಸ್ವಾಮಿ ಕಾಣಿಸಿಕೊಂಡಿದ್ದ ನಂತೆ. ಗೀತೆಯನ್ನು ಅರ್ಜುನನಿಗೆ ಹೇಳಿದಾಗ ಪಾರ್ಥಸಾರಥಿಯಾಗಿ ಹೀಗೆ ಕಂಡಿದ್ದನಂತೆ. ಈ ಮೂರ್ತಿಗೆ ದಿನವೂ ಎಣ್ಣೆಯಿಂದ ಸ್ನಾನಮಾಡಿಸುವ ಪದ್ಧತಿ ಇದೆ. ಈ ಎಣ್ಣೆಯು ವಾತಾದಿ ರೋಗಗಳನ್ನು ಗುಣಪಡಿಸುವುದೆಂದು ಭಕ್ತಾಧಿಗಳ ನಂಬಿಕೆ. ಇಲ್ಲಿನ ಮುಖ್ಯ ಉತ್ಸವ ಗಳೆಂದರೆ 41 ದಿನಗಳ ಪರ್ಯಂತ ನಡೆಯುವ ಮಂಡಲಂ, 10 ದಿನಗಳ ತನಕ ನಡೆಯುವ ವೈಭವಯುತ ಪೂಯಂ ನಕ್ಷತ್ರ ಉತ್ಸವಗಳು. ಈ ಸಂದರ್ಭದಲ್ಲಿ ಆನೆಗಳ ಓಟ ಸ್ಪರ್ಧೆ ಏರ್ಪಡಿಸಲಾಗುತ್ತದೆ. (ಆಗಸ್ಟ್ - ಸೆಪ್ಟೆಂಬರ್) ಶ್ರೀಕೃಷ್ಣ ಜನ್ಮಾಷ್ಟಮಿ ಇಲ್ಲಿ ನಡೆಯುವ ವೈಭವಯುತ ಹಬ್ಬ. ಏಕಾದಶಿ ದಿನ ಅದರಲ್ಲೂ ವೃಶ್ಚಿಕ ಮಾಸದ ಏಕಾದಶಿದಿನ ದೇವರ ದರ್ಶನ ಬಹುಪುಣ್ಯವೆಂದು ಭಾವಿಸಲಾಗಿದೆ. ಇಲ್ಲಿನ ದೇವರನ್ನು ಸ್ತೋತ್ರಮಾಡಿ

ನಾರಾಯಣೀಯಮ್ ಎಂಬ ಗ್ರಂಥವನ್ನು ರಚಿಸಿದ ನಾರಾಯಣ ಭಟ್ಟನೆಂಬ (ಭಟ್ಟಾರ್ತಿ) ಕವಿ. ಏಕಾದಶಿದಿನವೇ ಇಲ್ಲಿಯೇ ಇದ್ದು ದೇವರನ್ನು ಪ್ರತ್ಯಕ್ಷ ನೋಡಿದುದು. ಮತ್ತು ಈ ಗ್ರಂಥವನ್ನು ರಚಿಸಿದುದು. ಈ ಕಾವ್ಯ ಬಲುಪ್ರಸಿದ್ಧವಾಗಿದೆ.

ಇಲ್ಲಿ ದೇವಾಲಯದ ಬಳಿ ಇರುವ ಸರೋವರ ರುದ್ರತೀರ್ಥವೆಂಬ ಹೆಸರಿನಿಂದ ಪವಿತ್ರವಾಗಿದೆ. ಇಲ್ಲಿಯೇ ಗುರುವಾಯೂರಪ್ಪನು ತೀರ್ಥಸ್ನಾನ ಮಾಡುವ ಸ್ಥಳ. ಇಲ್ಲಿಯೇ ಶಿವನು ದೇವರನ್ನು ನೀರಿನಲ್ಲಿ ಕುಳಿತು ತಪಸ್ಸುಮಾಡಿದ. ಆಪರಿಣಾಮವಾಗಿ ಶಿವನು ಮೇಲೆದ್ದು ಬಂದು ಮಹಾವಿಷ್ಣುವನ್ನು ಹೊಗಳಿ ರಚಿಸಿದ ರುದ್ರಗೀತವನ್ನು ನೀಡಿದ್ದು.

ಈ ಸ್ಥಳದಲ್ಲಿ ಶ್ರೀಕೃಷ್ಣ ಜನ್ಮಾಷ್ಟಮಿಯ ದಿನಗಳಲ್ಲಿ ಚಂಬೈ ಸಂಗೀತೋತ್ಸವವು ನಡೆಯುವುದು. ದೇಶದ ಪ್ರಸಿದ್ಧ ಸಂಗೀತ ವಿದ್ವಾಂಸರೆಲ್ಲಾ ಇಲ್ಲಿಗೆ ಬಂದು ಈ ದಿನಗಳಲ್ಲಿ ದೇವರಿಗೆ ಸಂಗೀತ ಸೇವೆ ನಡೆಸುವರು. ಧನುರ್ಮಾಸದ ಮೊದಲನೆ ಬುಧವಾರ ದೇವರಿಗೆ ಅಕ್ಕಿನುಚ್ಚನ್ನು (ಆವಿಲ್) ನೈವೇದ್ಯಕ್ಕೆ ಇಡುವರು. ಏಕೆಂದರೆ ಈ ದಿನ ಶ್ರೀಕೃಷ್ಣನ ಸಹಪಾಠಿ ಮತ್ತು ಭಕ್ತನಾಗಿದ್ದ ಕುಚೇಲನು ದೇವರಿಗೆ ಇದನ್ನೇ ನೀಡಿದ್ದನಂತೆ. ಕುಂಭಮಾಸದಲ್ಲಿ (ಫೆಬ್ರುವರಿ - ಮಾರ್ಚಿ) ಈ ಸ್ಥಳದ ಮುಖ್ಯ ಉತ್ಸವವಾದಾಗ ಅದು ಆನೆಗಳ ಪಂದ್ಯದಿಂದ ಪ್ರಾರಂಭವಾಗುವುದು. ವೈಶಾಖ ಮಾಸದ ಪೌರ್ಣಿಮಾದಿಂದ ಮುಂದಿನ ಪೌರ್ಣಿಮಾದ ವರೆಗೆ ಇರುವ ದಿನಗಳು. ಈ ದೇವರ ದರ್ಶನಕ್ಕೆ ಬಹುಪುಣ್ಯ ದಿನಗಳೆಂದು ನಂಬಿಕೆ.

ಪಾಂಚಜನ್ಯ ಪ್ರವಾಸಿ ಮಂದಿರದ ಬಳಿ ಗಜರಾಜ ಕೇಶವನ ದೊಡ್ಡ ಗಾತ್ರದ ಪ್ರತಿಮೆ ಇದೆ. ಈ ಕೇಶವನೇ ಹಿಂದೆ ಸ್ವಾಮಿಯ ಭಕ್ತನಾಗಿ ಅನೇಕ ವರ್ಷಗಳು ಸೇವೆ ಸಲ್ಲಿಸಿದ್ದನು.

## 316. ತಿರುವಹೀಂದ್ರಮ್ :

ತಮಿಳುನಾಡಿನ ಕಡೆಯ ನಲ್ಲೂರಿನಿಂದ ನೇರ ಬಸ್ಸು. ವರಕ್ಕಾರ್‌ಪಟ್ಟಿ ರೈಲು ನಿಲ್ದಾಣದ ಬಳಿ.

ಇದು ಬಹುಪುರಾತನವಾದ ವಿಷ್ಣುಕ್ಷೇತ್ರ. ಶ್ರೀವೈಷ್ಣವರ ನೂರೆಂಟು ತಿರುಪತಿಗಳಲ್ಲಿ ಇದೂ ಒಂದು. ಇಲ್ಲಿನ ಮುಖ್ಯ ದೇವರು ಪದ್ಮನಾಭ. ತಿರುವಾಂಕೂರು ದೊರೆ ಈ ಗುಡಿ ಕಟ್ಟಿಸಿದ. ಈಗಲೂ ಬಂಗಾರದಿಂದ ಮಾಡಿದ ಒಂದು ತೆಂಗಿನ ಚಿಪ್ಪಿನಿಂದಲೇ ಈ ದೇವರಿಗೆ ನೈವೇದ್ಯ ಇಡುತ್ತಾರೆ. ವೇದಾಂತ ದೇಶಿಕರು ಈ ದೇವರನ್ನು ಪ್ರತ್ಯಕ್ಷ ಮಾಡಿಕೊಂಡಿದ್ದ ಸ್ಥಳ. ಈ ದೇವರನ್ನು ಸಂಸ್ಕೃತ, ತಮಿಳು, ಪ್ರಾಕೃತ ಈ ಮೂರೂ ಭಾಷೆಗಳಲ್ಲಿ ಸ್ತುತಿಸಿದ್ದಾರೆ. ಪಕ್ಕದ ಸಣ್ಣಬೆಟ್ಟ, ಔಷಧಗಿರಿಯಲ್ಲಿ ಹಯಗ್ರೀವ ಸನ್ನಿದಿ ಇದೆ.

## 317. ಜನಾರ್ಧನ :

ತಿರುವನಂತಪುರದಿಂದ 55 ಕಿ.ಮಿ. ವಲ್ಕಲ (ವರ್ಕಾಲ) ಎಂಬ ಹೆಸರೂ ಇದಕ್ಕೆ ಇದೆ. ದ. ರೈಲ್ವೆಯ ಎರ್ನಾಕುಲಂ-ಕೊಲ್ಲಂ ತಿರುವನಂತಪುರಂ ರೈಲುಮಾರ್ಗದಲ್ಲಿದೆ. ವರ್ಕಾಲಾ ಎಂಬ ರೈಲು ನಿಲ್ದಾಣದಿಂದ 2ಕಿ. ಮಿ. ಈ ಸ್ಥಳದಲ್ಲಿ ಜನಾರ್ದನ ಮಂದಿರವಿದೆ. ಪ್ರಧಾನ ಮಾರ್ಗ ಮಧ್ಯದಲ್ಲಿಯೇ ನೆಲಮಟ್ಟದಿಂದ 65 ಮೆಟ್ಟಿಲುಗಳು ಹತ್ತಿ ಮಂದಿರವನ್ನು ಪ್ರವೇಶಿಸ

ಬಹುದು. ಇಲ್ಲಿರುವ ಜನಾರ್ದನ ವಿಗ್ರಹವು ಚತುರ್ಭುಜ ಧಾರಿಯಾಗಿದ್ದು ಸುಂದರವಾಗಿದೆ. ಮಂದಿರದ ಸುತ್ತಿನಲ್ಲಿ ಶಿವನ ಹಾಗೂ ಪುರಾತನ ವಟವೃಕ್ಷಗಳ ದರ್ಶನಮಾಡಬಹುದು. ದೇವಾಲಯವು ಕೇರಳದ ಶಿಲ್ಪದ ಮಾದರಿಯಲ್ಲಿದೆ. ಇಲ್ಲಿಂದ ಅರ್ಧ ಕಿ.ಮಿ. ದೂರದಲ್ಲಿ ವಲ್ಲಭಾಚಾರ್ಯರ ಗದ್ದುಗೆ ಇದೆ. ಹತ್ತಿರದಲ್ಲಿಯೇ ಸಮುದ್ರ ತೀರವಿದ್ದು ಅಲ್ಲೊಂದು ಮಂಟಪವಿದೆ. ಅಲ್ಲಿಯೇ ಬ್ರಹ್ಮನು ಯಜ್ಞ ಮಾಡಿದನೆಂದು ಪ್ರತೀತಿ. ಇಂದಿಗೂ ಯಜ್ಞಕುಂಡ ದಿಂದ ಸುವಾಸಿತ ಧೂಮ ಹೊರಗೆ ಬರುತ್ತದೆ. ಈ ಧೂಮ ಔಷಧೀಯ ಗುಣಗಳಿಂದ ಕೂಡಿದ್ದೆಂದೂ ಹೇಳಲಾಗಿದೆ. ಪ್ರಕೃತಿ ಸೌಂದರ್ಯದ ದೃಷ್ಟಿಯಿಂದಲೂ ಈ ದೇವಾಲಯದ ಸುತ್ತಲ ಪರಿಸರ ಪ್ರಸಿದ್ಧ. ಈ ಸ್ಥಳವು ಖನಿಜಯುಕ್ತವಾದ ನೀರಿನ ಬುಗ್ಗೆಗಳಿಗೂ, ಹೆಸರುವಾಸಿ ಯಾಗಿದೆ. ಪ್ರವಾಸಿಗಳು ಈ ಕಾರಣದಿಂದ ಇಲ್ಲಿಗೆ ಹೆಚ್ಚು ಧಾವಿಸುತ್ತಾರೆ.

## 318. ತಿರುವನಂತಪುರಂ :

ಇದು ಕೇರಳದ ರಾಜಧಾನಿ. ಬೆಂಗಳೂರಿನಿಂದ ಐಲೆಂಡ್ ಎಕ್ಸ್‌ಪ್ರೆಸ್ ರೈಲು ನೇರವಾಗಿ ಇಲ್ಲಿಗೆ ಬರುವುದು. ಪಶ್ಚಿಮತೀರದ ಮಂಗಳೂರಿನಿಂದ ಇಲ್ಲಿಗೆ ನೇರ ರೈಲು ಸೌಕರ್ಯ (ಈಸ್ಟ್ ಫೋರ್ಟ್ ರೈಲು ನಿಲ್ದಾಣ) ಮೈಸೂರಿಗೆ 640 ಕಿ.ಮಿ. ಬೆಂಗಳೂರಿಗೆ 761 ಕಿ.ಮಿ. ಕನ್ಯಾಕುಮಾರಿ 85 ಕಿ.ಮಿ. ಅನಂತಪದ್ಮನಾಭಸ್ವಾಮಿ ಗುಡಿ ದಿಣ್ಣೆಯ ಮೇಲೆ, ಕೋಟೆಯ ಮಧ್ಯಭಾಗದಲ್ಲಿದೆ. ಸ್ವಾಮಿಗೆ 'ಮಾಧವ' ಎಂಬ ಹೆಸರಿದೆ.

ಅನಂತನ ಕಥೆಯಲ್ಲಿ ಬರುವ ಅನಂತಪದ್ಮನಾಭಸ್ವಾಮಿ ಇವರೇ ಆಗಿದ್ದಾರೆ. ಇದನ್ನು ಈ ಸ್ಥಳವನ್ನು ಅನಂತ ಶಯನವೆಂದೂ ಕರೆದಿರುವರು. ಈ ಸ್ಥಳದ ಮಹಿಮೆ ಮಹಾಭಾರತ ದಲ್ಲಿ ಬ್ರಹ್ಮಾಂಡ ಮೊದಲಾದ ಪುರಾಣಗಳಲ್ಲಿ ವರ್ಣಿತವಾಗಿದೆ. ಇದೊಂದು ಖ್ಯಾತ ವಿಷ್ಣು ದೇವಾಲಯ. ಈ ದೇವಾಲಯವು ನಗರ ಬಸ್ ನಿಲ್ದಾಣಕ್ಕೂ ಹತ್ತಿರವಾಗಿದ್ದು, ಯಾತ್ರಿಕರಿಗೆ ತುಂಬಾ ಅನುಕೂಲವಾಗಿದೆ. ದೇವಾಲಯವು (1731ರಲ್ಲಿ ನಿರ್ಮಿತ) 7 ಹಂತದ ಗೋಪುರ ವನ್ನು ಒಳಗೊಂಡಿದೆ. ಇಲ್ಲಿ 368 ಕಲ್ಲಿನ ಕಂಬಗಳಿದ್ದು ದ್ರಾವಿಢ ಶೈಲಿಯಲ್ಲಿ ಗುಡಿ ನಿರ್ಮಾಣವಾಗಿದೆ. ದೇವಾಲಯವು ದೊಡ್ಡದಾಗಿರುವುದಲ್ಲದೆ, ದೇವರಮೂರ್ತಿಯೂ ಬಹು ದೊಡ್ಡದಾಗಿದ್ದು ಅದನ್ನು ಮೂರು ಬಾಗಿಲುಗಳಿಂದ ದರ್ಶನಮಾಡಬೇಕಾಗುತ್ತದೆ. ವಿಗ್ರಹ ದಿಂದ ಚಿಮ್ಮಿದಂತಿರುವ ಕಮಲ ಪುಷ್ಪದ ಮೇಲೆ ಬ್ರಹ್ಮದೇವರು ಕುಳಿತಿರುವರು. ದೇವಾಲಯವು ಬೆಳಗಿನ ಜಾವ 4 ರಿಂದ ಸಂಜೆಯವರೆಗೆ ತೆರೆದಿರುವುದು. ಮಧ್ವಾಚಾರ್ಯರು ತಮ್ಮ ದಕ್ಷಿಣ ದಿಗ್ವಿಜಯದ ಕಾಲದಲ್ಲಿ ಇದನ್ನು ಸಂದರ್ಶಿಸಿದ್ದರು. ತಿರುವಾಂಕೂರಿನ ರಾಜರುಗಳೆಲ್ಲಾ ಈ ದೇವರ ಭಕ್ತರು. ಮನೆ ದೇವರ ನೆನಪಿಗಾಗಿ ಪದ್ಮನಾಭದಾಸ ಎಂದು ಕರೆದುಕೊಳ್ಳುತ್ತಿದ್ದರು.

ಯಾತ್ರಿಕರಿಗೆ ವಿಶೇಷ ಸೂಚನೆ : ದೇವಾಲಯಕ್ಕೆ ಹಿಂದೂಗಳಿಗೆ ಮಾತ್ರ ಪ್ರವೇಶ. ಗಂಡಸರು ದೇವಾಲಯಕ್ಕೆ ಪಂಚೆ ಧರಿಸಿ ಶಲ್ಯ ಹೊದ್ದು ಬರಬೇಕು. (ದೇವಾಲಯದ ಹೊರಗೆ ಈ ವಸ್ತ್ರಗಳನ್ನು ಬಾಡಿಗೆಗೆ ಕೊಡುವರು.)

## 319. ತಿರುವಟ್ಟಾರ್ :

ನಾಗರ್‌ಕೋಯಿಲ್–ತಿರುವನಂತಪುರ ಹೆದ್ದಾರಿಯಲ್ಲಿ 22 ಕಿ.ಮಿ. ಅನಂತಶಯನ ಕ್ಷೇತ್ರದಿಂದ 18 ಕಿ.ಮಿ. ಇದು ಆದಿಕೇಶವನ ಕ್ಷೇತ್ರ. ಇಲ್ಲಿ ಸ್ವಾಮಿಯ 16 ಅಡಿ ಉದ್ದದ ಶೇಷಶಾಯಿ ಮೂರ್ತಿ. 3 ದ್ವಾರಗಳಿಂದ ಮುಖ, ಉದರ ಮತ್ತು ಪಾದಗಳನ್ನು ದರ್ಶಿಸ ಬಹುದು. ಶೇಷನ ಕೆಳಗೆ ಭಕ್ತನಾದ ಒಬ್ಬ ರಾಕ್ಷಸನು ಹತನಾಗಿ ಬಿದ್ದಿರುವ ಶಿಲ್ಪವಿದೆ. ದೇವರು ಎಡಭಾಗದಲ್ಲಿ ಶಯನಮಾಡಿ ಕೈಯನ್ನು ಶಿವಲಿಂಗದ ಮೇಲೆ ಇಟ್ಟಿದ್ದಾರೆ. ಮರಕತವಲ್ಲಿ ದೇವರ ಪತ್ನಿ. ಈ ಊರು ಚಿಕ್ಕದಾದರೂ ಸಕಲ ಸೌಕರ್ಯಗಳೂ ಯಾತ್ರಿಕರಿಗೆ ಇದೆ. ವಸತಿ ಸೌಕರ್ಯವೂ ಇಲ್ಲಿದೆ.

# ಆಂಧ್ರ ಪ್ರದೇಶ

## 320. ಚಿತ್ತೂರು :

ಬೆಂಗಳೂರು- ತಿರುಪತಿ ರಸ್ತೆಯಲ್ಲಿ ಕೋಲಾರದಿಂದ 110 ಕಿ.ಮಿ. ಬೆಂಗಳೂರಿನಿಂದ 170 ಕಿ.ಮಿ. ಮೈಸೂರಿನಿಂದ 314 ಕಿ.ಮಿ. ಇಲ್ಲಿನ ಗ್ರೀಮ್ಸ್‌ಪೇಟೆ ಬಡಾವಣೆಯ ಉತ್ಸವ ರಸ್ತೆಯಲ್ಲಿ ರಾಯರಮಠದ ಸುಗುಣೇಂದ್ರ ತೀರ್ಥರ ಬೃಂದಾವನವಿದೆ. ವಿಜಯಪ್ರದಾಯಿನಿ ದುರ್ಗಾದೇವಾಲಯವೂ ಕೂಡ ಇದೆ. ಅಲ್ಲಿಗೆ ಹೋಗಲು ಬಸ್ ನಿಲ್ದಾಣದಿಂದ ಆಟೋಗಳ ಸೌಕರ್ಯವಿದೆ.

## 321. ತಿರುಪತಿ :

ಮದ್ರಾಸ್‌ನಿಂದ 150 ಕಿ.ಮಿ. ಬೆಂಗಳೂರಿನಿಂದ 247 ಕಿ.ಮಿ. ಮೈಸೂರಿನಿಂದ 386 ಕಿ.ಮಿ. ಬಸ್ಸು ರೈಲುಗಳ ಸೌಕರ್ಯವಿದೆ.

ತಿರುಮಲೈ ಬೆಟ್ಟಗಳ ತಪ್ಪಲಿನಲ್ಲಿರುವ ನಗರ. ಶ್ರೀವೈಷ್ಣವ ಆಚಾರ್ಯರಾದ ಶ್ರೀ ರಾಮಾನುಜರು 1130ರಲ್ಲಿ ಗೋವಿಂದರಾಜ ಸ್ವಾಮಿ ದೇವಾಲಯವನ್ನು ನೆಲೆಗೊಳಿಸಿ ಅದರ ಸುತ್ತ ಒಂದು ಸಣ್ಣ ಹಳ್ಳಿಯನ್ನು ನಿರ್ಮಿಸಿದ್ದರು. ಅದೇ ಈಗ ಬೃಹತ್ ಗೋವಿಂದರಾಜ ಪಟ್ಟಣವಾಗಿ ಬೆಳೆದಿದೆ. ಜನಜನಿತವಾಗಿರುವ ವಿಷಯವೇನೆಂದರೆ ಈ ದೇವರು ಶ್ರೀವೆಂಕಟೇಶ್ವರರ ಅಣ್ಣ. ಈ ಮೂಲಮೂರ್ತಿ ಶಯನ ಭಂಗಿಯಲ್ಲಿದ್ದು ತಲೆಯ ಕೆಳಗೆ ಕೊಳಗವನ್ನು ದಿಂಬಿನಂತೆ ಇಡಲಾಗಿದೆ. ಇಲ್ಲಿ ಇಳಿದುಕೊಳ್ಳಲು ಟಿ. ಟಿ. ಡಿಯವರ ಛತ್ರಗಳು, ಲಾಡ್ಜ್‌ಗಳೂ, ಇವೆ. ಇಲ್ಲಿ ಊರೊಳಗೆ ವೈಷ್ಣವ ಮಠಗಳೂ ಇವೆ.

## 322. ತಿರುಮಲೈ :

ತಿರುಪತಿಯಿಂದ 8 ಕಿ.ಮಿ. ದೇವಸ್ಥಾನದ ಬಸ್ಸುಗಳು 5 A. M. ನಿಂದ 9 P. M. ವರೆಗೆ ಸಂಚರಿಸುತ್ತವೆ. ವಿಮಾನದ ಅನುಕೂಲವೂ ಉಂಟು. ಇದು ಇಲ್ಲಿಗೆ ಪೂರ್ವ ಬೆಟ್ಟಗಳ ಎತ್ತರ ಪ್ರದೇಶವಿದ್ದು ಇದನ್ನು ಮೇರುಪರ್ವತ ಭಾಗವೆಂದು ಹೇಳುವರು. ಬೆಟ್ಟವು 3000 ಅಡಿಗಳಷ್ಟಿದೆ. ಮತ್ತು 7 ಬೆಟ್ಟಗಳಿಂದ ಕೂಡಿರುವುದು. ಬಸ್ಸುಗಳು ಮೇಲೆ ಹೋಗಲು ಮತ್ತು ಕೆಳಕ್ಕೆ ಬರಲು ಬೇರೆ ಬೇರೆ ಮಾರ್ಗಗಳನ್ನು ಅನುಸರಿಸುತ್ತವೆ. ಅಲ್ಲದೆ ಅಲ್ಲಿಗೆ ನಡೆದು ಹೋಗಿ ಸೇರಲು ಸೋಪಾನ ಮಾರ್ಗವೆಂಬ ನಡುಗೆಯ ಹಾದಿಯು (7 ಮೈಲಿ)

ಬಹಳ ಸುಸಜ್ಜಿತವಾಗಿದ್ದು ಯಾವ ಪ್ರಯಾಸವೂ ಇಲ್ಲದೆ ರಾತ್ರಿ ಹಗಲು ಮೇಲೆ ಹೋಗಬಹುದು. ದೀಪ, ನೀರಿನ ನೆರಳಿನ ವ್ಯವಸ್ಥೆಗಳು ಅತ್ಯಂತ ಆಧುನಿಕವಾಗಿದೆ. ಇಲ್ಲಿರುವ 7 ಬೆಟ್ಟಗಳು ಆದಿಶೇಷನ 7 ಹೆಡೆಗಳನ್ನು ಸೂಚಿಸುವುವು. ಅವುಗಳು ಯಾವುದೆಂದರೆ, ಶೇಷಾಚಲ, ವೇದಾಚಲ, ಗರುಡಾಚಲ, ಅಂಜನಾಚಲ, ವೃಶಾಚಲ, ನಾರಾಯಣಾಚಲ, ಮತ್ತು ವೈಕುಂಠಾಚಲ, ಪುರಾಣಗಳ ರೀತ್ಯ ಈ ಮೇರು ಪರ್ವತದ ಬೆಟ್ಟಗಳ ಮೇಲುಭಾಗದಲ್ಲಿ ಆದಿಶೇಷನ ದೇಹದ ಮೇಲೆ ವಿಷ್ಣು ವಿಶ್ರಮಿಸುತ್ತಿದ್ದಾನೆ ಎಂಬ ಭಾವನೆ ಇದೆ. ದೇವಾಲಯವು ಪರೀಕ್ಷಿತ್ ರಾಜನಿಂದ ಸ್ಥಾಪನೆಗೊಂಡಿದೆಯಂತೆ.

ತಿರುಮಲೆಯ ಪರ್ವತಗಳಲ್ಲಿ ಸುಶೋಭಿತವಾದ ಶ್ರೀ ವೆಂಕಟರಮಣಸ್ವಾಮಿಯ ಆಲಯವು ಭಾರತದ ಪ್ರಾಚೀನ ಆಲಯಗಳಲ್ಲಿ ಒಂದು. ಎಂಬುದಾಗಿ ಪ್ರಸಿದ್ಧವಾಗಿದೆ. ದೇವಾಲಯವು 2 ಎಕರೆ ಪ್ರದೇಶದಷ್ಟು ವಿಸ್ತಾರವಾಗಿದ್ದು 3 ಪ್ರಾಕಾರಗಳನ್ನು ಹೊಂದಿದೆ. ಇದಕ್ಕೆ 2 ಗೋಪುರಗಳಿವೆ. ಚಿನ್ನದ ತಗಡಿನಿಂದ ಹೊದಿಸಲ್ಪಟ್ಟ ಆನಂದವಿಮಾನವೆಂಬ ಗೋಪುರವು ಶ್ರೀ ವೆಂಕಟೇಶನ ಗರ್ಭಗುಡಿಯ ಮೇಲೆ ಇದೆ. ಅದರಲ್ಲಿರುವ ವಿಮಾನ ವೆಂಕಟೇಶನ ದರ್ಶನ ಬಹಳ ಪುಣ್ಯವೆಂದು ಭಾವಿಸಲಾಗಿದೆ. ದೇವರಿಗೆ 4 ಕೈಗಳಿವೆ. ಶಂಖ, ಚಕ್ರ ಮೇಲಿನ ಕೈಗಳಲ್ಲಿ, ಮತ್ತೆರಡು ಕೈಗಳಲ್ಲಿ ವರದ ಹಸ್ತ ಮತ್ತು ಕಾತ್ಸವಲಂಬಿತ ನಿಲುವು. ವೆಂಕಟನಾಥಾಯ, ಶ್ರೀನಿವಾಸ, ಬಾಲಾಜಿ, ಏಳು ಮಲೈ ಆಂಡವರ್ ಎಂಬ ಹೆಸರಿನ ಸ್ವಾಮಿಯನ್ನು ಅರ್ಚಿಸುವುದರಿಂದ ಮುಕ್ತಿಯನ್ನು ಪಡೆಯಬಹುದೆಂದು ಶಾಸ್ತ್ರಪುರಾಣಗಳು ಏಕಕಂಠದಿಂದ ಸಾರುತ್ತವೆ. ಇದೇ ಭೂವೈಕುಂಠ. 8 ಸ್ವಯಂ ವ್ಯಕ್ತ ಕ್ಷೇತ್ರಗಳಲ್ಲಿ ಇದೂ ಒಂದು.

ವೆಂಕಟೇಶ್ವರರ ಮಹಾತ್ಮೆಯು ಮಹಾಪುರಾಣಗಳಲ್ಲಿ ಬರುವ ಪುರಾಣಕತೆಯನ್ನು ಒಳ ಗೊಂಡಿದೆ. ಪುರಾಣಕಥೆಯ ಪ್ರಕಾರ ಮಹಾ ಪ್ರಳಯದ ನಂತರ ಶ್ರೀ ಮಹಾವಿಷ್ಣುವು ಶ್ವೇತ ವರಾಹ ರೂಪದಲ್ಲಿ ಭೂಮಿಯನ್ನು ಉದ್ಧರಿಸಿ ಸೃಷ್ಟಿಯನ್ನು ನೆಲೆಗೊಳಿಸಿದ. ನಂತರ ಸ್ವಾಮಿ ಪುಷ್ಕರಿಣಿಯ ದಡದಲ್ಲಿ ನೆಲೆಯಾದ.

ಸಂಘಂ ಕಾಲದ ಸಾಹಿತ್ಯದಲ್ಲೂ ವೆಂಕಟೇಶ್ವರ ಸ್ವಾಮಿಯ ಉಲ್ಲೇಖಗಳಿವೆ. ದಕ್ಷಿಣ ಭಾರತದ ಎಲ್ಲಾ ಪ್ರಮುಖ ರಾಜರುಗಳೂ (ಕಂಚಿಯ ಪಲ್ಲವರು, ಚೋಳ, ಪಾಂಡ್ಯ, ವಿಜಯನಗರದ ಅರಸರೂ) ಈ ಸ್ವಾಮಿಯ ಭಕ್ತರಾಗಿದ್ದು, ಸ್ಪರ್ಧೆಯಿಂದ ಕಾಣಿಕೆ ಮಾನ್ಯ ಗಳನ್ನು ಅರ್ಪಿಸಿದ್ದಾರೆ. ಕೃಷ್ಣದೇವರಾಯನಂತೂ ಈ ದೇವರಿಗೆ ಎಲ್ಲ ರೀತಿಯ ಒಡವೆಗಳನ್ನು ನೀಡಿದುದೂ ಅಲ್ಲದೆ, ಕಟ್ಟಡದ ಬೆಳವಣಿಗೆಗೂ ಸಹಾಯಮಾಡಿರುವನು. ಮರಾಠರ ಸೇನಾಧಿಪತಿ, ರಘೋಜಿ ಬೌಂಸ್ಲೆ ಈ ಆಲಯವನ್ನು ಸಂದರ್ಶಿಸಿ ಪೂಜೆಗಳಿಗಾಗಿ ಶಾಶ್ವತ ವ್ಯವಸ್ಥೆ ಮಾಡಿರುವನು. ಅವನೂ ನೀಡಿರುವ ಒಡವೆಗಳಲ್ಲಿ ಪಚ್ಚೆಹಾರ ಒಂದು. ಮೈಸೂರಿನ ಹಾಗೂ ಗದ್ವಾಲ್ ರಾಜರುಗಳು ದಾನ ದಕ್ಷಿಣೆಗಳನ್ನು ನೀಡಿದ್ದಾರೆ. ವಾದಿರಾಜರಿಗಂತೂ ಈ ಬೆಟ್ಟವು ಸಾಲಿಗ್ರಾಮ ರೂಪದಿಂದ ಕಂಡಿದ್ದರಿಂದ ವೆಂಕಟಾದ್ರಿಯ ಪವಿತ್ರತೆ ವಿಶಿಷ್ಟವಾದು ದೆಂದು ಸ್ಪಷ್ಟಪಡಿಸಲು ಸ್ವಾಮಿ ನೆಲೆಸಿರುವ ಬೆಟ್ಟಕ್ಕೆ ಪಾದಗಳು ತಗುಲಿ ಮೇಲೇರುವುದು ಕರ್ಮವೆಂದು ಭಾವಿಸಿ ಮೊಣಕಾಲುಗಳನ್ನು ಊರಿ ಬೆಟ್ಟವನ್ನೇರಿದ ಉದಾಹರಣೆ ಮೈ ಜುಂ

ಎನಿಸುವುದು. ಅವರು ಬಂಗಾರದಿಂದ ಕಟ್ಟಿಸಿ ಸಮರ್ಪಿಸಿದ ಸಾಲಿಗ್ರಾಮಸರ ಶ್ರೀನಿವಾಸ ವಿಗ್ರಹದ ಅಲಂಕಾರವಾಗಿ ಇಂದಿಗೂ ಶೋಭಿಸುತ್ತಿದೆ. ಕನಕದಾಸರು ತಮ್ಮ ಅಂತ್ಯಕಾಲದಲ್ಲಿ ಇಲ್ಲಿದ್ದು ಗರ್ಭಗುಡಿಯಲ್ಲಿ ಅದೃಶ್ಯರಾದರೆಂದು ಹೇಳುವ ಅಂಶ ಈ ಕ್ಷೇತ್ರದ ಮಹಿಮೆಯನ್ನು ಇನ್ನೂ ವಿಸ್ತಾರಗೊಳಿಸುತ್ತದೆ. ತ್ಯಾಗರಾಜರೂ ಇಲ್ಲಿಗೆ ಭೇಟಿ ನೀಡಿದ್ದರು. ಈ ಬೆಟ್ಟದ ಮೇಲೆ ನೂರಾರು ಪುಣ್ಯ ತೀರ್ಥಗಳುಂಟು. ಅವುಗಳಲ್ಲಿನ ಸ್ನಾನ ರೋಗಹರ, ಪಾಪಹರ. ಅವುಗಳಲ್ಲಿ ಆಕಾಶಗಂಗಾ, ಪಾಪವಿನಾಶ; ಪಾಂಡುತೀರ್ಥ, ಕುಮಾರ ಧಾರಿಕಾ ಕೆಲವು. ಅದರಲ್ಲಿ ಸ್ವಾಮಿ ಪುಷ್ಕರಿಣಿ ಪ್ರಧಾನ ತೀರ್ಥ. ಈ ತೀರ್ಥಕ್ಕೆ ಸರಸ್ವತಿ ದೇವಿಯೇ ಅಭಿಮಾನದೇವತೆ. ಧನುರ್ಮಾಸದ ಶುಕ್ಲಪಕ್ಷದ ದ್ವಾದಶಿ ಅರುಣೋದಯದಲ್ಲಿ ಇದರಲ್ಲಿ ಗಂಗಾದಿ ಸಕಲ ತೀರ್ಥಗಳ ದೇವತೆಗಳೂ ಸನ್ನಿಹಿತವಾಗುವರು ಎಂದು ಪುರಾಣಗಳು ಸಾರಿವೆಯಾದ ಪ್ರಯುಕ್ತ ಆ ದಿನದ ಸ್ನಾನ ಮಹಾಶ್ರೇಷ್ಠ. ಪದ್ಮತೀರ್ಥ, ಮತ್ತು ಕಪಿಲ ತೀರ್ಥಗಳು ಬೆಟ್ಟದ ಕೆಳಗಿನ ಮುಖ್ಯ ತೀರ್ಥಗಳು. ಸ್ವಾಮಿ ಪುಷ್ಕರಿಣಿಯ ಬದಿಯಲ್ಲಿ ವರಾಹ ಸ್ವಾಮಿಯ ಗುಡಿಯಿದೆ.

**ದಾಸರ ಮಂಟಪ :** ಪುರಂದರದಾಸರು ಇಲ್ಲಿಯ ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನ ಮಾಡಿ ಇಲ್ಲಿನ ಸರೋವರದ ಆಗ್ನೇಯ ದಿಕ್ಕಿನಲ್ಲಿ ಅಹ್ನಿಕಕ್ಕೆ ಕೂಡುತ್ತಿದ್ದರು. ಈಗಿನಂತೆ ಅಲ್ಲಿ ಮಂಟಪಗಳು ಇರಲಿಲ್ಲ. ಮಳೆ, ಬಿಸಿಲುಗಳ ಭಾಧೆ, ಇದ್ದುದರಿಂದ ಇದನ್ನು ನೋಡಿ ಕೃಷ್ಣದೇವರಾಯನು ಒಂದು ಶಿಲಾಮಂಟಪವನ್ನು ಕಟ್ಟಿಸಿಕೊಟ್ಟನು. ಆ ಮಂಟಪಕ್ಕೆ ದಾಸರ ಮಂಟಪವೆಂದು ಹೆಸರಾಯಿತು. ಆ ಮಂಟಪಕ್ಕೆ ಯಾವ ದಾಸರೇ ಬರಲಿ ಪುರಂದರದಾಸರು ಅಹ್ನೀಕ ಮಾಡಿದ ಸ್ಥಳವೆಂದು ತಾವು ಅಲ್ಲಿಯೇ ಪೂಜಾದಿಗಳನ್ನು ನಡೆಸುವ ಸಂಪ್ರದಾಯವಾಯಿತು. ಆ ಮಂಟಪವು ಈಗ ಕಛೇರಿಯಾಗಿದೆ. ಇದನ್ನು ಗುರುತಿಸಿ ಪುನರುದ್ಧಾರ ಮಾಡಿ, ಸ್ಥಳದ ಪಾವಿತ್ರ್ಯತೆಯನ್ನು ಕಾಪಾಡುವುದು ಅಗತ್ಯ ಕರ್ತವ್ಯ.

Phone : 77305 / 08574 (ಉಡುಪಿ ಮಠ), 77397 (ಶ್ರೀ ಸತ್ಯಪ್ರಮೋದ ಮಂದಿರ)

## 323. ಶ್ರೀನಿವಾಸ ಮಂಗಾಪುರ :

ತಿರುಪತಿಯ ದಕ್ಷಿಣಕ್ಕೆ 12 ಕಿ.ಮಿ. ಚಂದ್ರಗಿರಿಯ ಬಳಿ ಕಲ್ಯಾಣ ವೆಂಕಟರಮಣ ಸ್ವಾಮಿಯ ಆಲಯವಿದೆ. ಪರಂಪರೆಯ ಕಥೆಯಂತೆ ಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಹೊರಡುವ ಮೊದಲು ಕುಟುಂಬದೊಡನೆ ಇಲ್ಲಿ ಕೆಲವು ಕಾಲ ಇದ್ದನಂತೆ. ಈ ಸ್ಥಳವು ಶ್ರೀನಿವಾಸ ಮಂಗಾಪುರವೆಂದು ಹೆಸರಾಗಿದೆ. ಇಲ್ಲಿಗೆ ವಾಹನ ಸೌಕರ್ಯ ಚೆನ್ನಾಗಿದೆ.

## 324. ಅಲಮೇಲು ಮಂಗಾಪುರ :

ತಿರುಪತಿಯಿಂದ 5 ಕಿ.ಮಿ. ಇದು ತಿರುಚಾನೂರು ಎಂದೂ ಪ್ರಸಿದ್ಧಿ. ಇದು ಶುಕ್ರಾಚಾರ್ಯರ ಕ್ಷೇತ್ರವೆಂದು ಹೇಳುವರು. ಶ್ರೀ ವೆಂಕಟೇಶ್ವರನ ಪತ್ನಿ ಶ್ರೀ ಪದ್ಮಾವತಿ ಅಮ್ಮನವರ ದೇವಾಲಯವು ಇಲ್ಲಿದೆ. ತಿರುಮಲೆಯ ಶ್ರೀ ವೆಂಕಟೇಶ್ವರನನ್ನು ದರ್ಶನಮಾಡಿದ ಮೇಲೆ ತಿರುಚಾನೂರಿನಲ್ಲಿರುವ ಪದ್ಮಾವತಿ ಅಮ್ಮನವರನ್ನು ದರ್ಶಿಸಿದರೆ ಮಾತ್ರ ಯಾತ್ರೆ ಪೂರ್ಣ

ವಾಗುವುದೆಂದು ನಂಬಿಕೆ ಇದೆ. ಈ ದೇವಾಲಯದ ಸನಿಹದಲ್ಲಿ ಪುಷ್ಕರಿಣಿ ಇದೆ. ಇದನ್ನು ಪದ್ಮಸರೋವರವೆನ್ನುವರು. ಪರಂಪರೆಯ ಕಥೆಯಂತೆ ಇಲ್ಲಿಯ ಸರೋವರದ ಕಮಲದಲ್ಲಿ ದೇವಿಯು ಆವಿರ್ಭವಿಸಿದಳು. ಇಲ್ಲಿ ನೂರು ವರ್ಷಗಳಿಗೂ ಹಳೆಯದಾದ ಮಧ್ವರಾದ್ಧಾಂತ ಉನ್ನಾಹಿನಿ ಸಭೆಯ ಕಟ್ಟಡವಿದೆ. ಇಲ್ಲಿ ವೇದವ್ಯಾಸರ, ಶ್ರೀ ಪ್ರಾಣದೇವರ ಪ್ರತಿಮೆಗಳಿವೆ. ವರ್ಷಕ್ಕೊಮ್ಮೆ ಡಿಸೆಂಬರ್‌ನಲ್ಲಿ ಮೂರು ದಿನಗಳು ಇಲ್ಲಿ ಸಭಾ ನಡೆದು ಪ್ರಸಿದ್ಧ ಮಾಧ್ವ ವಿದ್ವಾಂಸರ ಪ್ರವಚನ ಹಾಗೂ ದೇಶದ ನಾನಾ ಭಾಗಗಳ ವಿದ್ಯಾರ್ಥಿಗಳಿಗೆ ಅವರ ಯೋಗ್ಯತೆಯಮೇಲೆ ಬಹುಮಾನ ವಿತರಣೆ ಮಾಡಲಾಗುವುದು. ಇಲ್ಲಿಗೆ ಬಂದು ಹೋಗಲು ವಾಹನಸೌಕರ್ಯ ಚೆನ್ನಾಗಿದೆ. Phone : 25725.

## 325. ನಾರಾಯಣ ವನಂ :

ತಿರುಪತಿಯ ಆಗ್ನೇಯಕ್ಕೆ ಪುತ್ತೂರು - ಚೆನ್ನೈ ಮಾರ್ಗದಲ್ಲಿ 22 ಕಿ.ಮಿ. ಪುರಾಣಗಳ ಪ್ರಕಾರ ಶ್ರೀ ವೆಂಕಟೇಶ್ವರನು ಇಲ್ಲಿಯೇ ಪದ್ಮಾವತಿಯನ್ನು ವಿವಾಹವಾದನು. ಆ ನೆನಪಿಗಾಗಿ ಪದ್ಮಾವತಿಯ ತಂದೆ ಆಕಾಶರಾಯರು ಈ ಆಲಯವನ್ನು ನಿರ್ಮಿಸಿದರು.

## 326. ನಾಗಲಾ ಪುರಂ :

ತಿರುಪತಿಯ ಆಗ್ನೇಯಕ್ಕೆ ಪುತ್ತೂರು - ಚೆನ್ನೈ ರಸ್ತೆಯಲ್ಲಿ 65 ಕಿ.ಮಿ. ಇಲ್ಲಿನ ನಗರಿಯ ಬಳಿಯಲ್ಲಿ ದೇವಾಲಯವೊಂದಿದೆ. ಇದು ವೇದನಾರಾಯಣ ಸ್ವಾಮಿಯ ಆಲಯ. ಶ್ರೀದೇವಿ ಭೂದೇವಿಯರಿಂದ ಕೂಡಿದ ವಿಷ್ಣುವಿನ ಮತ್ಸ್ಯಾವತಾರದ ಈ ಮೂರ್ತಿ ಇಲ್ಲಿ ಪೂಜೆಗೊಳ್ಳುತ್ತಿರುವನು. ವಿಜಯನಗರದ ಕೃಷ್ಣದೇವರಾಯನು ಈ ಆಲಯವನ್ನು ಪುನರುದ್ಧಾರಮಾಡಿ ಸುತ್ತಲೂ ನಗರವನ್ನು ಕಟ್ಟಿ ತನ್ನ ತಾಯಿಯಾದ ನಾಗಲಾಂಬಿಕೆಯ ಹೆಸರಿಟ್ಟ.

## 327. ಕಾರ್ವೇಟಿ ನಗರ :

ತಿರುಪತಿಯಿಂದ 58 ಕಿ.ಮಿ. ಪುತ್ತೂರಿನ ಬಳಿ ಇರುವ ಪುಣ್ಯ ಕ್ಷೇತ್ರ. ರುಕ್ಮಿಣಿಸತ್ಯಭಾಮೆಯರೊಡನೆ ಇರುವ ವೇಣುಗೋಪಾಲ ಸ್ವಾಮಿ ಇಲ್ಲಿನ ದೇವರು. ಇಲ್ಲಿ ಸೀತಾರಾಮಲಕ್ಷ್ಮಣ ಆಂಜನೇಯರ ಏಕಶಿಲಾವಿಗ್ರಹವನ್ನು ಕಾಣಬಹುದು.

## 328. ಅಪ್ಪಲಾಯಗುಂಟ :

ತಿರುಪತಿಯಿಂದ 15 ಕಿ.ಮಿ. ಇಲ್ಲಿ ಶ್ರೀ ಪ್ರಸನ್ನ ವೆಂಕಟೇಶ್ವರ ದೇವಾಲಯವಿದೆ. ಅಲ್ಲದೆ ಇಲ್ಲಿ ಆಂಜನೇಯನ ಗುಡಿ ಇದೆ. ದೀರ್ಘ ಕಾಲದ ರೋಗರುಜಿನಗಳಿಗೆ ಈ ಹನುಮಂತನ ಪೂಜೆಯಿಂದ ಒಳಿತಾಗುವುದೆಂಬ ನಂಬಿಕೆ ಇದೆ.

## 329. ಕಾಳಹಸ್ತಿ :

ತಿರುಪತಿಯಿಂದ 40 ಕಿ.ಮಿ. ಇದು ಸುವರ್ಣಮುಖಿ ನದಿ ತೀರದಲ್ಲಿದೆ. ಇಲ್ಲಿ ಬೃಹತ್ ಕಾಳಹಸ್ತೀಶ್ವರನ ದೇವಸ್ಥಾನವಿದೆ. ಇದು ಪಂಚಭೂತ ಸ್ಥಳಗಳಲ್ಲಿ ಒಂದು. ಇಲ್ಲಿ ವಾಯು ಲಿಂಗವಿದೆ. ದೇವರ ಬಳಿಯಲ್ಲಿ ಯಾವ ಕಿಟಕಿಗಳು ಮತ್ತು ರಂಧ್ರಗಳಿಲ್ಲದೆಯೂ ದೇವರ ದೀಪ ಅಲುಗಾಡುವುದು. ಪುರಾಣದ ಹೇಳಿಕೆಯಲ್ಲಿ ಅಗಸ್ತ್ಯರು ಇದನ್ನು ಭೂಮಿಗೆ ತಂದರು. ಇಲ್ಲಿಗೆ ಅರ್ಜುನ ಭೇಟಿಕೊಟ್ಟು ದೇವರಿಂದ ಪಾಶುಪತಾಸ್ತ್ರವನ್ನು ಪಡೆದ. ಸ್ಥಳ ಪುರಾಣದಂತೆ ಇಲ್ಲಿ ಹಾವು, ಜೇಡ ಮತ್ತು ಆನೆಗಳು ಭಕ್ತಿಯಿಂದ ದೇವರನ್ನು ಪೂಜೆ ಮಾಡಿದುವಂತೆ. ಅದಕ್ಕಾಗಿ ಶ್ರಿ (ಜೇಡ) ಕಾಳ (ಹಾವು) ಹಸ್ತಿ (ಆನೆ) ಪೂಜೆಮಾಡಿದ ಸ್ಥಳವೆಂದು ಇದನ್ನು ಶ್ರೀಕಾಳಹಸ್ತಿ ಎಂದಿದ್ದಾರೆ. ಪಕ್ಕದಲ್ಲಿರುವ ಬೆಟ್ಟದಲ್ಲಿ ಬೇಡರ ಕಣ್ಣಪ್ಪನ ಗುಡಿ ಇದೆ.

## 330. ವ್ಯಾಸಸಮುದ್ರಂ :

ಚಿತ್ತೂರು ಜಿಲ್ಲೆ, ಮದನಪಲ್ಲಿ ತಾಲ್ಲೂಕು. ಇಲ್ಲಿ ಒಂದು ಕೆರೆಯನ್ನು ಕಟ್ಟಿಸಿ ತೂಬನ್ನು ಇಡುವ ವೇಳೆಯಲ್ಲಿ ಒಂದು ದೊಡ್ಡ ಬಂಡೆ ಎದುರಿಗೆ ಕಾಣಿಸಿತು. ಅದನ್ನು ತೆಗೆಸುವ ಬಗೆ ಹೇಗೆಂದು ವ್ಯಾಸರಾಯರು ಯೋಚಿಸುತ್ತಿದ್ದಾಗ ಕನಕದಾಸರು ತಾನು ಅವರ ಶಿಷ್ಯನೆಂದೂ ತಾನು ತೂಬಿನ ಅಡ್ಡ ಬಂದಿರುವ ಬಂಡೆಯನ್ನು ತೆಗೆಸುತ್ತೇನೆ ಎಂದು ಕೋಣನ ಮಂತ್ರವನ್ನು ಪಠಿಸಿದರು. ಆಗ ಯಮಧರ್ಮರಾಯನ ಕೋಣವೇ ಪ್ರತ್ಯಕ್ಷವಾಗಿ ಬಂದು ಆ ತೂಬಿನ ಅಡ್ಡಕ್ಕಿದ್ದ ಬಂಡೆಯನ್ನು ತನ್ನ ಕೋರೆಯಿಂದ ಚೂರು ಚೂರು ಮಾಡಿತು. ಆಗ ವ್ಯಾಸರಾಯರಿಗೆ ತನ್ನ ಶಿಷ್ಯ ಕನಕನ ಮಹತ್ತು ಅರಿವಾಯಿತಂತೆ. ಈಗಲೂ ಆ ಲಕ್ಷ್ಮೀನಾರಾಯಣ ಕೆರೆಯ ತೂಬಿನ ಮೇಲಿನ ಬಂಡೆಗಳಲ್ಲಿ ಕೋರೆಯ ಗುರುತುಗಳನ್ನು ಕಾಣಬಹುದು.

## 331. ಚಿಪ್ಪಗಿರಿ :

ಇದು ಗುಂತಕಲ್ಲಿನಿಂದ 5 ಕಿ.ಮಿ. ದೂರವಿದೆ. ವಿಜಯ ದಾಸರು ತಮ್ಮ ಎಪ್ಪತ್ತನೇ ವಯಸ್ಸಿನ ವೇಳೆಗೆ ಭಾಸ್ಕರಕ್ಷೇತ್ರವೆನಿಸಿದ ಚಿಪ್ಪಗಿರಿಯಲ್ಲಿರಬೇಕೆಂಬ ಅಭಿಲಾಷೆಯಿಂದ ಇಲ್ಲಿಗೆ ಬಂದು ತಮ್ಮ ಕೊನೆಗಾಲವನ್ನು ಕಳೆದ ಸ್ಥಳ. ಇಲ್ಲಿ ಅನೇಕ ಪ್ರಸಿದ್ಧ ದೇವಾಲಯಗಳಿವೆ. ಭೋಗೇಶ್ವರ, ಚೆನ್ನಕೇಶವ ಹಾಗೂ ವೆಂಕಟೇಶ್ವರ ದೇವಾಲಯಗಳು. ವಿಜಯದಾಸರು ಪ್ರಥಮತಃ ಭೋಗೇಶ್ವರ ದೇವಾಲಯದಲ್ಲಿದ್ದರಂತೆ. ಈ ಊರಿಗೆ ಒಂದು ಕಿ. ಮಿ. ದೂರ ದಲ್ಲಿ ಒಂದು ವಟವೃಕ್ಷವಿತ್ತು. ಅದರ ಸಮೀಪದಲ್ಲಿ ಒಂದು ಸರೋವರವಿತ್ತು. ದಾಸರು ಇದು ಏಕಾಂತಸ್ಥಳವೆಂದು ಇಲ್ಲಿನ ಬಾವಿಯಲ್ಲಿ ಸ್ನಾನ ಆಹ್ನೀಕಗಳನ್ನು ಮಾಡಿಕೊಂಡು ಮರದ ಬುಡದಲ್ಲಿ ಧ್ಯಾನಮಾಡುತ್ತಿದ್ದರು. ಊರಿನ ದೊಡ್ಡ ದೇವಾಲಯಗಳನ್ನು ಬಿಟ್ಟು, ಈ ಮರದ ಕೆಳಗೆ ಕೂತು ಧ್ಯಾನ ಮಾಡಲು ಕಾರಣವೇನೆಂದು ಆ ಸ್ಥಳದ ಮಾಲೀಕನಾದ ಕುರುಬನೊಬ್ಬನು ಪ್ರಶ್ನಿಸಿದಾಗ ಅವನ ಬಾಮಿಯ ಏಳನೆ ಮೆಟ್ಟಿಲಲ್ಲಿ ದೇವರಿದ್ದಾನೆ. ಎಂದರು. ಅದು ನಿಜವಾದರೆ ಆ ದಾಸರಿಗೆ ಆ ಭೂಮಿಯನ್ನು

ಬಿಟ್ಟುಕೊಟ್ಟು, ಸ್ವಾಮಿಗೊಂದು ಗುಡಿ ನಿರ್ಮಿಸುವೆನೆಂದನಂತೆ. ಅದರಂತೆ ಮಾಡಿದಾಗ ಅಲ್ಲಿ ದೊರೆತ ಗೋಪಾಲಕೃಷ್ಣನ ಸನ್ನಿಧಿಯಲ್ಲಿ ತಮ್ಮ ಕೊನೆಗಾಲವನ್ನು ಕಳೆದು ಕಾರ್ತಿಕಶುದ್ಧ ದಶಮಿ ಗುರುವಾರ ವೈಕುಂಠ ವಾಸಿಗಳಾದರು. ಪುರಂದರದಾಸರಿಂದ ವಿಜಯವಿಠಲ ಎಂಬ ಅಂಕಿತ ಪಡೆದು 25000 ಕೃತಿಗಳನ್ನು ಬರೆದು ಪ್ರಸಿದ್ಧರಾಗಿದ್ದರು. ಈ ದಾಸರ ಆರಾಧನೆಯು ಬಹು ವಿಜೃಂಭಣೆಯಿಂದ ಕಾರ್ತಿಕಶುದ್ಧ ನವಮಿಯಿಂದ ದ್ವಾದಶಿಯವರೆಗೆ ಇಲ್ಲಿ ಪ್ರತಿವರ್ಷ ನೆರವೇರುವುದು.

## 332. ಮಂತ್ರಾಲಯ :

**ಮಂತ್ರಸಿದ್ಧಿಕ್ಷೇತ್ರ**

ಕರ್ನೂಲು ಜಿಲ್ಲೆ, ಆದವಾನಿ ತಾ. ತುಂಗಭದ್ರಾ ನದಿ ತೀರ ಬೆಂಗಳೂರಿನಿಂದ 385 ಕಿ.ಮಿ. ಬಸ್ಸು, ರೈಲುಗಳ ಅನುಕೂಲವಿದೆ. ದೇವರೆಂದರೆ ತಿರುಪತಿಯ ತಿಮ್ಮಪ್ಪನೇ, ಗುರುಗಳೆಂದರೆ ಮಂಚಾಲೆಯ ರಾಘಪ್ಪನೇ ಎಂಬ ನಾಣ್ನುಡಿ ನಮ್ಮ ಮಂತ್ರಾಲಯದ ಚರಿತ್ರಾ ಪುರುಷರನ್ನು ಇಂದಿಗೂ ಕೊಂಡಾಡುತ್ತಿದೆ. ಇವರ ಪೂರ್ವಿಕರು ಕುಂಭಕೋಣದಲ್ಲಿ 13 ನೆಯ ಶತಮಾನದಿಂದಲೂ ವಾಸವಾಗಿದ್ದರು. ಇವರು ಮಾಧ್ವ ವೈಷ್ಣವರು. ಈ ವಂಶದಲ್ಲಿ ಕೃಷ್ಣಭಟ್ಟ ರೆಂಬುವರು ವೀಣಾವಾದನದಲ್ಲಿ ನಿಪುಣರು. ಶ್ರೀ ಕೃಷ್ಣದೇವರಾಯ ಭೂಪನೇ ಇವರಿಂದ ವೀಣಾವಿದ್ಯೆ ಕಲಿತದ್ದು. ಇವರ ಮಗ ಕನಕಾಚಲ ಭಟ್ಟ, ವೇದವಿದ್ಯೆ, ಗಾಯನ ಇವೆರಡರಲ್ಲೂ ಚತುರರು. ಇವರ ಮಗ ತಿಮ್ಮಣ್ಣ ಭಟ್ಟ ರಾಮರಾಯನ ಕಾಲದಲ್ಲಿ ಪರಿಸ್ಥಿತಿ ಕೆಟ್ಟಿದ್ದರಿಂದ ಕಾಂಚಿಪುರದ ಬಳಿಯ ಭುವನಗಿರಿಯಲ್ಲಿ ನೆಲೆಸಿದರು. ಪತ್ನಿ ಗೋಪಮ್ಮ ಪತಿಭಕ್ತಿಪರಾಯಣೆ, ದೈವಭಕ್ತೆ. ಈ ದಂಪತಿಗಳಿಗೆ ವೆಂಕಮ್ಮನೆಂಬ ಮಗಳೂ, ಗುರುರಾಜನೆಂಬ ಮಗನೂ ಜನಿಸಿದರು. ಇನ್ನೊಬ್ಬ ಮಗನನ್ನು ಪಡೆಯುವ ಹಂಬಲದಿಂದ ತಿರುಪತಿಗೆ ಪ್ರಯಾಣ ಬೆಳೆಸಿದರು. ಸೇವೆ ಮಾಡಿದಾಗ ಕನಸಾಯಿತು. ಸ್ವಪ್ನದಲ್ಲಿ ಶ್ರೀನಿವಾಸನ ದರ್ಶನವಾಯಿತು. ಶುಭಸಂದೇಶ ಪಡೆದು ಹಿಂತಿರುಗಿ ಬಂದಾಗ ಇನ್ನೊಬ್ಬ ಮಗ ಹುಟ್ಟಿದನು. ಅವನಿಗೆ ವೆಂಕಟಭಟ್ಟನೆಂಬ ನಾಮಕರಣವಾಯಿತು. ಕೆಲವು ಕಾಲದ ನಂತರ ಕುಂಭಕೋಣದ ಶ್ರೀ ವಿಜಯೇಂದ್ರಸ್ವಾಮಿಗಳ ಆರಾಧನೆಗೆ ಬರಬೇಕೆಂದು ಸುಧೀಂದ್ರ ಸ್ವಾಮಿಗಳಿಂದ ಆಜ್ಞಾಪತ್ರ ಬಂತು. ತಿಮ್ಮಣ್ಣಭಟ್ಟರು ಮಗನ ಜೊತೆಯಲ್ಲಿ ಪ್ರಯಾಣ ಬೆಳೆಸಿ ಸ್ವಾಮಿಗಳ ದರ್ಶನ ಪಡೆದರು. ಚಿಕ್ಕ ಮಗನ ಮೇಲೆ ಸ್ವಾಮಿಗಳ ಕೃಪಾಕಟಾಕ್ಷವಾಯಿತು. ಹಿಂದಿರುಗಿ ಭುವನಗಿರಿಗೆ ಬಂದರು. ತಿಮ್ಮಣ್ಣಭಟ್ಟನು ಮರಣ ಹೊಂದಿದ ಮೇಲೆ ವೆಂಕಟಭಟ್ಟನನ್ನು ಭಾವನ ಮನೆಯಲ್ಲಿ ಕೆಲ ಕಾಲ ಬಿಟ್ಟರು. ನಂತರ ವೆಂಕಟಭಟ್ಟರ ವಿದ್ಯಾಭ್ಯಾಸ ಮಧುರೈಯಲ್ಲಿ ಲಕ್ಷ್ಮಿನರಸಿಂಹಾಚಾರ್ಯರಿಂದ ನಡೆಯಿತು. ವಿದ್ಯಾವ್ಯಾಸಂಗ ಮುಂದುವರಿಸುತ್ತಾ ವೇದ, ತರ್ಕ, ವೇದಾಂತ, ವ್ಯಾಕರಣ ವೀಣಾ ವಿದ್ಯೆಯಲ್ಲಿ ಭಟ್ಟನು ಅದ್ವಿತೀಯ ಪಂಡಿತನಾದನು. ಮತ್ತೆ ಕುಂಭಕೋಣಕ್ಕೆ ಪ್ರಯಾಣಿಸಿ ಸುಧೀಂದ್ರರಲ್ಲಿ ವ್ಯಾಸಂಗ ಮಾಡಲು ಪ್ರಾರಂಭಿಸಿದನು. ಅಲ್ಲಿ ಸುಧಾ ಗ್ರಂಥದ ಪ್ರಮೇಯಾಂಶಗಳನ್ನು ಪುಷ್ಟೀಕರಿಸಿ "ಪರಿಮಳ" ಎಂಬ ಗ್ರಂಥದ ಸಮಂಜಸಾರ್ಥ ವಿವರಣೆ ಮಾಡಿದಾಗ, ಇವರಿಗೆ ಪರಿಮಳಾಚಾರ್ಯರೆಂಬ ಬಿರುದು ಬಂತು.

ಶೈವಸನ್ಯಾಸಿಗಳೊಂದಿಗೆ (ಯಜ್ಞ ನಾರಾಯಣ ದೀಕ್ಷಿತ) "ಕಾಕತಾಳೀಯ" ಹಾಗೂ 'ತತ್ವಮಸಿ' ವಿಷಯದ ಮೇಲೆ ವಾಕ್ಯಾರ್ಥ ಮಾಡಿ ಗೆದ್ದು, ಮಹಾಭಾಷ್ಯಾಕಾರ ಪರಿಮಳ ವೆಂಕಟ ಭಟ್ಟನೆಂಬ ಹೆಸರು ಪಡೆದರು.

ವಿಜಯನಗರ ನಾಶವಾದಮೇಲೆ (1565) ತಂಜಾವೂರು ಸಂಸ್ಥಾನ ತಲೆ ಎತ್ತಿತು. ಅವರ ಆಸ್ಥಾನದಲ್ಲಿ ಪರಿಮಳಾ ಚಾರ್ಯರು ಗೋವಿಂದ ದೀಕ್ಷಿತನೆಂಬವನೊಡನೆ ತತ್ವಮಸಿ ಎಂಬ ವಿಷಯದ ಮೇಲೆ ವಾದದಲ್ಲಿ ಗೆದ್ದರು.

ಭುವನಗಿರಿಗೆ ವಾಪಸ್ಸು ಬಂದು, ಸರಸ್ವತಿ ಎಂಬ ಕನ್ಯೆಯೊಡನೆ ವಿವಾಹಮಾಡಿಕೊಂಡು, ಲಕ್ಷ್ಮಿನಾರಾಯಣ ಎಂಬ ಒಬ್ಬ ಮಗನನ್ನು ಪಡೆದರು. ನಂತರ ಕುಂಭಕೋಣಕ್ಕೆ ಪ್ರಯಾಣಿಸಿ ಅಲ್ಲಿಯೇ ನಿಂತರು. ಯಾದವೇಂದ್ರರೆಂಬ ಯತಿಗಳಿಗೆ ಶ್ರೀ ಸುಧೀಂದ್ರರು ಸನ್ಯಾಸದೀಕ್ಷೆ ಕೊಟ್ಟು, ಅವರನ್ನು ತೀರ್ಥಯಾತ್ರೆಗೆ ಕಳುಹಿಸಿಕೊಟ್ಟು ಪರಿಮಳಾಚಾರ್ಯರಿಗೆ ಆಶ್ರಮ ಸ್ವೀಕಾರ ಮಾಡಲು ಆದೇಶವಿತ್ತರು. ಸನ್ಯಾಸಿ ದೀಕ್ಷೆಯ ಬಗ್ಗೆ ಮೊದಲು ಗೊಂದಲ ವಾದರೂ ಇವರು ಫಾಲ್ಗುಣ ಶುದ್ಧ ತೃತೀಯ ರಾಘವೇಂದ್ರ ತೀರ್ಥರೆಂಬ ಆಶ್ರಮನಾಮದಿಂದ ಗುರುಪೀಠ ವನ್ನಲಂಕರಿಸಿದರು. ಶ್ರೀಮಠದ ಆಧಿಪತ್ಯ ವಹಿಸಿಕೊಂಡ ಮೇಲೆ ಸ್ವಾಮಿಗಳು ಸಂಚಾರ ಹೊರಟು ಅನೇಕ ದಕ್ಷಿಣ ಇಂಡಿಯಾದ ಕ್ಷೇತ್ರ ದರ್ಶನ ಮಾಡಿ ಕಡೆಗೆ ದಿವಾನ ವೆಂಕಣ್ಣನ ಪ್ರಭಾವದಿಂದ ಆದೋನಿ ಸಮೀಪದ ಮಂಚಾಲೆ ಗ್ರಾಮವು ಜಹಗೀರಾಗಿ ಕೊಡಲ್ಪಟ್ಟಿತು. ಅಲ್ಲಿ ಶ್ರೀರಾಘವೇಂದ್ರತೀರ್ಥರು ಶ್ರಾವಣ ವದ್ಯ ದ್ವಿತೀಯ ಗುರುವಾರ (1671) ಬೃಂದಾವನ ಪ್ರವೇಶಮಾಡಿದರು. ಈ ಸ್ಥಳವು ಪುರಾಣ ಪ್ರಸಿದ್ಧವಾಗಿದ್ದು, ಇಲ್ಲಿ ಪ್ರಹ್ಲಾದರಾಜರು ಯಜ್ಞ ಮಾಡಿದ್ದರು. ಇದು ಯಜ್ಞಮಂಟಪದ ಪವಿತ್ರ ಸ್ಥಳ. ಈ ಬೃಂದಾವನದ ಕಲ್ಲುಗಳನ್ನು 15 ಕಿ.ಮಿ. ದೂರದಲ್ಲಿರುವ ಮಾದಾವರದಿಂದ ತಂದಿದ್ದು. ಬೃಂದಾವನದಲ್ಲಿ ಇರಿಸಿರುವ ಸಾಲಿ ಗ್ರಾಮಗಳ ಸಂಖ್ಯೆಯೇ 700. ಭಕ್ತರಿಗೆಕೇಳಿದ್ದನ್ನು ಕೊಡುವ ಈ ಬೃಂದಾವನ ಸ್ಥಳ ಅತಿ ಪವಿತ್ರ. ಬೃಂದಾವನ ಪ್ರದಕ್ಷಿಣೆ, ನಮನ, ಸ್ತುತಿ, ಮೃತ್ತಿಕಾ ತೀರ್ಥ, ಪಾದೋದಕ ತೀರ್ಥದ ಸೇವನೆ ಇವುಗಳಿಂದ ಭೂತಪ್ರೇತ ಪಿಶಾಚಾದಿ ಪೀಡೆಗಳ ಪರಿಹಾರವಾಗುತ್ತಿದೆ. ಭವಿಷ್ಯದ ಸೂಚನೆಯೂ ಅನೇಕರಿಗೆ ದೊರೆತಿದೆ. ರಾಯರ ಬೃಂದಾವನದ ಎದುರಿಗೆ ಮುಖ್ಯ ಪ್ರಾಣ ದೇವರು, ಹಾಗೂ ರುದ್ರದೇವರು ಇದ್ದಾರೆ. ಇತರ ಮಂತ್ರಾಲಯದ ಯತಿಗಳ ಬೃಂದಾವನ ಗಳೂ ಇಲ್ಲಿವೆ. ರಾಯರ ಬೃಂದಾವನದ ಎಡಗಡೆ ವಾದೀಂದ್ರರೂ ಮತ್ತೊಂದು ಆವರಣದೊಳಗೆ ಸುಧನೇಂದ್ರ, ಸುವೃತೀಂದ್ರ, ಸುಯಮೀಂದ್ರ, ಸುಜಯೀಂದ್ರರ ಬೃಂದಾವನ ಗಳಿವೆ. ರಾಯರ ಮಠದ ಹೊರಾವರಣದ ಗುಡಿಯಲ್ಲಿ ಹಿರಣ್ಯಕಶಿಪುವಿನ ಕುಲದೇವತೆ ಮಂಚಾಲಮ್ಮ ಇದ್ದಾಳೆ. ಮಂಚಾಲಮ್ಮನ ದರ್ಶನದ ನಂತರ ರಾಯರ ಬೃಂದಾವನ ದರ್ಶನ ಮಾಡುವ ಪದ್ಧತಿ ಇದೆ. ಮಠದಲ್ಲಿ ಪೂಜೆಗೊಳ್ಳುವ ಕೆಲವು ವಿಗ್ರಹಗಳೆಂದರೆ, ಬ್ರಹ್ಮ ಕರಾರ್ಚಿತ ಮೂಲರಾಮ, ಸರ್ವಜ್ಞ ಕರಾರ್ಚಿತ ದಶಾವತಾರಪೀಠ ದಿಗ್ವಿಜಯ ರಾಮ ವೇದವ್ಯಾಸರಿಂದ ಆನಂದ ತೀರ್ಥ ಮುನಿಗಳಿಗೆ ಅನುಗ್ರಹಿತವಾದ ವ್ಯಾಸಮುಷ್ಟಿ, ನೀಲಾದೇವಿ ಯವರಿಂದ ಆರಾಧಿತವಾದ ವೈಕುಂಠ ವಾಸುದೇವ ಮೂರ್ತಿ, ಬಲಮುರಿ ಶಂಖ, ಮತ್ತು ಜಯತೀರ್ಥ ಕರಾರ್ಚಿತ ಜಯರಾಮ.

## 333. ಅಣುಮಂತ್ರಾಲಯ :

ಮಂತ್ರಾಲಯಂ ರೋಡ್, ತುಂಗಭದ್ರಾ ರೈಲ್ವೇ ನಿಲ್ದಾಣದ ಬಳಿ ಇದೆ. ಇದೇ ಅಣು ಮಂತ್ರಾಲಯ. ಮಂತ್ರಾಲಯಕ್ಕೆ ಬಂದವರು ಇಲ್ಲಿಯೂ ಸೇವೆಸಲ್ಲಿಸುವ ಪದ್ಧತಿ ಇದೆ. ರೈಲಿನಲ್ಲಿ ಬಂದಿಳಿದ ಯಾತ್ರಾರ್ಥಿಗಳಿಗೆ ಉಳಿದುಕೊಳ್ಳಲು ಉತ್ತಮ ತಾಣ.

Phone 59808 / 08512

## 334. ಮಾದಾವರ :

ಮಂತ್ರಾಲಯದಿಂದ 15 ಕಿ.ಮಿ. ದೂರದಲ್ಲಿರುವ ಚಿಕ್ಕ ಹಳ್ಳಿ. ಇಲ್ಲಿಂದಲೇ ರಾಯರ ಬೃಂದಾವನದ ಶಿಲೆ ತಂದಿದ್ದು. ಆ ಸ್ಥಳದಲ್ಲಿ ಈಗ ಮಾರುತಿ ಗುಡಿ ಇದೆ.

## 335. ನಿವೃತ್ತಿ ಸಂಗಮ – ಕರ್ನೂಲ್ :

ಮಂತ್ರಾಲಯದಿಂದ, ಗುತ್ತಿಯಿಂದ ಬಸ್ಸುಗಳು. ಗುಂತಕಲ್ಲಿನಿಂದ ದೋನ್ ಮೂಲಕ ರೈಲು ಮಾರ್ಗ. ಕರ್ನೂಲಿನಿಂದ 30 ಕಿ.ಮಿ. ಈ ಕ್ಷೇತ್ರವು ಪ್ರಧಾನವಾಗಿ ಕೃಷ್ಣಾ, ತುಂಗಭದ್ರಾ ನದಿಗಳ ಸಂಗಮಸ್ಥಳ. ಶ್ರೀಶೈಲ ಅಣೆಕಟ್ಟಿನ ನಿರ್ಮಾಣದಿಂದಾಗಿ ಇದು ನದಿಯಲ್ಲಿ ಮುಳುಗಿದೆ. ಬೇಸಿಗೆಯಲ್ಲಿ ಮಾತ್ರ ಇದರ ಸ್ವಲ್ಪ ಭಾಗ ಗೋಚರಿಸುತ್ತದೆ. ಇದು ಉತ್ತರಾದಿ ಮಠದ ಯತಿಗಳಾದ ಸತ್ಯನಿಧಿ ತೀರ್ಥರ ಬೃಂದಾವನ ಸ್ಥಳವಾಗಿದ್ದು, ನಿವೃತ್ತಿಸಂಗಮ ಮುಳುಗುವ ಮುನ್ನ ಕರ್ನೂಲಿನ ಉತ್ತರಾದಿ ಮಠದ ಆವರಣದಲ್ಲಿ ಅಲ್ಲಿಂದ ಬೃಂದಾವನದ ಸಮಗ್ರ ಅವಶೇಷಗಳನ್ನು ತಂದು ಬೃಂದಾವನ ನಿರ್ಮಿಸಿದ್ದಾರೆ.

## 336. ಶ್ರೀಶೈಲ :

ಕರ್ನೂಲ್ ನಂದ್ಯಾಲಗಳಿಂದ ನೇರಬಸ್ಸು. ಇದು ಅತಿ ಪವಿತ್ರವಾದ ಮಲ್ಲಿಕಾರ್ಜುನ ಕ್ಷೇತ್ರ. ಶ್ರೀಶೈಲವು ಶೇಷ ಪರ್ವತದ ಪುಚ್ಛವಾದರೆ ವೆಂಕಟಗಿರಿಯು ಅದರ ಹೆಡೆ ಎಂದು. ಪುರಾಣ ವಿವರಿಸುತ್ತದೆ. ಕಾರಣಾಂತರಗಳಿಂದ ಶಣ್ಮುಖನು ಕೈಲಾಸವನ್ನು ತೊರೆದು ಶ್ರೀಶೈಲಕ್ಕೆ ಬಂದನಂತೆ. ಆಗ ಶಿವ ಪಾರ್ವತಿಯರೂ ಸಹ ಇಲ್ಲಿಗೆ ಬಂದು ಇಲ್ಲಿ ನೆಲೆಸಿದ್ದರಂತೆ. ಇಲ್ಲಿಯ ಲಿಂಗವು ಜ್ಯೋತಿರ್ಲಿಂಗಗಳಲ್ಲಿ ಒಂದು.

## 337. ಅಹೋಬಲಂ :

ಕರ್ನೂಲಿನಿಂದ ಅಲ್ಲಗುಡ್ಡ 135 ಕಿ.ಮಿ. ಅಲ್ಲಗುಡ್ಡದಿಂದ ಅಹೋಬಲಂ 24 ಕಿ.ಮಿ. ಗುಂತಕಲ್ಲಿನಿಂದ ಢೆಂಡ್ ಮೂಲಕ ರೈಲು. ಬಂಗನಪಲ್ಲಿಯಿಂದ ಅಲ್ಲಗುಡ್ಡ - ಅಹೋಬಲಂ, ಢೋಂಡ್, ಕಡಪ, ನಂದ್ಯಾಲ್ ನಿಂದಲೂ ಬಸ್ಸುಗಳ ಸೌಕರ್ಯ.

ಈ ಪ್ರದೇಶಕ್ಕೆ ಗಂಧಾದ್ರಿ ಎಂದು ಹೆಸರು. ಸಿಂಗವೇಲು ಕುನ್ರಂ ಎಂದೂ ಕರೆಸಿಕೊಂಡಿದೆ. ಅಹೋಬಲಂ ನವ ನರಸಿಂಹಕ್ಷೇತ್ರ. ಭವನಾಶಿನಿ ನದಿ ತೀರದಲ್ಲಿದೆ. ಇಡಿ ಭಾರತದಲ್ಲೇ

ಇಂತಹ 9 ನರಸಿಂಹರು ಇರುವ ಮತ್ತೊಂದು ಕ್ಷೇತ್ರವಿಲ್ಲ. ಇವುಗಳೆಲ್ಲಾ ನಲ್ಲಮಲೈ ಬೆಟ್ಟದ ಪ್ರದೇಶದಲ್ಲಿ ಅಲ್ಲಲ್ಲಿ ಹರಡಿಕೊಂಡಿದೆ. ಇದನ್ನು ತಲಪುವುದು, ವೀಕ್ಷಿಸುವುದು ಕಷ್ಟ. ಬೆಟ್ಟ, ಕಾಡು ಪ್ರದೇಶವಾದುದರಿಂದ ದೇಹಶಕ್ತಿ ಚೆನ್ನಾಗಿರುವವರಿಗೆ ಮಾತ್ರ ಸಾಧ್ಯ. ಆ 9 ನರಸಿಂಹರೇ ಜ್ವಾಲಾ, ಆಹೋಬಲ, ಮಹಾಲೋಲ, ಕ್ರೋಧ, ಕರಂಜ, ಭಾರ್ಗವ, ಯೋಗಾನಂದ, ಕ್ಷಾತ್ರವತ, ಪವನ ಎಂಬುವು. ಇವುಗಳಲ್ಲಿ ಮೇಲಣ ಬೆಟ್ಟದಲ್ಲಿರುವ ಉಗ್ರನರಸಿಂಹ ಮತ್ತು ಕೆಳಗಣ ಬೆಟ್ಟದಲ್ಲಿರುವ ಲಕ್ಷ್ಮೀನರಸಿಂಹ ಪ್ರಖ್ಯಾತ. ಇವುಗಳು ಒಂದಕ್ಕೊಂದು 8 ಕಿ.ಮಿ.ಗಳ ಅಂತರದಲ್ಲಿದ್ದು ಭಕ್ತಾದಿಗಳಿಗೆ ಹೋಗಲು ಅನನುಕೂಲ ವಾಗಿದೆ. ಹೋಗುವ ಮಾರ್ಗ ಕಲ್ಲುಬಂಡೆಗಳಿಂದ ಆವರಿಸಿದ್ದು ಅವುಗಳನ್ನು ತಲಪಿ ದರ್ಶನ ಮಾಡಲು ಸ್ವಲ್ಪ ಪ್ರಯಾಸಕರ.

**ಮೇಲಣ ಅಹೋಬಲಂ :** ಇದನ್ನು ಎಗುವ ಅಥವಾ ಪೆದ್ದ ಅಹೋಬಲಂ ಎನ್ನುವರು. ಇದು ಮೇಲಣ ಬೆಟ್ಟಗಳಲ್ಲಿದೆ. ಇಲ್ಲಿಗೆ ಹೋಗಲು ಬಹು ಕಠಿಣದಾರಿಯನ್ನು ತುಳಿಯಬೇಕು. ಇಲ್ಲಿರುವ ಉಗ್ರ ನರಸಿಂಹ ಸ್ವಯಂಭೂಮೂರ್ತಿ. ಮೂರ್ತಿಯು ಒಂದು ಸ್ವಾಭಾವಿಕ ಗುಹೆಯಲ್ಲಿ ಒಂದು ಮಹಾಶಿಲೆಯ ಬಿರುಕಿನ ಮೇಲೆ ನಿಂತಿದ್ದಾನೆ. ಸಾಲಿಗ್ರಾಮ ಶಿಲೆಯಲ್ಲಿ ನಿರ್ಮಿತವಾಗಿರುವ ಮೂರ್ತಿಗೆ ಹತ್ತು ಕೈಗಳಿವೆ. ಈ ದೇವರೇ ಹಿರಣ್ಯ ಕಶಿಪುವಿನ ಹೊಟ್ಟೆ ಯನ್ನು ಸೀಳಿ ಅವನ ಗುಣವಂತ ಮಗನಾದ ಪ್ರಹ್ಲಾದನನ್ನು ಹರಸಿದ್ದು. ಇಲ್ಲಿಗೆ ಬಿಲದ ಅಥವಾ ಗುಹೆಯ ಬಾಯಿಯಿಂದ ಪ್ರವೇಶ. ದೇವರ ಪಕ್ಕದಲ್ಲಿ ಅಂಜಲೀ ಬದ್ಧ ನಾಗಿರುವ ಪ್ರಹ್ಲಾದ ಮೂರ್ತಿ ಇದ್ದಾನೆ. ಇಲ್ಲಿಂದ ಪೂರ್ವಕ್ಕೆ 6 ಕಿ. ಮಿ. ದೂರದಲ್ಲಿ ಕಡಿದಾದ ಶಿಖರದ ಮೇಲೆ ಉಕ್ಕಿನ ಸ್ಥಂಭವಿದೆ. ಈ ಸ್ಥಂಭದಿಂದಲೇ ನರಸಿಂಹ ಉದ್ಭವಿಸಿದನೆಂದು ಪ್ರತೀತಿ.

**ಕೆಳಗಣ ಅಹೋಬಲಂ :** ಇದನ್ನು ದಿಗುವ ಅಥವಾ ಚಿನ್ನ ಅಹೋಬಲಂ ಎನ್ನವರು. ಇಲ್ಲಿ ಸೌಮ್ಯಮೂರ್ತಿ ಲಕ್ಷ್ಮೀನರಸಿಂಹ ಅಥವಾ ಪ್ರಹ್ಲಾದವರದ ನರಸಿಂಹನ ವಿಗ್ರಹವಿದೆ. ಈ ದೇವಾಲಯವನ್ನು ವಿಜಯನಗರದ ದೊರೆ ಕೃಷ್ಣದೇವರಾಯನು (1515)ರಲ್ಲಿ ನಿರ್ಮಿಸಿ ಒಡವೆ, ಕಂಠಿಹಾರ, ಮತ್ತು ಅನೇಕಾನೇಕ ವಜ್ರಗಳನ್ನು ದೇವರಿಗೆ ಅರ್ಪಿಸಿದ್ದಾನೆ. ಈ ದೇವಾಲಯ ಅಂದಕ್ಕೆ ಹೆಸರಾಗಿದೆ. ರಂಗಮಂಟಪ ಕಲಾತ್ಮಕವಾಗಿದೆ. ದೇವರು ಶ್ರೀದೇವಿ ಭೂದೇವಿಯರ ಸಹಿತ ಸುಖಾಸೀನ ಭಂಗಿಯಲ್ಲಿದ್ದಾರೆ. ದೇವರಿಗೆ 4 ಕೈಗಳಿದ್ದು, ಶಂಖ, ಚಕ್ರಗಳನ್ನು ಹಿಡಿದು ಅಭಯಮುದ್ರೆಯನ್ನು ತೋರಿದ್ದಾರೆ. ಮತ್ತೊಂದು ಕೈ ಲಕ್ಷ್ಮಿಯನ್ನು ಸುತ್ತಿ ಬಳಸಿದೆ. ದೇವರ ವಿಗ್ರಹದ ಮೇಲೆ ಸಿಂಹತೋರಣವಿದೆ. ಈ ದೇವರ ಪತ್ನಿಯರಾದ ಅಮೃತವಲ್ಲಿ, ಆಂಡಾಳ್‌ಗೆ ಪ್ರತ್ಯೇಕ ಗುಡಿಗಳಿವೆ. ಈ ದೇವರು ಮೂಲದಲ್ಲಿ ಚೆಂಚು ಎಂಬ ಹೆಸರಿನ ಇಲ್ಲಿನ ಮೂಲನಿವಾಸಿಗಳಿಂದ ಪೂಜಿಸಲ್ಪಡುತ್ತಿತ್ತು. ಈ ದೇವರ ಪ್ರಿಯ ಪತ್ನಿಗೆ ಚೆಂಚು ಲಕ್ಷ್ಮಿ ಎಂಬ ಹೆಸರಿತ್ತು.

## 338. ಲೇಪಾಕ್ಷಿ :

ಅನಂತಪುರ ಜಿಲ್ಲೆ, ಬೆಂಗಳೂರು 117 ಕಿ.ಮಿ. ಹಿಂದೂಪುರದಿಂದ 14 ಕಿ.ಮಿ. N. H. 47 ರಾಷ್ಟ್ರೀಯ ಹೆದ್ದಾರಿಯಲ್ಲಿದೆ. ನೂರೆಂಟು ಶೈವ ಕ್ಷೇತ್ರಗಳಲ್ಲಿ ಇದೂ ಒಂದು ಎಂದು

ಸ್ಕಂದ ಪುರಾಣ ಹೇಳುತ್ತದೆ. ಲೇಪಾಕ್ಷಿ ಎಂದರೆ ಕುರುಡಾದ ಕಣ್ಣು ಎಂದು ಅರ್ಥ. ವಿಜಯ ನಗರದ ದೊರೆಯಾದ ಅಚ್ಯುತರಾಯನ ಬಳಿ ಕೋಶಾಧಿಕಾರಿಯಾಗಿದ್ದ ವಿರೂಪಣ್ಣ ಮತ್ತು ಅವನ ಅಣ್ಣ ವೀರಣ್ಣ ಈ ದೇವಾಲಯವನ್ನು ಕಟ್ಟಲು ಪ್ರಾರಂಭಿಸಿದರಂತೆ. ಆದರೆ ಅರಮನೆಯ ದಾಸಿಯರು ಅಸೂಯೆಗೊಂಡು ದೊರೆಗೆ ಹಣದ ದುರ್ವ್ಯಯವಾಗುತ್ತಿದೆ ಎಂದು ದೂರು ಮುಟ್ಟಿಸಿದರು. ಆಗ ರಾಜಕೋಪಗೊಂಡಾಗ ವಿರೂಪಣ್ಣನು ಅವಮಾನ ಸಹಿಸಲಾರದೆ ತನ್ನ ಕಣ್ಣನ್ನು ಕಿತ್ತು ಗುಡಿಯ ಗೋಡೆಯ ಮೇಲೆ ಎಸೆದನಂತೆ. ಕಣ್ಣು ಗುಡಿಗೆ ಅಂಟಿಕೊಂಡಿತಂತೆ. ಈಗಲೂ ಗುಡಿಯ ಮೇಲೆ ಕಣ್ಣಿನಾಕಾರದ ಎರಡು ತೂತುಗಳನ್ನು ನೋಡಬಹುದು. ಆದುದರಿಂದ ಗುಡಿಯ ಕೆಲಸ ಅರ್ಧಕ್ಕೇ ನಿಂತಿದೆ. ಪುರಾಣದ ಪ್ರಕಾರ ಲೇಪಾಕ್ಷಿ ಎಂಬ ಹೆಸರು ಹೇಗೆ ಬಂತು ಎನ್ನುವುದಾದರೆ, ರಾವಣನು ಸೀತೆಯನ್ನು ಅಪಹರಿಸಿಕೊಂಡು ಪುಷ್ಪಕ ವಿಮಾನದಲ್ಲಿ ಹೋಗುತ್ತಿದ್ದನಂತೆ. ದಶರಥನ ಸ್ನೇಹಿತನಾದ ಜಟಾಯು ರಾವಣನೊಂದಿಗೆ ಹೋರಾಡಿ ಸಾವನ್ನಪ್ಪಿದಾಗ ಅಲ್ಲಿಗೆ ಬಂದ ಶ್ರೀರಾಮನು ಅದನ್ನು 'ಲೇಪಕ್ಷಿ' ಎಂದು ಉಲ್ಲೇಖಿಸಿದರಂತೆ. ಅದೇ ಲೇಪಾಕ್ಷಿಯಾಯಿತು. ಇಲ್ಲಿ ವಿಜಯ ನಗರ ಶೈಲಿಯ ಪಾಪನಾಥೇಶ್ವರ ಮತ್ತು ಅಖಂಡ ಶಿಲೆಯಲ್ಲಿ ರಚಿಸಿರುವ ಬೃಹತ್‌ನಂದಿ ಇದೆ. ಇದು 27 ಅಡಿ ಉದ್ದವಿದ್ದು 15 ಅಡಿ ಎತ್ತರವಾಗಿದೆ. ಇದು ದಕ್ಷಿಣ ಭಾರತದಲ್ಲೇ ದೊಡ್ಡದು.

## 339. ತಾಡ ಪತ್ರಿ :

ಅನಂತಪುರದಿಂದ 54 ಕಿ.ಮಿ. ಬೆಂಗಳೂರಿನಿಂದ 208 ಕಿ.ಮಿ. ಮದ್ರಾಸ್ ಬಾಂಬೆ ರೈಲು ಮಾರ್ಗದಲ್ಲಿದೆ. ಪೆನ್ನಾರ್ ನದಿ ದಡದಲ್ಲಿರುವ ಈ ಊರಿನಲ್ಲಿ ಅನೇಕ ಪ್ರಸಿದ್ಧ ದೇವಾಲಯಗಳಿವೆ. ಅವುಗಳಲ್ಲಿ ಬುಗ್ಗ ರಾಮಲಿಂಗೇಶ್ವರ ಸ್ವಾಮಿ, ಚಿಂತಲ ತಿರುವೆಂಗಟನಾಥ ಸ್ವಾಮಿ ಗುಡಿಗಳು ಮುಖ್ಯ. ಇವುಗಳು ವಿಜಯನಗರದ ಕಾಲದ ಗುಡಿ ಶಿಲ್ಪಗಳು.

## 340. ಪೆನಕೊಂಡ :

ಬೆಂಗಳೂರು-ಗುಂತಕಲ್ಲು ರೈಲುಮಾರ್ಗದಲ್ಲಿ ರೈಲ್ವೆ ನಿಲ್ದಾಣ ಬೆಂಗಳೂರಿನಿಂದ ಬಸ್ಸು ಗಳೂ ಇವೆ. ಇಲ್ಲಿ ಉತ್ತರಾದಿ ಮಠದ ಯತಿಗಳಾದ ವೇದವ್ಯಾಸತೀರ್ಥರ ಬೃಂದಾವನವಿದೆ.

## 341. ಸಂತೇ ಬೆನ್ನೂರು :

ಹಿಂದೂಪುರಕ್ಕೆ ಸಮೀಪವಾಗಿರುವ ಈ ಊರಿನಲ್ಲಿ ಉತ್ತರಾದಿಮಠದ ಸತ್ಯಪಾರಾಯಣರ ಬೃಂದಾವನವಿದೆ.

## 342. ಕದರಿ :

ಅನಂತಪುರ ಜಿಲ್ಲೆ. ಹಿಂದೂಪುರದಿಂದ 75 ಕಿ.ಮಿ. ಅನಂತಪುರದಿಂದ 92 ಕಿ.ಮಿ. ಬಸ್ಸುಗಳ ಸೌಕರ್ಯ ಚೆನ್ನಾಗಿದೆ. ಇದನ್ನು ಖಾದ್ರಿ ಎಂತಲೂ ಕರೆಯುವರು. ಇದೊಂದು

ಪ್ರಾಚೀನ ಕ್ಷೇತ್ರ. ಇದರ ಬಗ್ಗೆ ವೇದವ್ಯಾಸದೇವರಿಂದ ರಚಿತವಾದ ಬ್ರಹ್ಮಾಂಡ ಪುರಾಣದಲ್ಲಿ ವರ್ಣನೆ ಇದೆ. ಇಲ್ಲಿ ಪ್ರಸಿದ್ಧವಾದ ಲಕ್ಷ್ಮೀನರಸಿಂಹಸ್ವಾಮಿ ಇದ್ದಾರೆ. ಇವರನ್ನು ಖಾದ್ರಿಶ ಎನ್ನುವರು. ಈ ಕ್ಷೇತ್ರದಲ್ಲಿ 6 ತೀರ್ಥಗಳು (ಅದರಲ್ಲಿ ಬ್ರಗುತೀರ್ಥ) ಮತ್ತು ಅರ್ಜುನ ನದಿಯೂ ಇವೆ. ಈ ಕ್ಷೇತ್ರದಲ್ಲಿ ಈ ದೇವರಲ್ಲದೇ ಭೂದೇವಿ ಸಮೇತ ಶ್ರೀವಸಂತ ವಲ್ಲಭ ಸ್ವಾಮಿಯ ಸನ್ನಿಧಿ ಇದೆ. ಶ್ರೀ ರಾಘವೇಂದ್ರಸ್ವಾಮಿಗಳ ಬೃಂದಾವನವೂ ಇರುವುದು. ಈ ಕ್ಷೇತ್ರದ ಪರಿಸರ ಸುಂದರವಾಗಿದ್ದು ಇಲ್ಲಿನ ಪ್ರದೇಶದಲ್ಲಿ ಕದಳಿ ಹಾಗೂ ತೆಂಗಿನ ತೋಟಗಳು ಕಂಗೊಳಿಸುತ್ತಿವೆ. ಶ್ರೀ ವಿಜಯದಾಸರು ತಮ್ಮ ಸುಳಾದಿಯಲ್ಲಿ ಇಡೀ ಕ್ಷೇತ್ರದ ಹಾಗೂ ಕ್ಷೇತ್ರ ದೇವತೆಗಳ ವರ್ಣನೆ ಮಾಡಿರುವರು.

## 343. ರಾಜವಳ್ಳಿ :

ಮಹಬೂಬ್‌ನಗರ ಜಿಲ್ಲೆ, ಗದ್ವಾಲ್ ಸಮೀಪ. ರಾಯರ ಮಠದ ಭುವನೇಂದ್ರ ತೀರ್ಥರ ಬೃಂದಾವನವಿದೆ.

## 344. ಉತ್ತನೂರು :

ರಾಯಚೂರಿನಿಂದ 35 ಕಿ.ಮಿ. ಮಹಬೂಬ್‌ನಗರ ಜಿಲ್ಲೆ, ಇದು ಗದ್ವಾಲ್ ಸಂಸ್ಥಾನಕ್ಕೆ ಸೇರಿದ ಸ್ಥಳ. ಇಲ್ಲಿ ಗೋಪಾಲದಾಸರು ವಾಸಿಸುತ್ತಿದ್ದ ಮನೆ ಇದೆ. ಆ ಮನೆಯಲ್ಲಿ ಅವರು ಇಟ್ಟುಕೊಂಡಿದ್ದ ತಂಬೂರಿ, ವಿಜಯದಾಸರಿಂದ ಲಬ್ಧವಾದ ವಿಠಲಪ್ರತಿಮಾ ಇದೆ. ದೇವರ ಪೆಟ್ಟಿಗೆಗಳಿರುವ ಭಾಗ ಅಲ್ಲಿ ದೇವರ ಮನೆ ಎನಿಸಿದೆ. ದಾಸರ ಅಸ್ತಿಗಳಿರುವ ಭೂಮಿಯೊಂದು ಸಹ ಇಲ್ಲಿದೆ. ಉತ್ತ ಊರಿನ ವೆಂಕಟೇಶ್ವರದೇವಾಲಯದಲ್ಲಿ ಇಂದಿಗೂ ದಾಸರು ಹಾಡಿದ ಮಂಗಳ ಹಾಡುತ್ತಲೇ ಆರತಿ ಎತ್ತುತ್ತಾರೆ. ಗೋಪಾಲದಾಸರು ಸದಾ ಕಸ, ಕಡ್ಡಿಗಳನ್ನು ತೆಗೆದು ಶುದ್ಧಿಮಾಡುತ್ತಿದ್ದ ವೆಂಕಟರಮಣನ ಗುಡಿ ಇದೆ. ಇಲ್ಲಿಯೇ ಗೋಪಾಲ ದಾಸರು ಚಿತ್ರಭಾನು ಸಂವತ್ಸರ ಪುಷ್ಯ ಬಹುಳ ಅಷ್ಟಮಿ ಶನಿವಾರ ಹರಿಪದ ಸೇರಿದ್ದು.

## 345. ಕೋಲಪುರ :

ಮಹಬೂಬ್‌ನಗರಕ್ಕೆ ಹೋಗುವ ದಾರಿ. ಮಟಕಲ್ ಸಮೀಪ. ಉತ್ತರಾದಿಮಠದ ಯತಿಗಳಾದ ಸತ್ಯ ಪೂರ್ಣರ ಬೃಂದಾವನವಿದೆ.

## 346. ಸಂಕಾಪುರ :

ಗೋಪಾಲದಾಸರು, ತಾಯಿ ವೆಂಕಮ್ಮರೊಡನೆ ಅನಾಥರಾಗಿ ಮೊಸರು ಕಲ್ಲನ್ನು ಬಿಟ್ಟು ಒಮ್ಮೆ ಗದ್ವಾಲ್ ಸಂಸ್ಥಾನದ ಸಂಕಾಪುರದಲ್ಲಿನ ಮಾರುತಿ ಗುಡಿಯಲ್ಲಿ ಆಶ್ರಯಪಡೆದಿದ್ದರು. ಅವರ ಆಶ್ರಯಕ್ಕೆ ಒಬ್ಬ ರೈತ ಸ್ವಲ್ಪ ಭತ್ತದ ಗದ್ದೆಯನ್ನು ನೀಡಿದ್ದ. ಚೆನ್ನಾಗಿ ಬೆಳೆ ಬಂದು ಬೆಳೆ ಮನೆಗೆ ಬರುವ ವೇಳೆಗೆ ಊರಿನ ಕುಲಕರ್ಣಿ ಸರ್ಕಾರದ ಕೆರೆಯನೀರನ್ನು ಉಪಯೋಗಿಸಿ

ಕೊಂಡರು ಎಂಬ ಕಾರಣಕ್ಕಾಗಿ ದಂಡ ಹಾಕಿದ. ದಂಡಕೊಡದಿದ್ದಾಗ ಅವರ ಭತ್ತವನ್ನೆಲ್ಲಾ ವಶಪಡಿಸಿಕೊಂಡ. ಗೋಪಾಲದಾಸರಿಗೆ ಬಲು ಕಷ್ಟಕೊಟ್ಟ. ಆಗ ಗೋಪಾಲದಾಸರು "ಕುಲಕರ್ಣಿಗೆ ಸಂತಾನವೇ ಬೇಡ, ಕುಲಕರ್ಣಿ ಕೆರೆಗೆ ನೀರು ಬರುವುದೇ ಬೇಡ" ಎಂದು ಶಪಿಸಿದ ಪ್ರಭಾವದಿಂದ ಇಂದಿಗೂ ಈ ಕೆರೆಗೆ ನೀರಿಲ್ಲದೆ ಇದೆ. ಕುಲಕರ್ಣಿಗೆ ಸಂತಾನವಿಲ್ಲ ದಂತಾಗಿದೆ.

## 347. ದರೂರು :

ರಾಯಚೂರು - ಗದ್ವಾಲ್ ರಸ್ತೆ, ರಾಯಚೂರಿನಿಂದ 47 ಕಿ.ಮಿ., ಗದ್ವಾಲ್‌ಗೆ 8 ಕಿ.ಮಿ.

ಇದು ಮೊದಲಕಲ್ಲು ಶೇಷದಾಸರ ಜನ್ಮಸ್ಥಳ. ಮತ್ತು ಪಾವನ ಕ್ಷೇತ್ರ. ಇವರು ಅರ್ಜುನಾಂಶರೆಂದು ಹೇಳುವರು. ವೃತ್ತಿಯಲ್ಲಿ ಕುಲಕರ್ಣಿಗಳು, ಗದ್ವಾಲ್ ರಾಜ ಸೋಮ ಭೂಪಾಲ ಇವರಿಗೆ ಕಿರುಕುಳ ಕೊಟ್ಟಾಗ ಅದನ್ನು ತಾಳಲಾರದೆ ವೃತ್ತಿಗೆ ಸಲಾಮು ಹೊಡೆದು ಚಿಂತಲರೇವು ಎಂಬಲ್ಲಿಗೆ ಬಂದು ಅಲ್ಲಿ ವ್ಯಾಸರಾಯರಿಂದ ಪ್ರತಿಷ್ಠಿತವಾದ ಮಾರುತಿ ಗುಡಿ ಯಲ್ಲಿ ಇರಹತ್ತಿದರು. ಅವರ ಉಗ್ರತಪಸ್ಸಿನಿಂದ ಮತ್ತು ಅಖಂಡ ವ್ರತೋಪಾಸನೆಯಿಂದ ಪ್ರಾಣದೇವರು ಇವರಿಗೆ ಪ್ರತ್ಯಕ್ಷರಾದರು. ನಂತರ ಕೆಲ ಕಾಲ ಚೀಕಲಪರವಿ, ಚಕ್ರತೀರ್ಥ, ನವ ಬೃಂದಾವನ, ಮೊದಲ ಕಲ್ಲು, ಈ ಸ್ಥಳಗಳಿಗೆ ಯಾತ್ರೆ ಮಾಡಿದರು. ಹೋದೆಡೆಯೆಲ್ಲಾ 'ಗುರು ವಿಜಯವಿಠಲ' ಅಂಕಿತದಲ್ಲಿ ದೇವರನಾಮಗಳನ್ನು ರಚಿಸಿ ಹಾಡಿದರು. ಕೆಲ ಕಾಲ ಮೊದಲಕಲ್ಲಿನಲ್ಲಿದ್ದು ಅಲ್ಲಿನ ಶಿವದೇವಾಲಯದಲ್ಲಿ ತಪಸ್ಸನ್ನಾಚರಿಸಿದರು. ಇವರು ತಮ್ಮ ಜನ್ಮಸ್ಥಳವಾದ ದರೂರಿನಲ್ಲಿ ಶ್ರೀ ಪಾರ್ಥಸಾರಥಿಯ ಭವ್ಯ ಮೂರ್ತಿಯನ್ನು ಪ್ರತಿಷ್ಠಿಸಿ ದೇವಾಲಯ ನಿರ್ಮಾಣ ಮಾಡಿದರು. ನಂತರ ಗದ್ವಾಲಿನಲ್ಲಿ ವೈಶಾಖ ಶುದ್ಧ ದಶಮಿ ಹರಿಪದ ರಾದರು. ಅವರ ದೇಹ ಸಂಸ್ಕಾರ ಮಾಡಿದ ಸ್ಥಳದಲ್ಲಿ ಒಂದು ಬೃಂದಾವನ ಕಟ್ಟೆ ರಚಿತವಾಗಿದೆ. ಇದನ್ನು ಶೇಷದಾಸರ ಕಟ್ಟೆ ಎನ್ನುವರು. ಅವರ ಪುಣ್ಯತಿಥಿ, ರಥೋತ್ಸವ ಬಹಳ ವೈಭವದಿಂದ ಅಲ್ಲಿ ವರ್ಷೆ ವರ್ಷೆ ನಡೆಯುವುದು.

## 348. ಪುಷ್ಪಗಿರಿ :

ಇದು ಕಡಪಾ ಜಿಲ್ಲೆಯಲ್ಲಿದ್ದು, ಕಡಪಾಗೆ ಬಹಳ ಹತ್ತಿರವಿದೆ. ಇದು ಪೆನ್ನಾರ್ ನದಿ ಮೇಲಿನ ಪುಣ್ಯಸ್ಥಳ. ಪುಷ್ಪಗಿರಿ ಎಂಬ ಹೆಸರೇ ಸೂಚಿಸುವಂತೆ ಇದು ಹೂವಿನ ಬೆಟ್ಟ ಎಂಬ ಅರ್ಥಕೊಡುವುದು. ವೈಷ್ಣವರಿಗೂ, ಶೈವರಿಗೂ ಇದು ಪ್ರಸಿದ್ಧ ಯಾತ್ರಾಸ್ಥಳ. ವೈಷ್ಣವರಿಗೆ ಇದು ಮಧ್ಯ ತಿರುಪತಿ ಏಕೆಂದರೆ ಇದು ತಿರುಪತಿಗೂ ಅಹೋಬಲಕ್ಕೂ ಮಧ್ಯೆ ಇದೆ. ಇದು ಮಧ್ಯಕೈಲಾಸ ಏಕೆಂದರೆ ಇದು ಕಾಶಿಗೂ ಚಿದಂಬರಕ್ಕೂ ಮಧ್ಯೆ ಇರುವುದು.

## 349. ವಿಜಯವಾಡ :

ಬೆಂಗಳೂರಿನಿಂದ 633 ಕಿ.ಮಿ. ಕೃಷ್ಣಾ ಜಿಲ್ಲೆ. ಕೃಷ್ಣಾತೀರದ ಒಂದು ಪವಿತ್ರ ಕ್ಷೇತ್ರ. ಇಲ್ಲಿ ಕೃಷ್ಣಾ ನದಿಯ ಸ್ನಾನ ಅತಿಪವಿತ್ರ. ಇಲ್ಲಿಯ ಬಳಿಯ ಗುಡ್ಡದ ಮೇಲೆ ಕನಕದುರ್ಗ ದೇವಾಲಯವಿದೆ.

ಮಂಗಳಗಿರಿ : ವಿಜಯವಾಡ ಗುಂಟೂರು ಮಧ್ಯೆ ಇರುವ ಕ್ಷೇತ್ರ. ವಿಜಯವಾಡದಿಂದ 12 ಕಿ. ಮಿ. ಇಲ್ಲಿನ ಮಂಗಳಗಿರಿಯ ಮೇಲೆ ಪಾನಕ ನರಸಿಂಹ ಸ್ವಾಮಿ ಗುಡಿ ಇದೆ. ಮುಖವಾಡವಿಟ್ಟ, ದೊಡ್ಡದಾಗಿ ಬಾಯಿ ತೆರೆದ ಸ್ವಾಮಿಗೆ ಪಾನಕವೇ ನೈವೇದ್ಯ. ಪಾನಕ ಸಮರ್ಪಿಸಿದಾಗ ½ ಭಾಗ ದೇವರು ಸೇವಿಸುತ್ತಾನೆ. ಸೇವಿಸುವಾಗ ಕುಡಿಯುತ್ತಿರುವ ಶಬ್ದ ಕೇಳಿಸುವುದು.

## 350. ರಾಜಮಹೇಂದ್ರಿ :

ಬೆಂಗಳೂರಿನಿಂದ 820 ಕಿ.ಮಿ. ಕಾಕಿನಾಡದಿಂದ 54 ಕಿ.ಮಿ. ಗೋದಾವರಿ ತಟದಲ್ಲಿರುವ ಪುಣ್ಯ ಸ್ಥಳ. ಗೋದಾವರಿ ಸ್ನಾನ ಇಲ್ಲಿ ಪುಣ್ಯಪ್ರದ. ಇಲ್ಲಿ ಉತ್ತರಾದಿಮಠದ ಯತಿಗಳಾದ ಸತ್ಯಜ್ಞಾನತೀರ್ಥರ ಬೃಂದಾವನ ದರ್ಶನ ಮಹತ್ತುಳ್ಳ ಪುಣ್ಯಕಾರ್ಯ, ಇವರು ಮಹಾ ತಪಸ್ವಿಗಳು. ಇವರು ಮಳಖೇಡದ ಜಯತೀರ್ಥರ ಸೇವೆ ಮಾಡಿ ಅನೇಕ ದಿವಸಗಳ ಪರ್ಯಂತ ಪ್ರತಿನಿತ್ಯ 12000 ಪ್ರಣವ ಮಂತ್ರ ಮತ್ತು 72 ಮಹಾಮಂತ್ರಗಳನ್ನು ಜಪಿಸುತ್ತಾ ವೈರಾಗ್ಯ ನಿಧಿಗಳೆನಿಸಿದ್ದರು. ಇಲ್ಲಿ ಸತ್ಯಾಧೀಶರ ಬೃಂದಾವನವೂ ಇದೆ.

## 351. ದಕ್ಷಾರಾಮ :

ರಾಜಮಹೇಂದ್ರಿ, ಕಾಕಿನಾಡಗಳಿಂದ ಬಸ್ಸು. ರಾಮಚಂದ್ರಪುರಂನಿಂದ ಆಗ್ನೇಯಕ್ಕೆ 8 ಕಿ.ಮಿ. ಇದಕ್ಕೆ ಮೊದಲು ದಕ್ಷ ತಪೋವನ, ದಕ್ಷವಾಟಿಕೆ ಎಂಬ ಹೆಸರುಗಳಿದ್ದವು. ವ್ಯಾಸ ಮಹರ್ಷಿಗಳು ಇಲ್ಲಿ ಲಿಂಗಸ್ಥಾಪನೆ ಮಾಡಿದರೆಂದು ಹೇಳುವರು. ದಕ್ಷ ತನ್ನ ಕುತ್ತಿಗೆಯ ಸುತ್ತ ಹಾಕಿದ್ದ ಒಡವೆಯ ಚೂರು ಇಲ್ಲಿ ಬಿತ್ತೆಂದು ಹೇಳುವರು. ಈ ದೇವರಿಗೆ ಭೀಮೇಶ್ವರನೆಂಬ ಹೆಸರಿದೆ.

## 352. ಅಣ್ಣಾವರಂ :

ಪ್ರತಿಪಾಡು ಮೂಲಕ ಬಸ್ಸು. ಇಲ್ಲಿ ಅತಿ ಪವಿತ್ರವಾದ ಸತ್ಯನಾರಾಯಣ ಸ್ವಾಮಿ ದೇವಾಲಯವಿದೆ.

## 353. ಭದ್ರಾಚಲ :

ಸಿಂಹಾಚಲಂನಿಂದ ವಾಲ್ಟೇರ್ ಮೂಲಕ ರಾಜ ಮಹೇಂದ್ರಿ. ಇಲ್ಲಿಂದ ದೋಣಿಗಳ ಮೂಲಕ ಗೋದಾವರಿ ನದಿಯಲ್ಲಿ ಪ್ರಯಾಣಿಸಬಹುದು. ರಾಜಮಹೇಂದ್ರಿಯಿಂದ 100

ಕಿ. ಮಿ. ಕೊತ್ತಗುಡಂಗೆ ಹತ್ತಿರ. ವಿಜಯವಾಡದಿಂದ ಡೊರ್ನಕಲ್ ಮುಖಾಂತರ ಭದ್ರಾಚಲಂ ರೋಡ್. ಈ ರೈಲ್ವೆ ಮಾರ್ಗದಲ್ಲಿದೆ.

ಗೋದಾವರಿ ನದಿದಡದಲ್ಲಿರುವ ಪುಣ್ಯ ಕ್ಷೇತ್ರ. ಇಲ್ಲಿ ಕಾಡಿನ ನಡುವೆ ಭದ್ರಾಚಲ ಪರ್ವತವಿದೆ. ಅದರ ಮೇಲಿನ ಕೋಟೆಯಲ್ಲಿ ರಾಮದೇವರ ದೇವಾಲಯವಿದೆ. ಇಲ್ಲಿ ದೇವರು ಆಸೀನರೂಪದಲ್ಲಿದ್ದಾರೆ. ಎರಡು ಕೈಗಳಲ್ಲಿ ಬಿಲ್ಲು ಬಾಣ, ಮತ್ತೆರಡರಲ್ಲಿ ಶಂಖ, ಚಕ್ರ ಹಿಡಿದಿದ್ದಾರೆ. ಗೋಲ್ಕೊಂಡ ನವಾಬನ ಕೋಶಾಧಿಕಾರಿಯಾಗಿದ್ದ ಮಂಚೆರ್ಲ ಗೋಪಣ್ಣ ಎಂಬ ರಾಮಭಕ್ತನೂ ವಾಗ್ಗೇಯಕಾರನೂ ಈ ಕ್ಷೇತ್ರದ ಪ್ರಸಿದ್ಧಿಗೆ ಕಾರಣನು. ಇವನನ್ನು ಭದ್ರಾಚಲ ರಾಮದಾಸನೆಂದು ವ್ಯವಹರಿಸುತ್ತಾರೆ. ಗೋಲ್ಕೊಂಡ ಮುಸ್ಲಿಂ ದೊರೆಗಳ ಕಾಲದಲ್ಲಿ ತನ್ನ ಅಧಿಕಾರ ದುರುಪಯೋಗ ಮಾಡಿ ಸರ್ಕಾರದ ಹಣವನ್ನು ತನ್ನ ಆರಾಧ್ಯ ದೇವತೆಯಾದ ಭದ್ರಾಚಲದ ಶ್ರೀರಾಮ ದೇವಾಲಯದ ಜೀರ್ಣೋದ್ಧಾರಕ್ಕೆ ಬಳಸಿ ತತ್ಕಾರಣ ಗೋಲ್ಕೊಂಡ ಕೋಟೆಯಲ್ಲಿ ಸೆರೆಮನೆ ಸೇರಿದ್ದ ತನ್ನ ಅಚಲ ಭಕ್ತಿಯಿಂದ ಶ್ರೀ ರಾಮನನ್ನು ಪ್ರತ್ಯಕ್ಷ ಮಾಡಿಕೊಂಡ. ಶ್ರೀರಾಮನನ್ನು ಕುರಿತು ಅನೇಕ ಕೃತಿಗಳನ್ನು ರಚಿಸಿ ಹಾಡಿದ. ಇಲ್ಲಿನ ರಾಮದೇವರ ಕಲ್ಯಾಣ ಮಂಟಪದಲ್ಲಿ ರಾಮ ಪಟ್ಟಾಭಿಷೇಕದ ಸುಂದರ ಶಿಲ್ಪವಿದೆ.

## 354. ಸಿಂಹಾಚಲ :

ಬೆಂಗಳೂರು 1025 ಕಿ.ಮಿ. ವಿಶಾಖಪಟ್ಟಣಕ್ಕೆ ತೀರ ಸಮೀಪದ ಸ್ಥಳ. ಹತ್ತಿರದ ರೈಲ್ವೆ ನಿಲ್ದಾಣ ಸಿಂಹಾಚಲ. ಇದು ಸೌತ್, ಈಸ್ಟರ್ನ್ ರೈಲ್ವೆಯ ಮಾರ್ಗದಲ್ಲಿ ಸಿಂಹಾಚಲ ಕ್ಷೇತ್ರಕ್ಕೆ 8 ಕಿ.ಮಿ. ಇದೆ. ಸಿಂಹಾಚಲಕ್ಕೆ ವಿಶಾಖಪಟ್ಟಣಕ್ಕೆ ಬಸ್ಸುಗಳ ಓಡಾಟವಿದೆ. ಬೆಟ್ಟದ ಮೇಲೂ ಹೋಗಲು ಸುಗಮರಸ್ತೆ ಇದೆ. ಇದು ಹಿಂದಿನ ವಿಜಯನಗರಂ ಜಮೀನುದಾರರಿಗೆ ಸೇರಿದ ಸ್ಥಳ. 800 ಅಡಿ ಎತ್ತರವಿರುವ ಕೈಲಾಸ ಕಣಿವೆಯಲ್ಲಿ ಈ ದೇವಾಲಯವಿರುವುದು. ಇದು 7 ಶತಮಾನಕಾಲದ್ದು. ಇದು ಹಂಪೆಯ ದೇವಾಲಯವನ್ನು ಅನೇಕ ಅಂಶಗಳಲ್ಲಿ ಹೋಲುತ್ತದೆ. ಈ ಸ್ಥಳ ಸುಂದರವಾದ ಕಾಡು, ಹತ್ತಲು ಮೆಟ್ಟಿಲುಗಳು, ಮೇಲೇರುವ ರಸ್ತೆ ಇವುಗಳಿಂದ ಸುಂದರ ಪರಿಸರ ಹೊಂದಿದೆ. ಇಲ್ಲಿರುವ ದೇವರು ವರಹಾಲಕ್ಷ್ಮಿ-ನರಸಿಂಹಸ್ವಾಮಿ. ಪುರಾಣ ವಿವರಿಸುವಂತೆ ಹಿರಣ್ಯಕಶಿಪುವಿನ ಮಗ ಪ್ರಹ್ಲಾದ ವಿಷ್ಣುಭಕ್ತಿಯನ್ನು ಏನು ಮಾಡಿದರೂ ಬಿಡದಿದ್ದಾಗ ಅವನನ್ನು ಸಮುದ್ರಕ್ಕೆ ತಳ್ಳಿ ಅವನ ತಲೆಯ ಮೇಲೆ ಅವನ ತಂದೆ ಹಿರಣ್ಯಕಶಿಪು ಈ ಗುಡ್ಡವನ್ನು ಇಟ್ಟನಂತೆ. ಆಗ ನರಸಿಂಹದೇವರು ಪಕ್ಕದಲ್ಲಿ ಬಂದು ಈ ಗುಡ್ಡವನ್ನು ಓರೆಯಾಗಿ ತಳ್ಳಿದನಂತೆ. ಆಗ ಪ್ರಹ್ಲಾದನ ತಲೆಯಮೇಲಿನ ಭಾರ ತಪ್ಪಿ ಅವನು ಬದುಕಿ ಬಂದನಂತೆ. ಆಮೇಲೆ ಪ್ರಹ್ಲಾದ ಈ ಗುಡಿಯನ್ನು ಕಟ್ಟಿಸಿದನೆಂದು ಹೇಳುತ್ತಾರೆ. ಹಿರಣ್ಯಕಶಿಪುವಿನ ಸಂಹಾರದ ನಂತರ ದೇವರ ಕೋಪ ಅಡಗಿದ್ದು ಶ್ರೀಗಂಧದ ಮುದ್ದೆಯಿಂದ ಮೆತ್ತಿದ್ದರಿಂದಲೇ ಎಂದು ಹೇಳುವರು. ದೇವರನ್ನು ವರ್ಷದ ಎಲ್ಲಾ ದಿನಗಳಲ್ಲೂ ಶ್ರೀ ಗಂಧದ ಮುದ್ದೆಯಿಂದ ಮೆತ್ತಿ ಅದನ್ನು ಪ್ರತಿವರ್ಷ ವೈಶಾಖ ಶುಕ್ಲ ತೃತೀಯಾ ದಿನದಂದು ಹಳೆಯದನ್ನು ನಿರ್ಮಲಗೊಳಿಸಿ ಹೊಸ ಗಂಧವನ್ನು ಪುನಃ ಮೆತ್ತುತ್ತಾರೆ.

ಹಿರಣ್ಯಕಶಿಪುವನ್ನು ಕೊಂದಮೇಲೂ ಕೋಪ ಅಡಗದ ಕಾರಣ ದೇವತೆಗಳಿಗಾಗಿ ಶಿವ ಶರಭನ ರೂಪತಾಳಿ ನರಸಿಂಹನ ಕೋಪವನ್ನು ಶಾಂತಗೊಳಿಸಿದನಂತೆ. ದೇವಾಲಯ ಪೂರ್ವ ಚಾಲುಕ್ಯರ ಶಿಲ್ಪಕಲೆಯ ಶೈಲಿಯಲ್ಲಿ ರಚಿತವಾಗಿದೆ. ಇಲ್ಲಿ ಕೆಲವು ರೋಗಪರಿಹಾರಕವಾದ ಬುಗ್ಗೆಗಳಿವೆ ಮತ್ತು ಜಲಪಾತವಿದೆ.

## 355. ಶ್ರೀ ಕಾಕುಲಂ :

ಶ್ರೀ ಕಾಕುಲಂ ಜಿಲ್ಲೆ, ವಿಶಾಖಪಟ್ಟಣದಿಂದ 108 ಕಿ.ಮಿ. ಆಂಧ್ರ ಪ್ರದೇಶದ ಕಡೆಯ ರೈಲು ನಿಲ್ದಾಣ ಶ್ರೀಕಾಕುಲಂ. ಇದನ್ನು ಅರಸವಲ್ಲಿ ಎಂದು ಕರೆಯುವರು. ಇಲ್ಲಿ ಸೂರ್ಯ ಭಗವಾನನ ಸುಂದರವಾದ ಹಾಗೂ ಬೃಹತ್ತಾದ ಮಂದಿರವಿದೆ. ಸಪ್ತಾಶ್ವಗಳನ್ನು ಹೂಡಿರುವ ದಿವ್ಯವಾದ ರಥದಲ್ಲಿ ಸೂರ್ಯನಾರಾಯಣ ವಿರಾಜಮಾನವಾಗಿದ್ದಾನೆ. ಇದೊಂದು ಜನಪ್ರಿಯ ಯಾತ್ರಾಸ್ಥಳ. ರಥೋತ್ಸವ, ಜಾತ್ರೆಗಳು ಇಲ್ಲಿ ನಡೆಯುತ್ತವೆ. ಯಾತ್ರಿಕರು ಬಹು ಸಂಖ್ಯೆಯಲ್ಲಿ ಈ ದೇವಾಲಯವನ್ನು ಸಂದರ್ಶಿಸುತ್ತಾರೆ. ಯಾತ್ರಿಕರಿಗಾಗಿ ಒಂದೆರಡು ಛತ್ರಗಳಿದ್ದು, ಅದರಲ್ಲಿ ತಿರುಮಲ - ತಿರುಪತಿ ದೇವಾಲಯದ ಛತ್ರವೂ ಒಂದು.

## 356. ಗಿರಿಯಂ ಪೇಟ :

ರಾಯರ ಮಠದ ಸುಗುಣೇಂದ್ರರ ಬೃಂದಾವನ ಸ್ಥಳ.

## 357. ರಾಯ ವೇಲೂರು :

ಸತ್ಯಾಧಿರಾಜ ತೀರ್ಥರ, ವಿದ್ಯಾಪತಿ ತೀರ್ಥರ ಬೃಂದಾವನವಿದೆ.

# ಮಹಾರಾಷ್ಟ್ರ ರಾಜ್ಯ

## 358. ಪಂಡರಾಪುರ :

ಶೋಲಾಪುರದಿಂದ 60 ಕಿ.ಮಿ. ಬಿಜಾಪುರದಿಂದ ಸೋಲ್ಲಾಪುರ ಮಾರ್ಗವಾಗಿ 141 ಕಿ.ಮಿ., ವಿಷ್ಣುವು ಪ್ರತ್ಯಕ್ಷನಾಗಿ ಅನುಗ್ರಹ ನೀಡಿದ ಮೂರು ಕ್ಷೇತ್ರಗಳೆಂದರೆ, ತಿರುಪತಿ ಉಡುಪಿ, ಹಾಗೂ ಪಂಡರಾಪುರ. ಶ್ರೀ ವಿಷ್ಣು ತಿರುಪತಿಯಲ್ಲಿ ವೇದಬ್ರಹ್ಮನಾಗಿ, ಉಡುಪಿಯಲ್ಲಿ ಅನ್ನಬ್ರಹ್ಮನಾಗಿ, ಹಾಗೂ ಪಂಡರಾಪುರದಲ್ಲಿ ನಾದಬ್ರಹ್ಮನಾಗಿ ಅವತರಿಸಿದ. ಪಂಡರಾಪುರವನ್ನು ಪಂಡರಿಗೆ ಎನ್ನುವರು. ಪಂಡರಗಿ ಎನ್ನುವುದು ಶುದ್ಧ ಕನ್ನಡ ಪದ. ಇಂದು ಮಹಾರಾಷ್ಟ್ರದ ಭಾಗವಾಗಿ ಪಂಡರಾಪುರವು ಇದ್ದರೂ ಅದು ಕರ್ನಾಟಕದ ವ್ಯಾಪ್ತಿ ಯಲ್ಲಿ ಇತ್ತೆಂಬುದಕ್ಕೆ ಅನೇಕ ಆಧಾರಗಳಿವೆ. ಕಾನಾಡ ವಿಠಲ "ತುಕಾನಾಡಿ, ತುಜೆ ಭಾಷಾ ಕಾನಡಿ" ಎಂಬ ಮಾತು ಬಹುಕಾಲದಿಂದ ಮಹಾರಾಷ್ಟ್ರೀಯರಲ್ಲೇ ಪ್ರಚಲಿತವಾಗಿದೆ. ಮಹಾರಾಷ್ಟ್ರೀಯರಿಗೆ ವಿಠೋಬನಾದರೆ ಹರಿದಾಸರ ಪಾಲಿಗೆ ಇವನು ವಿಠಲ. ಪದ್ಮಪುರಾಣ ದಲ್ಲಿ ಪಾಂಡುರಂಗನ ಮಹಾತ್ಮೆ ಹೇಳಿದೆ. ಮಹಾವಿಷ್ಣುವಿನ ಮೋಹನ ರೂಪಕ್ಕೆ ಮರುಳಾದ ಶಶಿದೇವಿಯು ಭೂಲೋಕದಲ್ಲಿ ರಾಧೆಯಾಗಿ ಅವತರಿಸಿದಳು. ರಾಧಾಕೃಷ್ಣರ ಪ್ರಣಯವನ್ನು ನೋಡಿದ ರುಕ್ಮಿಣಿಯು ಕೃಷ್ಣನನ್ನು ತನ್ನವನ್ನಾಗಿ ಮಾಡಿಕೊಳ್ಳಲು ತಪಸ್ಸಿಗೆ ಕುಳಿತಳು. ಕೃಷ್ಣನು ಅವಳನ್ನು ಮತ್ತೆ ಪಡೆಯಲು ಕೈಗಳನ್ನು ಸೊಂಟದ ಮೇಲೆ ಇರಿಸಿಕೊಂಡ. ತನ್ನ ಭಕ್ತಿಯಿಂದ ಪುಂಡಲೀಕನು ಅವರಿಬ್ಬರನ್ನೂ ಒಲಿಸಿಕೊಂಡು ಪಂಡರಪುರದಲ್ಲಿ ನಿಲ್ಲಿಸಿದ. ಇದರಂತೆಯೇ ಮತ್ತೊಂದು ಕಥೆಯಲ್ಲಿ ವಿಷ್ಣುವಿನ ಮೇಲೆ ಲಕ್ಷ್ಮಿಯು ಕೋಪಿಸಿ ಕೊಂಡು ಮಹಾಲಕ್ಷ್ಮಿ ಕೊಲ್ಲಾಪುರಕ್ಕೆ ಹೊರಟು ಹೋದಾಗ ಲಕ್ಷ್ಮಿಗಾಗಿ 24 ಯುಗಗಳಿಂದ ಕಟಿಯ ಮೇಲೆ ಕರವಿಟ್ಟು ಕಾಯುತ್ತಾ ನಿಂತಿದ್ದಾನೆ ಎಂಬ ಅಂಶವಿದೆ. ಮತ್ತೊಂದು ಪ್ರಚಲಿತ ಕಥೆ ಯಂತೆ ಪುಂಡಲೀಕನು ತನ್ನ ಮಾತಾಪಿತೃಗಳ ಸೇವೆಯಿಂದ ಹಿಂದಿರುಗಿ ಬರುವವರೆಗೆ ಪುಂಡಲೀಕ ವರದನಾಗಿ ಒಂದು ಇಟ್ಟಿಗೆ ತುಂಡಿನ ಮೇಲೆ ನಿಂತಿದ್ದಾನೆ. ದಿಲ್ಲಿ ಭಾದಶಹನ ಸೆರೆಯಲ್ಲಿದ್ದ ದಾಮಾಜಿ ಪಂಥನೆಂಬ ಭಕ್ತನನ್ನು ಬಂಧನದಿಂದ ಬಿಡಿಸಿಕೊಂಡ ವಿಚಾರವೂ ಅಲ್ಲಲ್ಲಿ ಜನಜನಿತವಾಗಿದೆ.

ಚಾರಿತ್ರಿಕವಾಗಿ ನೋಡುವುದಾದರೆ 15ನೆ ಶತಮಾನದಲ್ಲಿ ಹೊಯ್ಸಳ ವಿಷ್ಣುವರ್ಧನ ಪಂಡಾರಾಕ್ಷೇತ್ರ ನಿರ್ಮಾಣ ಮಾಡಿದ. ಯಾದವ ವಂಶವ ಸೋಮೇಶ್ವರರಾಜ 1237ರಲ್ಲಿ ಪಂಡರಿಗೆ ರಾಜ್ಯವನ್ನು ಗೆದ್ದು ಪುಲಂಜವೆಂಬ ಗ್ರಾಮದ (ಪಂಡರಾಪುರಕ್ಕೆ 8 ಕಿ.ಮಿ.)

ಉತ್ಪತ್ತಿಯ ಭಾಗವನ್ನು ಕೊಟ್ಟನು. ದೇವಗಿರಿಯ ರಾಜರ ಕಾಲದಲ್ಲಿ ಈ ದೇವಸ್ಥಾನ ಮತ್ತಷ್ಟು ವಿಸ್ತಾರವಾಯಿತು. ಆದರೆ ಅದು ಮಹಮದ್ ಬಿನ್ ತೊಗಲಕ್‌ನ ಧಾಳಿಯಿಂದ ನಾಶವಾದಾಗ ವಿಜಯನಗರದ ರಾಮರಾಯನು ವಿಠಲವಿಗ್ರಹವನ್ನು ತನ್ನ ರಾಜಧಾನಿ ಯಲ್ಲಿಟ್ಟು ಕೊಂಡಿದ್ದನು. ವಿಜಯನಗರ ನಾಶವಾದ ಕಾಲದಲ್ಲಿ ಪುನಃ ಭಾನುದಾಸನೆಂಬ ಭಕ್ತನಿಂದ ವಿಠಲಮೂರ್ತಿ ಪಂಡರಾಪುರಕ್ಕೆ ತೆರಳಿತು. ಈ ದೇವಾಲಯದ ಮತ್ತಷ್ಟು ವಿಸ್ತಾರವು ಕಾಲದಿಂದ ಕಾಲಕ್ಕೆ ಮಹಾರಾಷ್ಟ್ರದ ರಾಜರುಗಳಿಂದ ಆಯಿತು.

ಹೀಗಾಗಿ ಇದು ಇಂದಿಗೂ ಪರಮ ವೈಷ್ಣವ ಪುಂಡರೀಕ ಮುನಿಯ ಕ್ಷೇತ್ರ ಪ್ರಮುಖ ಯಾತ್ರಾ ಸ್ಥಳ. ಇಲ್ಲಿನ ನೆಲೆಸಿರುವ ಪಾಂಡುರಂಗ ರಖುಮಾಯಿಯರು ನಾಡಿನ ಭಕ್ತಪಂಥಕ್ಕೆ ಕೇಂದ್ರ ಬಿಂದುವಾಗಿದ್ದಾರೆ. ಪುರಂದರದಾಸರೇ ಮೊದಲಾದ ದಾಸಶ್ರೇಷ್ಠರು ವಿಠಲನ ದರ್ಶನದ ಭಾಗ್ಯ ಪಡೆದು ನೂರಾರು ಕೀರ್ತನೆಗಳನ್ನು ರಚಿಸಿದ್ದಾರೆ. ಹರಿದಾಸರ ಪಂಥಕ್ಕೆ ಪಂಡರಪುರದ ವಿಠಲನೇ ಅಧಿದೈವ. ಅನೇಕ ಸಾಧುಸಂತರ ಆರಾಧ್ಯ ದೇವ ಪಾಂಡುರಂಗ. ಪಂಡರಪುರ ಅವರ ಭಕ್ತಿಕೇಂದ್ರ. ವಾದಿರಾಜರು ಶ್ರೀ ವಿಠಲನ ಭಾವಭಂಗಿಗಳನ್ನು ಅಂಗಾಂಗ ಗಳನ್ನು ಶಾಸ್ತ್ರೋಕ್ತವಾಗಿ, ಸೂಕ್ಷ್ಮವಾಗಿ ತಮ್ಮ ತೀರ್ಥ ಪ್ರಬಂಧದಲ್ಲಿ ಚಿತ್ರಿಸಿದ್ದಾರೆ. ಇಲ್ಲಿ ವಿಠಲಮಂದಿರವಲ್ಲದೇ ರುಕ್ಮಿಣಿ ಮಂದಿರ, ಮತ್ತು ಪುಂಡಲೀಕ ಮಂದಿರಗಳಿವೆ. ಗೋಪಾಲಪುರ, ಪದ್ಮತೀರ್ಥ, ದಿಂಡೀರ ವನ, ವ್ಯಾಸನಾರಾಯಣ ಮಂದಿರ ಇವು ಇತರ ದರ್ಶನೀಯ ಸ್ಥಳಗಳು.

**ದಾಸರ ಕಂಬ :** ಪುರಂದರ ವಿಠಲನ ನಾಮ ಮತ್ತು ಕಂಕಣ ಒಮ್ಮೆ ಕಳೆದು ಹೋದಾಗ ಅದು ಮಾಯವಾಗಿರುವುದನ್ನು ಅರಿತು ಪುರಂದರದಾಸರೇ ಕಾರಣರೆಂದು ಅವರನ್ನು ಶಿಕ್ಷಿಸಲು ದೇವಾಲಯದ ಮುಖ್ಯಸ್ಥರು ಮುಂದಾದಾಗ ನಿಜ ಹೊರಗೆ ಬಂದಿತು. ದೇವರೇ ದಾಸರ ವೇಷದಿಂದ ಅವುಗಳನ್ನು ವೇಶ್ಯೆಗೆ ನೀಡಿದ್ದು ಎಂದು ನಿಜ ತಿಳಿದಾಗ ಪುರಂದರದಾಸರ ಯೋಗ್ಯತೆ ಅರಿವಾಯಿತು. ಅವರ ನೆನಪಿಗಾಗಿ 'ದಾಸರ ಕಂಬ'ವನ್ನು ನೆಟ್ಟಿದ್ದಾರೆ. ಈಗಲೂ ದಾಸರಕಂಬವನ್ನು ಆಲಿಂಗನ ಮಾಡಿದನಂತರ ವಿಠಲನ ದರ್ಶನ ಮಾಡಬೇಕೆಂಬ ಪದ್ಧತಿ ಇದೆ.

**ಯತಿಗಳ ಬೃಂದಾವನಗಳು :** ಈ ಕ್ಷೇತ್ರದ ಭೀಮಾ ನದಿ ತೀರದಲ್ಲಿ ಉತ್ತರಾದಿ ಮಠವಿದೆ. ಇದು ಮಹತ್ವ ಪೂರ್ಣ ಸ್ಥಳ. ಇಲ್ಲಿ ಉತ್ತರಾದಿಮಠದ ಯತಿಗಳಾದ ಮಧ್ವಾ ಚಾರ್ಯರು ಕೆಲಕಾಲ ವಾಸಮಾಡಿದ್ದರು. ಇದೇ ಮಠದಲ್ಲಿ ಸತ್ಯಧ್ಯಾನ ತೀರ್ಥರ ಬೃಂದಾವನ ವಿದೆ. ಇವರು ಅನ್ನ ವಿದ್ಯ, ಧನಾದಿ ದಾನಗಳಲ್ಲಿ ಪ್ರಸಿದ್ಧರಾಗಿದ್ದರು. ಅವರ ಬೃಂದಾವನದ ಆರಾಧನೆಯು ಕಾರ್ತಿಕ ಶುದ್ಧ ಏಕಾದಶಿ ಪಂಡರಪುರದಲ್ಲಿ ಬಲು ವೈಭವದಿಂದ ಜರುಗುವುದು. ಇಲ್ಲಿ ಶ್ರೀ ವೇದನಿಧಿ ತೀರ್ಥರ ಬೃಂದಾವನವೂ ಇರುವುದು.

ಅಕ್ಷೋಭ್ಯ ತೀರ್ಥರು ತಮ್ಮ ಪೂರ್ವಾಶ್ರಮದಲ್ಲಿ ಹಾಗೂ ನಂತರ ಸನ್ಯಾಸಿಯಾದಾಗ ಅನೇಕ ಬಾರಿ ಪಂಡರ ಪುರಕ್ಕೆ ಬಂದಿದ್ದರು. ಅವರ 72 ನೆಯ ವಯಸ್ಸಿನಲ್ಲಿ ತಮ್ಮ ಉತ್ತರಾಧಿ ಕಾರಿಯನ್ನು ಹುಡುಕಲೆತ್ನಿಸುತ್ತಿದ್ದು, ಭೀಮರಥಿಯ ಸಮೀಪದಲ್ಲಿದ್ದ ವಿಷ್ಣುಪಾದ ದೇವಾಲಯದಲ್ಲಿ ಜಪ, ತಪ, ಆಹ್ನಿಕಗಳಲ್ಲಿ ನಿರತರಾಗುತ್ತಿದ್ದರು. ಒಂದು ಬಾರಿ ವಿಠಲನಿಂದ

ಅವರಿಗೆ ಅನುಗ್ರಹ ಶಿಶುವೊಬ್ಬನನ್ನು ಆರಿಸಿಕೊಳ್ಳಲು ಸೂಚಿತವಾಯಿತು. "ಯಾವ ರಾಹುತನೊಬ್ಬ ಕುದುರೆಯ ಮೇಲಿದ್ದುಕೊಂಡೇ ಪಶುವಿನಂತೆ ನದಿಯ ನೀರನ್ನು ಕುಡಿಯುತ್ತಾನೋ ಅವನೇ ನಿಮ್ಮ ಶಿಷ್ಯ" ಎಂಬ ಸೂಚನೆ ಬಂತು. ಅದರಂತೆ ಮಾಡಿದವನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿದರು. ಅವನೇ ಢುಂಢಿರಾಜನ ಮಗ ಧೋಂಡೋರಾಯನೆಂಬುವನು. ಅವರೇ ಮುಂದೆ ಶ್ರೀ ಜಯತೀರ್ಥರು ಎಂಬ ಹೆಸರಿನಿಂದ ಪ್ರಸಿದ್ಧರಾದವರು.

ಸಂಧ್ಯಾವಳಿ : ಇದು ಭೀಮರಥಿಯ ತೀರದಲ್ಲಿರುವ ಒಂದು ಚಿಕ್ಕ ಗ್ರಾಮ. ಇಲ್ಲಿ ಒಂದು ಪುರಾತನವಾದ ಬೆಟ್ಟವಿದೆ. ಅಲ್ಲಿ ಒಂದು ಸಣ್ಣ ದುರ್ಗಾದೇವಿಯ ಗುಡಿ ಇದೆ. ಇದನ್ನು ಸರಸ್ವತಿ ದೇವಾಲಯವೆಂದು ಜನರು ಕರೆಯುತ್ತಿದ್ದರು. ಈ ದೇವಾಲಯದಲ್ಲಿ ಶ್ರೀ ಜಯತೀರ್ಥರು ಶ್ರೀ ಮಧ್ವಾಚಾರ್ಯರ ಸರ್ವಮೂಲ ಗ್ರಂಥಗಳಿಗೆ ಯಥಾರ್ಥವೂ ಸರಳವೂ ಆದ ವ್ಯಾಖ್ಯಾನವನ್ನು ಬರೆಯಲು ತಕ್ಕ ಶಕ್ತಿಯನ್ನು ಕರುಣಿಸೆಂದು ದೇವಿಯನ್ನು ಪ್ರಾರ್ಥಿಸಲು ಉಗ್ರತಪಸ್ಸನ್ನು ಆಚರಿಸಿದ್ದರು. ಜಯತೀರ್ಥರಿಗೆ ದುರ್ಗಾದೇವಿಯು ಇಲ್ಲಿ ಪ್ರತ್ಯಕ್ಷಳಾಗಿ ಪರಿಶೋಧನ ಸಾಧಕವಾದ ಘಂಟಾ ಮತ್ತು ಪೂಗ ಫಲವನ್ನು ಅನುಗ್ರಹಿಸಿದ ಸ್ಥಳ.

## 359. ಮಂಗಳವೇಡೆ :

ಇದು ಪಂಡರಾಪುರಕ್ಕೆ 18 ಕಿ.ಮಿ. ದೂರವಿದೆ. ಇದು ಒಂದು ಕಾಲದಲ್ಲಿ ಕನ್ನಡನಾಡಿನ ಇತಿಹಾಸದಲ್ಲಿ ಪ್ರಸಿದ್ಧವಾದ ಸ್ಥಳವಾಗಿತ್ತು. ಹಿಂದಿನ ಸಾಂಗ್ಲಿ ಸಂಸ್ಥಾನದ ಪ್ರಮುಖ ಪಟ್ಟಣ. ಇದು ಶ್ರೀ ಜಯತೀರ್ಥರ ಪೂರ್ವಾಶ್ರಮದ ಊರು. ಇವರು ದೇಶಪಾಂಡೆ ಮನೆತನಕ್ಕೆ ಸೇರಿದ್ದು, ಪೂರ್ವಾಶ್ರಮದಲ್ಲಿ ದೊಂಡೊರಾಯರೆಂದು ಹೆಸರುಪಡೆದಿದ್ದರು. ಇವರು ವಾಸಿಸುತ್ತಿದ್ದ ಮನೆ, ಮಹಾದ್ವಾರ, ಪಡಸಾಲೆಗಳು ಇನ್ನೂ ಅಲ್ಲಿವೆ. ಇವುಗಳನ್ನು ಯಾತ್ರಿಕರು ದರ್ಶಿಸಬಹುದು.

## 360. ಕೊಲ್ಹಾಪುರ :

ಬೆಳಗಾಂನಿಂದ ನಿಪ್ಪಾಣಿ ಮಾರ್ಗವಾಗಿ 108 ಕಿ.ಮಿ. N. H. 4 ಬಳಿ. ಪುರಾಣ ಪ್ರಸಿದ್ಧವಾದ ಕರವೀರಪುರವೇ ಕೋಲಾಪುರ ಅಥವಾ ಕೊಲ್ಹಾಪುರ. ಹಳೇ ಅರಮನೆಯ ಖಜಾನೆಯ ಹಿಂಭಾಗದಲ್ಲಿ ವಿಶಾಲವಾದ ಮಹಾಲಕ್ಷ್ಮಿಯ ದೇವಾಲಯವನ್ನು ಕಾಣಬಹುದು. ದೇವಾಲಯವು ಕರಿಕಲ್ಲಿನಿಂದ ನಿರ್ಮಿತವಾಗಿರುವುದು. ಸ್ಕಂದ ಪುರಾಣದಲ್ಲಿ ಇದರ ವರ್ಣನೆ ಇದೆ. ವೆಂಕಟೇಶ ಮಹಾತ್ಮೆಯಲ್ಲಿ ಭೃಗುಮಹರ್ಷಿಯು ತ್ರಿಮೂರ್ತಿಗಳಲ್ಲಿ ಉತ್ತಮರು ಯಾರೆಂದು ನಿರ್ಧರಿಸಲು ಶ್ರೀಮನ್ನಾರಾಯಣನ ವಕ್ಷಸ್ಥಳವನ್ನು ಕಾಲಿನಿಂದ ಒದೆಯಲು ಶ್ರೀಮನ್ನಾರಾಯಣನ ವಕ್ಷಸ್ಥಳ ನಿವಾಸಿಯಾದ ಲಕ್ಷ್ಮಿಯು ಕುಪಿತಳಾಗಿ ವೈಕುಂಠದಿಂದ ಹೊರಟು ಕೊಲ್ಹಾಪುರಕ್ಕೆ ಬಂದು ನೆಲೆಸಿದಳು ಎಂದು ವರ್ಣಿತವಾಗಿದೆ. ವಾದಿರಾಜರು ಇಂತಹ ಮಹಾಲಕ್ಷ್ಮಿಯನ್ನು 2 ಶ್ಲೋಕಗಳಲ್ಲಿ ವರ್ಣಿಸಿದ್ದಾರೆ. ಕೊಲ್ಹಾಪುರದ ಸುತ್ತಲೂ ಅಸಂಖ್ಯಾತ ಕಮಲ ಪುಷ್ಪಗಳು ಬೆಳೆಯುವುದು. ಇದಕ್ಕಾಗಿ ಅವಳನ್ನು ಪದ್ಮಾಲಯ ಎಂಬ

ಹೆಸರಿನಿಂದಲೂ ಕರೆದಿದ್ದಾರೆ. ಜಯತೀರ್ಥರು ದೇಶಸಂಚಾರ ಮಾಡುತ್ತಿದ್ದು ಕೊಲ್ಲಾಪುರಕ್ಕೂ ಭೇಟಿಕೊಟ್ಟಿದ್ದರು. ಅಲ್ಲಿಯ ಪಂಚಗಂಗಾನದಿ ತೀರದಲ್ಲಿ ವಿದ್ಯಾರಣ್ಯರ ಅದ್ವೈತ ಮಠ ಹೊಂದಿತ್ತು. ಅಲ್ಲಿ ವಿದ್ಯಾರಣ್ಯರು ಜಯತೀರ್ಥರನ್ನು ಸಂಧಿಸಿ ಸಿದ್ಧಾಂತವಿಷಯಗಳ ಮೇಲೆ ವಾಕ್ಯಾರ್ಥ ನಡೆಸಿದರು. ಶ್ರೀ ಜಯತೀರ್ಥರಿಗೆ ಜಯವಾಯಿತು. ಆಗ ಪಂಚಗಂಗಾತೀರದ ವಿದ್ಯಾರಣ್ಯಮಠದ ಎದುರಿನಲ್ಲಿ ಸುಮಾರು ನೂರು ಗಜ ದೂರದಲ್ಲಿ ಒಂದು ಸ್ಥಂಭವು ಸ್ಥಾಪಿಸಲ್ಪಟ್ಟಿತು. ಇದೇ ಶ್ರೀ ಜಯತೀರ್ಥರ ಜಯಸ್ಥಂಭ.

## 361. ಸಾಂಗ್ಲಿ :

ಕೊಲ್ಲಾಪುರದಿಂದ 51ಕಿ.ಮಿ. ಉತ್ತರಾದಿಮಠದ ಶ್ರೀಸತ್ಯವ್ರತತೀರ್ಥರ ಬೃಂದಾವನವಿದೆ. ಫಾಲ್ಗುಣ ಶುದ್ಧ ಷಷ್ಠಿ ಇವರ ಆರಾಧನೆ.

## 362. ಪುಣೆ :

ಬೆಂಗಳೂರಿನಿಂದ 840 ಕಿ.ಮಿ. ಶ್ರೀ ವರದೇಂದ್ರರ ಬೃಂದಾವನ ಸ್ಥಳವಾಗಿದೆ.

## 363. ಪುರಂದರ ಗಢ :

ಪೂನ ನಗರಕ್ಕೆ 18 ಕಿ.ಮಿ. ಇದು ಪುರಂದರ ದಾಸರ ಜನ್ಮಸ್ಥಳವಾಗಿತ್ತೆಂದು ನಂಬಲಾಗಿದೆ.

## ಇತರ :

**1. ನಾಸಿಕ :** ಇದನ್ನು ಪಶ್ಚಿಮ ದಿಕ್ಕಿನ ವಾರಣಾಸಿ ಎನ್ನುವರು. ಇಲ್ಲಿ ಸುಂದರ ನಾರಾಯಣ ದೇವಲಾಯವಿದೆ. ಸೀತಾ ಗುಂಫ ಎಂಬ ಸ್ಥಳದಲ್ಲಿ 5 ಆಲದ ಮರದ ಗುಂಪೊಂದಿದ್ದು ಆ ಸ್ಥಳದಿಂದ ರಾವಣನು ಸೀತೆಯನ್ನು ಅಪಹರಿಸಿದನಂತೆ. ಕಾಲಾರಾಮ, ಕಪಾಲೀಶ್ವರ, ರಾಮಸ್ನಾನ ಮಾಡಿದ ರಾಮಕುಂಡ ಇವೆ.

**2. ತ್ರಿಯುಂಬಕೇಶ್ವರ :** ನಾಸಿಕದಿಂದ 29 ಕಿ. ಮಿ. ಬಾಲಾಜಿ ಬಾಜೀರಾಯ ನಿರ್ಮಿಸಿದ ದೇವಾಲಯ. ಗೋದಾವರಿ ನದಿಯ ಉಗಮ ಸ್ಥಳ.

# ಒರಿಸ್ಸಾ ರಾಜ್ಯ

## 364. ಶ್ರೀ ಕೂರ್ಮ :

ಬಸ್ಸಿನ ಅನುಕೂಲ ಹೆಚ್ಚಾಗಿಲ್ಲ. ಅಲ್ಲದೆ, ಹಾದಿಯೂ ಅಷ್ಟು ಸುಗಮವಾಗಿಲ್ಲ. ಸ್ವಂತ ವಾಹನ ವ್ಯವಸ್ಥೆಯಿದ್ದರೆ ಅನುಕೂಲ. ಆಂಧ್ರ ಪ್ರದೇಶದ ಕಡೆಯ ರೈಲು ನಿಲ್ದಾಣವಾದ ಶ್ರೀ ಕಾಕುಳಂನಿಂದ ಒಂದೆರಡು ಗಂಟೆ ಪ್ರಯಾಣ ಮಾಡಿದರೆ ಒರಿಸ್ಸಾರಾಜ್ಯವನ್ನು ಪ್ರವೇಶಿಸುತ್ತೇವೆ. ಇದು ಕುಗ್ರಾಮವಾದರೂ ಇಲ್ಲಿಯೇ ಶ್ರೀ ಕೂರ್ಮ ಎಂಬ ಹೆಸರಿನ ಪ್ರಸಿದ್ಧ ದೇವಾಲಯವಿದೆ. ಎಲ್ಲ ದೇವಾಲಯಗಳಂತೆ ಇದು ಶಿಲ್ಪಶಾಸ್ತ್ರಕ್ಕೆ ಅನುಗುಣವಾಗಿ ನಿರ್ಮಿಸಲ್ಪಟ್ಟಿದೆ. ಪ್ರದಕ್ಷಿಣ ಪಥ, ಹಜಾರ, ನವರಂಗ, ಗರ್ಭಗೃಹ, ಇವುಗಳು ಕ್ರಮವಾಗಿ ರಚಿತವಾಗಿವೆ. ಇಲ್ಲಿ ನಯವಾಗಿ ಕೆತ್ತಿದ ಕಂಬಗಳಿವೆ. ಮಂದಿರದ ಎಡಭಾಗದಲ್ಲಿ ಬಹಳ ದೊಡ್ಡದಾದ ಕೂರ್ಮದ ಆಕೃತಿಯನ್ನು ಕಾಣಬಹುದು. ಇಡೀ ಇಂಡಿಯಾದಲ್ಲೇ ಕೂರ್ಮನಿಗಾಗಿ ರಚಿತವಾಗಿರುವ ದೇವಾಲಯ ಇದೊಂದೆ.

ಕೂರ್ಮದ ಆಕೃತಿ ದೊಡ್ಡ ಪ್ರಮಾಣದ್ದು. ಮತ್ತು ಜೀವಂತವಾಗಿರುವಂತೆ ಭಾಸವಾಗುತ್ತದೆ. ಕೂರ್ಮನ ಪಾದಗಳಲ್ಲಿ ಶಂಖ ಚಕ್ರಗಳ ಚಿನ್ಹೆಗಳಿವೆ. ಗರ್ಭಗುಡಿಯಲ್ಲಿ ಕೋದಂಡ ರಾಮ, ಲಕ್ಷ್ಮಣ ಸೀತಾದೇವಿಯರ ಆಳೆತ್ತರದ ವಿಗ್ರಹಗಳಿವೆ. ಪ್ರತಿನಿತ್ಯ ಪೂಜೆ ನಡೆಯುತ್ತದೆ. ಮಂದಿರದ ಗೋಡೆಗಳ ಮೇಲೆ ಶಾಸನಲಿಪಿಯಲ್ಲಿ ದೇವಾಲಯದ ಇತಿಹಾಸವಿದೆ. ಕೆಲವೆಡೆ ನರಹರಿತೀರ್ಥರ ಹೆಸರು ಕಂಡುಬರುತ್ತದೆ. ಇಲ್ಲಿ ಸಿಕ್ಕಿರುವ ಶಾಸನಗಳ ಪ್ರಕಾರ ಶ್ರೀ ನರಹರಿತೀರ್ಥರು ಕೆಲವು ಕಾಲ ಗಜಪತಿ ರಾಜನ ಬಳಿ ಉತ್ತಮ ನೌಕರಿಯ ಸ್ಥಾನದಲ್ಲಿದ್ದು, ನಂತರ ರಾಜ ಅಕಾಲಮರಣಕ್ಕೆ ತುತ್ತಾಗಿ, ರಾಣಿ ಇನ್ನೂ ಗರ್ಭವತಿಯಾಗಿದ್ದಾಗ ರಾಜ್ಯಕ್ಕಾಗಿ ಕಲಹವುಂಟಾದಾಗ ರಾಜಗದ್ದುಗೆ ಏರಿ 12 ವರ್ಷ ರಾಜ್ಯನಿರ್ವಹಣೆ ಮಾಡಿದರು. ಮತ್ತು ಶ್ರೀಕೂರ್ಮ ದೇವಾಲಯವನ್ನು ಕಟ್ಟಿಸಿ ದೇವರ ದೀಪಾರಾಧನೆಗೆ ಗದ್ದೆ ತೋಟಗಳನ್ನು ದಾನ ಮಾಡಿದರು ಎಂದು ತಿಳಿದುಬರುತ್ತದೆ. ಈ ಕ್ಷೇತ್ರವನ್ನೂ ತಲುಪಿ ದೇವರ ದರ್ಶನ ಮಾಡಲು ಕಷ್ಟವಾದರೂ ಶ್ರೀನರಹರಿತೀರ್ಥರಿಂದ ನಿರ್ಮಾಣಗೊಂಡ ಈ ವೈಷ್ಣವ ಸಂಪ್ರದಾಯದ ಕ್ಷೇತ್ರ ಎಂದು ಅರಿತಾಗ ಪ್ರಯಾಣಿಸಿದ ಕಷ್ಟ ದೂರವಾಗುವುದು.

## 365. ಜಗನ್ನಾಥ ಪುರಿ :

ಜಗನ್ನಾಥ ಪುರಿಯು ಒರಿಸ್ಸಾದಲ್ಲಿ ಸಮುದ್ರ ದಡವನ್ನು ಹೊಂದಿದ ಸ್ಥಳ. ಇದು ಭುವನೇಶ್ವರದಿಂದ 63 ಕಿ. ಮಿ. ದೂರವಿದೆ. ಇದು ಭಾರತದ ನಾಲ್ಕು ಪುಣ್ಯಧಾಮಗಳಲ್ಲಿ ಒಂದು ಎಂದು ಪರಿಗಣಿಸಲ್ಪಟ್ಟಿದೆ(ಬದರಿ, ಕೇದಾರನಾಥ, ರಾಮೇಶ್ವರ, ದ್ವಾರಕ ಇತರ ಸ್ಥಳಗಳು). ಇಲ್ಲಿನ ದೇವಾಲಯದ ಮುಖ್ಯ ಮೂರ್ತಿಗಳೆಂದರೆ ಜಗನ್ನಾಥ, ಬಲಭದ್ರ ಮತ್ತು ಸುಭದ್ರ. ಇವರಿರುವ ದೇವಾಲಯಕ್ಕೆ ಸ್ವರ್ಗಧಾಮವೆಂದು ಹೆಸರುಂಟು. ಪ್ರತಿವರ್ಷ ಆಷಾಢ ಶುಕ್ಲ ತೃತೀಯ ಅತಿ ಬೃಹತ್ತಾದ ಮೂರು ರಥಗಳಲ್ಲಿ ಈ ದೇವರ ಯಾತ್ರೆ ನಡೆಯುವುದು (ರಥಯಾತ್ರೆ). ದೇಶವಿದೇಶಗಳಿಂದ ಲಕ್ಷಾಂತರ ಮಂದಿ ಈ ಉತ್ಸವದಲ್ಲಿ ಪಾಲುಗೊಳ್ಳುವರು. ಜಗನ್ನಾಥಪುರಿ ಅತಿ ಪವಿತ್ರವಾದ ಸ್ಥಳವೆಂದು ಪರಿಗಣಿಸಲ್ಪಟ್ಟು ಇಲ್ಲಿ ಮರಣಹೊಂದುವುದೂ ಮೋಕ್ಷದಾಯಕ ಎಂಬ ನಂಬಿಕೆ ಇದೆ.

ಉತ್ತರಾದಿ ಮಠದ ಶ್ರೀ ಜಯತೀರ್ಥರಿಂದ ಆಶ್ರಮ ಪಡೆದು 24 ವರ್ಷಗಳು ಪೀಠದಲ್ಲಿ ವಿರಾಜಿಸಿದವರು ಶ್ರೀವಿದ್ಯಾಧಿರಾಜರು. ಶ್ರೀ ಮಧ್ವಾಚಾರ್ಯರ ಅನಂತರ ವಿಂಧ್ಯ ಪರ್ವತದ ಉತ್ತರಕ್ಕೆ ಹೋಗಿ, ಉತ್ತರ ಭಾರತದಲ್ಲಿ ಮಧ್ವ ಸಿದ್ಧಾಂತ ಪ್ರಚಾರ ಮಾಡಿದ ಮಹಾಮಹಿಮ ಯತಿಗಳಲ್ಲಿ ಇವರೊಬ್ಬರು. ಇವರ ಬೃಂದಾವನವು ಇಲ್ಲಿಯ ಮಾಧ್ವ ಗೌಡೀಯ ಮಠದಲ್ಲಿ ಇದ್ದಿತೆಂದು ಹೇಳುವರು. ಈಗ ಅಲ್ಲಿ ಇವರ ಬೃಂದಾವನ ಇಲ್ಲ. ಅವರು ಯರಗೊಳದಲ್ಲಿ ಬೃಂದಾವನಸ್ಥರಾದರು ಎಂಬ ಮಾತೂ ಇದೆ.

## 366. ಸಾಕ್ಷಿ ಗೋಪಾಲ :

ಇದು ಪುರಿಯಿಂದ 17 ಕಿ. ಮಿ. ಇಲ್ಲಿ ಬಾಲಕೃಷ್ಣ ಅಥವಾ ಬಾಲ ಗೋಪಾಲನ ಪೂರ್ಣ ಪ್ರಮಾಣದ ಪ್ರತಿಮೆ ಇರುವ ದೇವಾಲಯವಿದೆ.

# ಗ್ರಂಥಋಣ


1. *ಅಕ್ಷೋಭ್ಯತೀರ್ಥ ಸಂಸ್ಥಾನ, ಬಾಳಿಗಾರು ಮತ್ತು ಕೂಡ್ಲಿ ಮಠಗಳು* — ಕಸಗಾರು ಮಾಧವರಾವ್
2. *ಶ್ರೀ ಸಂಪುಟ ನರಸಿಂಹಸ್ವಾಮಿ* — ಸುಬ್ರಹ್ಮಣ್ಯ ಮಠ
3. *ಬ್ರಹ್ಮಣ್ಯ ತೀರ್ಥರು ಮತ್ತು ಶ್ರೀ ಶ್ರೀಪಾದರಾಜರು* — ಜಿ. ಹೆಚ್. ಬಿ. ಆಚಾರ್ಯ
4. *ಮೋತಂಪಲ್ಲಿ ಮಹಾತ್ಮೆ* — ಚಿಕ್ಕೆರೂರು ಗೋವಿಂದಾಚಾರ್ಯ
5. *ಸತ್ಯಸಂಧ ವಿಜಯ* — ಶ್ರೀ ಕಂಚಿ ಕೃಷ್ಣಾಚಾರ್ಯರು
6. *ರಘೋತ್ತಮ ತೀರ್ಥ ಚರಿತಾಮೃತ* — ಆಚಾರ್ಯ ಪ್ರಹ್ಲಾದ ರಾಮಾಚಾರ್ಯ ನಾಗರಹಳ್ಳಿ
7. *ಉಡುಪಿ ಕ್ಷೇತ್ರ ಪರಿಚಯ* — ಶ್ರೀ ಕೃಷ್ಣಾಪುರ ಮಠ
8. *ಕ್ಷೇತ್ರ ದರ್ಶನ* — ಶ್ರೀ ಎಸ್. ಕೆ. ರಾಮಚಂದ್ರರಾವ್
9. *ಮಧ್ವ ವಿಜಯ* — ಪಂಡಿತ ನಾರಾಯಣಾಚಾರ್ಯ
10. *ತೀರ್ಥ ಪ್ರಬಂಧ* — ವ್ಯಾಸನಕೆರೆ ಪ್ರಭಂಜನಾಚಾರ್ಯ
11. *Temples of Tamilnad* — ಆರ್. ಕೆ. ದಾಸ್, ಭಾರತೀಯ ವಿದ್ಯಾಭವನ
12. *ಅಕ್ಷೋಭ್ಯ ತೀರ್ಥ ಶ್ರೀಪಾದಂಗಳವರ ಚರಿತ್ರೆ* — ಕೂಡಲಿ ಅಕ್ಷೋಭ್ಯತೀರ್ಥ ಶ್ರೀ ಪಾದಂಗಳವರಾದ ಶ್ರೀ ರಘುವೀರ ತೀರ್ಥರು
13. *ಮಾಧ್ವ ಮಠಗಳು* — ಡಾ॥ ಕೃಷ್ಣಕೊಲ್ಹಾರ ಕುಲಕರ್ಣಿ
14. *ತಿಮ್ಮಪ್ಪನ ಯಾತ್ರೆಗೊಂದು ಕೈಪಿಡಿ* — ಆದ್ಯ ರಾಮಾಚಾರ್ಯರು
15. *ಶ್ರೀ ಹರಿಭಕ್ತ ವಿಜಯ* — ಶ್ರೀ ಖಗವರಧ್ವಜ ದಾಸರು
16. *ಕರ್ನಾಟಕ - ಕನ್ನಡ ವಿಷಯ ವಿಶ್ವಕೋಶ* — ಕನ್ನಡ ಅಧ್ಯಯನ ಸಂಸ್ಥೆ
17. *ದಕ್ಷಿಣದ ಸಿರಿನಾಡು* — ಕೆ. ಅನಂತರಾಮು, ಅನಂತ ಪ್ರಕಾಶನ, ಮೈಸೂರು
18. *ನಿತ್ಯಸುಧಾ, ಶ್ರೀ ಸುಧಾ, ತತ್ವವಾದದ ಹಳೇ ಮಾಸಪತ್ರಿಕೆಗಳು, ಸಪ್ತಗಿರಿ, ತಿರುಪತಿ ತಿರುಮಲ ದೇವಸ್ಥಾನದ ಮಾಸಪತ್ರಿಕೆಗಳು ಮತ್ತು ಮಂಜುವಾಣಿ.*
18. *ಸುಧಾ, ಮಯೂರ, ತರಂಗ ಮಾಸಪತ್ರಿಕೆಗಳ ಹಳೆ ಲೇಖನಗಳು*
19. *ಭಾಷಣಗಳು, ಪ್ರವಚನಗಳು, ಹರಿಕಥೆಗಳ ಸಾರ*
20. *ನನ್ನ ತೀರ್ಥಕ್ಷೇತ್ರಗಳ ಸಂದರ್ಶನ ಸಾರ*